# ಒಂದು ಮಾತು

ಆರು ವರ್ಷಗಳ ತರುವಾಯ 'ಚಿತ್ರ - ವಿಚಿತ್ರ' ಕಾದಂಬರಿ ಪುನರ್ಮುದ್ರಣ ಕಾಣುತ್ತಿದೆ. ಅಂದಿಗೆ - ಇಂದಿಗೆ ನಮ್ಮ ರಾಷ್ಟ್ರೀಯ, ಸಾಮಾಜಿಕ, ವೈಯಕ್ತಿಕ ಜೀವನದ ಮೇಲೆ ಸಿನೀಮಾ ಹೆಚ್ಚು ಪ್ರಭಾವ ಬೀರಿರುವುದರಿಂದ, ಈ ಕಾದಂಬರಿಯ ದೃಷ್ಟಿ ಗಣನಾರ್ಹವಾಗಿದೆಯೆಂಬಲ್ಲಿ ಅತಿಶಯೋಕ್ತಿಯಾಗಲಾರದು.

ಈ ಮುದ್ರಣ ಪ್ರಕಟಿಸಿರುವ ವಿದ್ಯಾನಿಧಿ ಪ್ರಕಾಶನದ ಒಡೆಯರಿಗೆ ನನ್ನ ಧನ್ಯವಾದಗಳು ಸಲ್ಲುತ್ತವೆ.

ಬೆಂಗಳೂರು-೪.
೧೯-೭-೧೯೫೮.

ಅ. ನ. ಕೃ.

# ಮುನ್ನುಡಿ

ಭಾರತದಲ್ಲಿ ಸಿನೀಮಾ ಉದ್ಯಮ ಆರಂಭವಾಗಿ ಅರ್ಧ ಶತಮಾನವಾಯಿತು. ಮೂಕಚಿತ್ರಗಳ ಕಾಲದಲ್ಲಿ ದಾದಾ ಫಾಲ್ಕೆಯವರು ಕೆಲವು ಉತ್ತಮ ಚಿತ್ರಗಳನ್ನು ನಿರ್ಮಾಣಮಾಡಿದರು. ಏನೂ ಸಾಧನಸಂಪತ್ತಿಲ್ಲದ ಕಾಲದಲ್ಲಿ ನಿರ್ಮಿತವಾದ ಅವರ ಕೃತಿಗಳು ಇಂದಿನ ಮಾನದಂಡದಿಂದಲೂ ಉತ್ಕೃಷ್ಟವಾಗಿರುವುದು ಒಂದು ಅಚ್ಚರಿಯೇ. ಮೂಕ ಚಿತ್ರಗಳ ಕಾಲ ಮುಗಿದು ವಾಕ್ಚಿತ್ರಗಳ ಕಾಲ ಆರಂಭವಾದಾಗ ಬಂದ ಮೊಟ್ಟ ಮೊದಲನೆಯ ಚಿತ್ರ ಆರ್ದೇಶರ್ ಇರಾಣಿಯವರ 'ಅಲಂ-ಅರಾ.' ಈ ಎರಡು ದಶಕಗಳಲ್ಲಿ ವಾಕ್ಚಿತ್ರ ಬೇಕಾದಷ್ಟು ಬೆಳೆದಿದೆ; ತಂತ್ರದೃಷ್ಟಿಯಿಂದ ಮುನ್ನಡೆದಿದೆ. ನಾಟಕ ಕಲೆಯನ್ನು ಪೂರ್ಣ ಕಬಳಿಸುವಷ್ಟು ವಾಕ್ಚಿತ್ರ ಪ್ರಭಾವಶಾಲಿಯಾಗಿದೆ.

ವಾಕ್ಚಿತ್ರದ ಅಘಾತಕ್ಕೆ ಸಿಕ್ಕಿ ಭಾರತದಲ್ಲಿ ನಾಟಕಕಲೆ ನಾಮಾವಶೇಷವಾಯಿತು. ನಾಟಕಕಲೆಯ ತೌರೂರು ಎನಿಸಿಕೊಂಡ ಇಂಗ್ಲೆಂಡಿನಲ್ಲಿಯೂ-ಷೇಕ್ಸ್‌ಪಿಯರಿನ ಇಂಗ್ಲೆಂಡಿನಲ್ಲಿಯೂ ನಾಟಕಕಲೆ ಹಿಂದಕ್ಕೆ ಬಿತ್ತು. ವಾಕ್ಚಿತ್ರದ ದೈತ್ಯಪ್ರಭಾವದ ವಿರುದ್ಧ ಪ್ರಸಿದ್ಧ ನಾಟಕಕಾರರಾದ ಸೇಂಟ್ ಜಾನ್ ಎರ್ವಿನ್ ಅವರು ೧೯೩೭ ರಲ್ಲಿ 'ಲಂಡನ್ ಮರ್‌ಕ್ಯುರಿ' ಪತ್ರಿಕೆಯಲ್ಲಿ ಧ್ವನಿಯೆತ್ತಿದರು. ಇಂಗ್ಲೆಂಡ್ ಸಕಾಲದಲ್ಲಿ ಎಚ್ಚೆತ್ತು ನಾಟಕಕಲೆಯ ಪುನರುದ್ಧಾರಕ್ಕೆ ಮನಸ್ಸುಗೊಟ್ಟಿತು. ಸರ್ ಸಿಡ್ರಿಕ್ ಹಾರ್ಡವಿಕ್, ಸರ್ ಲಾರೆನ್ಸ್ ಆಲಿವರ್, ಸಿಬಿಲ್ ಥಾರನ್‌ಡೀಕ್, ಅನಾ ನೀಗಲ್, ಒಲಿವಿಯಾ ಡಿ ಹ್ಯಾವಿಲ್ಯಾಂಡ್ ಮೊದಲಾದ ಪ್ರಸಿದ್ಧ ನಟರು ರಂಗಭೂಮಿಗೆ ಮರಳಿ ನಾಟಕಕಲೆಯ ಜೀರ್ಣೋದ್ಧಾರಕ್ಕೆ ಬದ್ಧಕಂಕಣರಾದರು. ವಾಕ್ಚಿತ್ರ ನಾಟಕ ಕಲೆಯನ್ನು ಅಳಿಸಿಬಿಡಲು ರಷ್ಯಾ ಮಾತ್ರ ಸ್ವಲ್ಪವೂ ಅವಕಾಶಕೊಡಲಿಲ್ಲ. ಅಲ್ಲಿ ಇಂದಿಗೂ ವಾಕ್ಚಿತ್ರದ ಜತೆಯಲ್ಲಿಯೇ ನಾಟಕಕಲೆಯೂ ಬೆಳೆಯಿತು.

ವಾಕ್ಚಿತ್ರ ಪ್ರಭಾವಶಾಲಿಯಾಗುವುದಕ್ಕೆ ಮುಂಚೆ ಭಾರತದಲ್ಲಿ ಬಂಗಾಳ, ಕರ್ನಾಟಕ, ಮಹಾರಾಷ್ಟ್ರ, ಆಂಧ್ರ, ತಮಿಳುನಾಡು, ಉರ್ದು ರಂಗಭೂಮಿಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು. ಬಂಗಾಳದಲ್ಲಿ ಸಿ. ರ್

ಬಹದೂರಿ, ಅಹಿರ್ ಚೌಧುರಿ, ಕರ್ನಾಟಕದಲ್ಲಿ ಎ. ವಿ. ವರದಾಚಾರ್ಯರು, ಮಹಮ್ಮದ್ ಪೀರ್, ಸದಾಶಿವರಾವ್ ಗರೂಡ್, ಕೈಲಾಸಂ, ಆಂಧ್ರದಲ್ಲಿ ಟಿ. ರಾಘವಾಚಾರ್ಯ, ತಮಿಳುನಾಡಿನಲ್ಲಿ ಸಂಬಂಧಂ, ಕಿಟ್ಟಪ್ಪ, ನಟರಾಜಾಚಾರಿ, ನಬಾಬ್ ರಾಜಾಮಾಣಿಕ್ಯಂ, ಮಹಾರಾಷ್ಟ್ರದಲ್ಲಿ ಗಣಪತಿರಾವ್ ಕೇಶವರಾವ್ ಭೋಸ್ಲೆ, ಉರ್ದು ರಂಗಭೂಮಿಯಲ್ಲಿ ಸೊಹ್ರಾಬ್ ಮೋದಿ, ಬೆಂಜಾಮಿನ್ ಮೊದಲಾದ ಪ್ರತಿಭಾನ್ವಿತ ನಟರು ವರ್ಧಿಸುತ್ತಿದ್ದ ಕಾಲವದು. ನಾಟಕ ಕಲೆಯ ಅವಸಾನಕ್ಕೆ ಥಿಯೇಟರುಗಳ ಕ್ಷಾಮ, ನಟ ನಟಿಯರು ವಾಕ್ಚಿತ್ರಗಳಿಗೆ ಆಕರ್ಷಿತರಾದುದು, ಜನತೆಯ ಅಭಿರುಚಿಯಲ್ಲಾದ ಮಾರ್ಪಾಟು ಕಾರಣವಾಯಿತು. **ಎಲ್ಲಕ್ಕೂ ಮುಖ್ಯವಾದ ಕಾರಣವೆಂದರೆ ಬಂಡವಾಳಶಾಹಿ ಉದ್ಯಮವಾದ ವಾಕ್ಚಿತ್ರದ ಮುಂದೆ ಶ್ರಮಜೀವಿ ಉದ್ಯಮವಾದ ನಾಟಕಕಲೆ ನಿಲ್ಲಲು ಅಸಮರ್ಥವಾದುದು.** ನಾಟಕಗಳ ಅವಸಾನ, ವಾಕ್ಚಿತ್ರದ ಪ್ರಾದುರ್ಭಾವಕ್ಕೆ ಎರಡು ಮುಖಗಳಿವೆ: ಒಂದು ಆರ್ಥಿಕಮುಖ, ಎರಡು ಅಭಿರುಚಿಯ ಮುಖ.

ನಾಟಕ ಸಂಘದವರು ಲಕ್ಷಾಂತರ ರೂಪಾಯಿಗಳನ್ನು ವ್ಯಯಮಾಡಿ ನಾಟಕ ಸಿದ್ಧಗೊಳಿಸುವುದು ದುಸ್ಸಾಧ್ಯವಾದ ಮಾತು; ವಾಕ್ಚಿತ್ರಗಳಿಗೆ ಆ ಸೌಲಭ್ಯವಿದೆ. ಇದರ ಜತೆಗೆ ವಾಕ್ಚಿತ್ರಗಳಲ್ಲಿ ಜನರಿಗೆ ನಿತ್ಯ ನೂತನ ದೃಶ್ಯಗಳು, ಮುಖಗಳು, ಹಾಡುಗಳು, ನೃತ್ಯಗಳು ಕಾಣಬರುತ್ತಿವೆ. ನಾಟಕಗಳು ಹಳೆಯ ಜಾಡು ಬಿಟ್ಟು ಮುಂದಡಿಯಿಡಲಿಲ್ಲ. ಹಳೆಯ ಸದಾರಮೆ, ಕೃಷ್ಣಲೀಲೆ, ಗುಲೇಬಕಾವಲಿ, ಸೌಭದ್ರ, ಕೃಷ್ಣ ತುಲಾಭಾರ, ನಲ್ಲತಂಗ, ಬಚ್ಚಾಸಖೋ ನಾಟಕಗಳನ್ನು ನೋಡಿ ನೋಡಿ ಜನ ಬೇಸರಗೊಂಡಿದ್ದಾರೆ. ನಾಟಕಗಳ ಅವನತಿಗೆ ಬಂಡವಾಳಗಾರರು ಹೊಣೆಗಾರರಾದಂತೆ ನಾಟಕ ಸಂಘಗಳು ಮಾಲಿಕರು, ನಟರು, ಥಿಯೇಟರ್ ಒಡೆಯರೂ ಕಾರಣಕರ್ತರಾದರು.

ಈ ಪರಿಸ್ಥಿತಿಯನ್ನು ಸುಧಾರಿಸಬೇಕೆಂದು ಪೃಥ್ವಿರಾಜ್, ರಾಂಗ್ನೇಕರ್, ಅಳತೇಕರ್, ಹಿರಣ್ಣಯ್ಯ, ಟಿ. ಕೆ. ಎಸ್. ಸೋದರರು ಪ್ರಯತ್ನಿಸುತ್ತಿದ್ದಾರೆ. ಪೃಥ್ವಿರಾಜರಂಥ ಕಲಾವಿದರಿಗೆ ಮುಂಬಯಿಯಲ್ಲಿ ಒಂದು ನಾಟಕಶಾಲೆಯಿಲ್ಲ. ಸಿನೀಮಾ ಥಿಯೇಟರ್ ಆಗಿರುವ 'ಅಪೆರಾ ಹೌಸ್' ನಲ್ಲಿ ಪೃಥ್ವಿರಾಜರು ಶನಿವಾರ, ಭಾನುವಾರ ಬೆಳಿಗ್ಗೆ ೧೦–೩೦ ರಿಂದ ೧–೩೦ ರ ವರೆಗೆ ತಮ್ಮ ದಿವ್ಯ ಪ್ರದರ್ಶನಗಳನ್ನು ಕೊಟ್ಟು ತೃಪ್ತಿಪಟ್ಟುಕೊಳ್ಳಬೇಕಾಗಿದೆ.

ಕಲಾದೃಷ್ಟಿಯಿಂದ ವಾಕ್ಚಿತ್ರ ನಾಟಕಕ್ಕೆ ಸರಿಗಟ್ಟಿ ನಿಲ್ಲಬಲ್ಲುವೇ? ಒಂದು ಒಳ್ಳೆಯ ನಾಟಕವನ್ನು ಹತ್ತಾರು ಸಲ ನೋಡಬಹುದು. ಎಷ್ಟೇ ಒಳ್ಳೆಯ ವಾಕ್ಚಿತ್ರವನ್ನಾದರೂ ಹತ್ತಾರು ಸಲ ನೋಡಲು ಸಾಧ್ಯವೇ ?

ನಾಟಕದಲ್ಲಿ ನಟ ಕಲಾವಿದ. ರಂಗದ ಮೇಲೆ ಬಂದು ನಿಲ್ಲುವ ಅವನು ರಸಭಾವಗಳ ವ್ಯಾಖ್ಯಾತನಾಗುತ್ತಾನೆ. ಅವನ ವೈಯಕ್ತಿಕ ಪ್ರತಿಭೆ ಗನುಗುಣವಾಗಿ ಪಾತ್ರ ರೂಪತಳೆಯುತ್ತದೆ. ವಾಕ್ಚಿತ್ರದಲ್ಲಿ ಕಲಾವಿದ ಯಂತ್ರಾಧೀನ. ಡೈರೆಕ್ಟರು, ಕ್ಯಾಮರಾಮನ್, ರಿಕಾರ್ಡಿಂಗ್ ಇಂಜನಿಯರ್, ಎಡಿಟರ್ ಇವರ ಸೂತ್ರದ ಗೊಂಬೆ ನಟ. ಏನೂ ಯೋಗ್ಯತೆಯಿಲ್ಲದವನನ್ನು 'ನಕ್ಷತ್ರ' ವಾಗಿ (Star) ಮಾರ್ಪಡಿಸುವ, ಗಣ್ಯ ಕಲಾವಿದನನ್ನು ನಿಷ್ಪ್ರಯೋಜಕನನ್ನಾಗಿ ಮಾಡುವ ವಿಶ್ವಾಮಿತ್ರರು ಇವರು. ಅವರ ಉದ್ಯಮಶೀಲತೆ ಮತ್ತು ಪ್ರಕಟನಶಾಖೆಯ (Publicity department) ಪ್ರಭಾವದಿಂದ ಎಂಥವನು, ಎಂಥವಳು ಬೇಕಾದರೂ ಸುಪ್ರಸಿದ್ಧ ತಾರೆಯರಾಗಿಬಿಡುತ್ತಾರೆ. ಎಂದೋ, ಯಾರೋ ಹೇಳಿದಂತೆ ನಟಿಸಿ ಒಬ್ಬ ವ್ಯಕ್ತಿ ಆಮರಣಪರ್ಯಂತ ಪ್ರಸಿದ್ಧ ಸಿನೀಮಾ ನಟನಾಗಿ ಮೆರೆಯಬಹುದು. ರಂಗದ ಮೇಲೆ ಇದು ಸಾಧ್ಯವಿಲ್ಲ, ರಂಗದ ಮೇಲೆ ನಟ ನಿತ್ಯಪರೀಕ್ಷೆಗೊಳಗಾಗಬೇಕು.

ಸಿನೀಮಾ ಒಂದು ಕಲೆಯೆಂದು ಒಪ್ಪಿಕೊಳ್ಳುವುದು ಸಾಧ್ಯವಿಲ್ಲ. ತಂತ್ರಜ್ಞರ ಕೈಚಳಕದ ಕೌಶಲ್ಯವನ್ನು ನಾವು ಮೆಚ್ಚಬಹುದು. ಆದರೆ ಅದಕ್ಕೆ ಕಲೆಯ ಪಟ್ಟಕಟ್ಟುವುದು ವಿವೇಕದ ಲಕ್ಷಣವಲ್ಲ.

ಪರಂಪರಾಗತವಾಗಿ ಬೆಳೆದು ಬಂದ ಅಭಿನಯ, ಸಂಗೀತ, ನೃತ್ಯಗಳ ಸ್ಥಾನವನ್ನು ಸಿನೀಮಾ ಇಂದು ಆಕ್ರಮಿಸಿಕೊಂಡು ನಮ್ಮ ನಾಡಿನ ನಿಸರ್ಗದತ್ತವಾದ ಕಲಾಮಹತಿಯನ್ನು ತುಳಿಯುತ್ತಿದೆ. ಈ ಪಾಪದ ಹೊಣೆಗಾರಿಕೆ ಜನತೆಯ ಮೇಲೆ ಬಿದ್ದಿರುವಷ್ಟೇ ಸರ್ಕಾರದ ಮೇಲೂ ಬಿದ್ದಿದೆ. ನಾಟಕ ಶಾಲೆ ಕಟ್ಟುವುದಕ್ಕೆ ಇಂದು ನಮ್ಮಲ್ಲಿ ಸ್ಥಳ ದೊರೆಯುವುದಿಲ್ಲ; ಸಿನೀಮಾ ಥಿಯೇಟರ್ ಕಟ್ಟಲು ಯಥೇಚ್ಛವಾಗಿ ಸ್ಥಳ ದೊರೆಯುತ್ತದೆ. ಸಿನೀಮಾ ಆದಾಯದಲ್ಲಿ ಒಂದು ಪಾಲು ಕಂದಾಯಗಳು, ವಿನೋದ ತೆರಿಗೆಯ ಮೂಲಕ ಸರ್ಕಾರಕ್ಕೆ ದೊರೆಯುವುದರಿಂದ ಸರ್ಕಾರ ಈ ಉದ್ಯಮಕ್ಕೆ ಬೇಕಾದ ಪ್ರೋತ್ಸಾಹನೀಡುತ್ತದೆ.

ಸಿನೀಮಾದಿಂದ ಯಾರಿಗೆ ಲಾಭವಾಗಿದೆ? ಸರ್ಕಾರಕ್ಕೆ ಮತ್ತು ಕೆಲವು ಬಂಡವಾಳಗಾರರಿಗೆ. ಸಾಮಾನ್ಯ ಜನತೆಯ ಮೇಲೆ ಸಿನೀಮಾ ಮಾಡಿರುವ ಪರಿಣಾಮವೆಂಥದು ಎಂದು ನಾವು ಪರ್ಯಾಲೋಚಿಸಬೇಕು. ಅದರಲ್ಲಿ

ಒಳ್ಳೆಯ ಸಾಹಿತ್ಯ, ಸಂಸ್ಕೃತಿ, ಸಂಗೀತ, ನೃತ್ಯ ಯಾವವನ್ನು ನಾವು ಕಾಣಬಹುದು? ಭಾರತೀಯ ಸಿನೀಮಾ ನಿರ್ಮಾಪಕರಿಗೆ ಒಳ್ಳೆಯ ಸಾಹಿತಿಗಳ ಕೃತಿಗಳು ಬೇಕಿಲ್ಲ. ಸಂಭಾಷಣೆ ಬರೆಯುವ ಮೂರನೆಯ ದರ್ಜೆಯ ಕೂಲಿಯಾಳಿಗೆ ಅವರೇ ಕಥೆಗಳನ್ನು ಒದಗಿಸುತ್ತಾರೆ. ಆ ಕಥೆಗಳಿಗೆ ಆಧಾರ ಇಂಗ್ಲಿಷ್ ಕಾದಂಬರಿಗಳು, ಅಮೆರಿಕನ್ ಚಿತ್ರಗಳು. ಹಾಲಿವುಡ್ಡಿನಿಂದ ಬರುವ ಚಿತ್ರಗಳ ಕಥೆಗಳನ್ನು ಕದಿಯುವುದು ಮಾತ್ರವಲ್ಲದೆ, ಹಾಲಿವುಡ್ ಚಿತ್ರಗಳನ್ನೇ ಪಡಿಯಚ್ಚು ಇಳಿಸುವ ಶೌರ್ಯವೂ ಅಬಾಧಿತವಾಗಿ ಸಾಗಿದೆ. ಹಾಲಿವುಡ್ ಚಿತ್ರಗಳ ಹೊಲಸು ವಾತಾವರಣ, ಕಳ್ಳರ ದರೋಡೆಕಾರರ ರೀತಿ ನೀತಿಗಳು, ನಗ್ನ ನೃತ್ಯಗಳು, ಅಶ್ಲೀಲ ಶೃಂಗಾರ, ಕಲಬೆರಿಕೆ ಸಂಗೀತ ನಮ್ಮ ಚಿತ್ರಗಳ ಸ್ಫೂರ್ತಿಕೇಂದ್ರಗಳಾಗಿವೆ. (ದೃಷ್ಟಾಂತಕ್ಕೆ ಕಿಸ್ಮತ್, ರತನ್, ಖಿಡ್ಕಿ, ಕಾಳಿಘಟಾ) ಈ ಚಿತ್ರಗಳಲ್ಲಿ ಬರುವ ಸಂಗೀತವೇ ಇಂದು ನಮ್ಮ ಸಂಗೀತ, ಈ ಚಿತ್ರಗಳಲ್ಲಿ ಕಾಣಬರುವ ಸಂಸ್ಕೃತಿ, ಆಚಾರವಿಚಾರಗಳೇ ನಮ್ಮ ಸಂಸ್ಕೃತಿ, ಆಚಾರವಿಚಾರಗಳಾಗಿವೆ ಭಾರತೀಯ ಚಿತ್ರಗಳಲ್ಲಿ ರುಂಬಾ, ಜಾಜ್, ಗೂಸ್‌ಸ್ಟೆಪ್, ಹೂಲಾ ಹೂಲಾ ನೃತ್ಯಗಳನ್ನು ಯಥೇಚ್ಛವಾಗಿ ನೋಡಬಹುದು. ಪೌರಾಣಿಕ ಕಥಾವಸ್ತುವಿನಲ್ಲಿಯೂ ಈ ಹೊಲಸು ತಲೆ ಹಾಕಿರುದನ್ನು ನಾವು ನೋಡಿದ್ದೇವೆ (ದೃಷ್ಟಾಂತಕ್ಕೆ ತಮಿಳಿನ ಋಷ್ಯಶೃಂಗರ್, ನಾರದರ್) ಭಾರತದಲ್ಲಿ ಬರುತ್ತಿರುವ ಸಿನೀಮಾ ಚಿತ್ರಗಳು ಭಾರತದ ಬಗ್ಗೆ ಮಾಡಿರುವಷ್ಟು ಅಪಪ್ರಚಾರವನ್ನು ಮಿಸ್. ಮೇಯೋ, ಬೆವರ್ಲಿ ನಿಕ್ಲಾಸ್, ಜಾನ್ ಬರ್ನ್ನಹಂ, ಬುಲಿಟ್ ಮೊದಲಾದವರು ಕೂಡ ಮಾಡಿಲ್ಲವೆಂದಲ್ಲಿ ಅತಿಶಯೋಕ್ತಿಯಲ್ಲ. ಇದರ ಸಮಸ್ತ ಹೊಣೆಗಾರಿಕೆ ಮಾರವಾಡಿ, ಮುಲ್ತಾನಿ, ಗುಜರಾತಿ, ಚೆಟ್ಟಿಯಾರ್ ಬಂಡವಾಳಗಾರರೆಂಬುದೂ ನಮ್ಮ ಸ್ಮೃತಿಪಥದಲ್ಲಿಟ್ಟಿರಬೇಕು.

ಸಿನೀಮಾಕ್ಕೆ ಇರುವ ಜನಪ್ರಿಯತೆಯನ್ನು ಪ್ರಾಗತಿಕವೂ ಕ್ರಿಯಾಶಾಲಿಯೂ ಆದ ಮಾರ್ಗದಲ್ಲಿ ಉಪಯೋಗಿಸಲು ಸಾಧ್ಯವಿಲ್ಲವೇ? ಪಾಮರ ಶಿಕ್ಷಣಕ್ಕೆ ಸಿನೀಮಾ ಅತ್ಯುತ್ತಮ ಸಾಧನ. ಆಧುನಿಕ ಶಿಕ್ಷಣವೇತ್ತರು ಮಕ್ಕಳ ಶಿಕ್ಷಣಕ್ಕೆ ಚಿತ್ರಮಾರ್ಗ (Pictorial method) ಅಳವಡಿಸಿಕೊಳ್ಳುತ್ತಿದ್ದಾರೆ. ಶಾಲೆಗಳಲ್ಲಿ ಡಾಕ್ಯುಮೆಂಟರಿಗಳನ್ನು, ಶೈಕ್ಷಣಿಕ ಚಿತ್ರ (Educational films) ತೋರಿಸುವ ಪರಿಪಾಠ ಆರಂಭವಾಗಿದೆ. ಸಿನೀಮಾ ಸಾಧನವನ್ನು ಜನತೆಯ ಶಿಕ್ಷಣ ರಂಗದಲ್ಲಿ ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳಬಹುದು. ನಮ್ಮ ದೇಶದ ಹಲವು ಸಮಸ್ಯೆಗಳನ್ನು ಬಿಡಿಸಿ ತೋರಿಸಬಹುದು.

ನಮ್ಮ ಜನರ ನಿರಕ್ಷರತೆಯ ನಿರ್ಮೂಲನಕ್ಕೆ ಸಿನೀಮಾ ಸಾಧನವನ್ನು ಉಪಯೋಗಿಸಿಕೊಳ್ಳಬಹುದು. ಸಿನೀಮಾ ಬಂಡವಾಳಗಾರರ ಕೈಬಿಟ್ಟು ಜನತೆಯ ಶಿಶುವಾದಾಗ ಮಾತ್ರ ಈ ಕೆಲಸ ಸಾಧ್ಯ. ರಷ್ಯಾದಿಂದ ಬಂದ ಪ್ರೊಫೆಸರ್ ಮ್ಯಾಮಲಾಕ್, ಗಾರ್ಕಿಬಾಲ್ಯ, ಷಿ ಡೆಫೆಂಡ್ಸ್ ಹರ್ ಕಂಟ್ರಿ ಲೈವ್ ಕ್ರಾಪ್ಸ್, ಜನರಲ್ ಸುವರಾವ್, ಪೀಟರ್ ದಿ ಗ್ರೇಟ್ ಚಿತ್ರಗಳು ಹೊಸ ಪ್ರಪಂಚವನ್ನು ನಮ್ಮ ಮುಂದೆ ಬಿಚ್ಚಿಟ್ಟಿವೆ. ವಿಹಾರಕ್ಕೆ ಅಡಚಣೆಯೊದಗದಂತೆ ವಿಕಾಸವನ್ನು ಸಾಧಿಸಬಹುದು ಎಂದು ತೋರಿಸಿಕೊಟ್ಟಿವೆ.

ಭಾರತದಲ್ಲಿ ವಾಕ್ಚಿತ್ರ ಉದ್ಯಮ ಲಾಭಕಾರಿಯಾಗಿದ್ದರೂ ಅದರ ನೈತಿಕ. ಕಲಾತ್ಮಕ, ಸಾಂಸ್ಕೃತಿಕ ಮಟ್ಟ ತೀರ ಕೆಳವರ್ಜೆಯಲ್ಲಿದೆ. ಭಾರತ ತನ್ನ ಸಂಸ್ಕೃತಿಗನುಗುಣವಾಗಿ ಚಿತ್ರಗಳನ್ನು ರಚಿಸಿದರೆ ಯಾವ ಸಿದ್ಧಿಯನ್ನು ಪಡೆಯಬಹುದೆನ್ನುವುದಕ್ಕೆ ಪ್ರಭಾತ್ ಕಂಪೆನಿಯವರ ಧ್ಯಾನೇಶ್ವರ, ತುಕಾರಾಮ, ರಾಮಶಾಸ್ತ್ರಿ, ಪಡೋಸಿ, ರಾಮಜೋಶಿ, ಹರಿಶ್ಚಂದ್ರ, ಶಾಂತಾರಾಮರ ಡಾ|| ಕೊಟ್ನಿಸ್, ದಹೇಜ್, ಅಮರ ಭೂಪಾಲಿ, ಪ್ರಕಾಶ್ ಕಂಪೆನಿಯವರ ಭರತಮಿಲಾಪ್. ರಾಮರಾಜ್ಯ, ವಿಕ್ರಮಾದಿತ್ಯ, ಕಿದಾರಶರ್ಮರ ಚಿತ್ರಲೇಖಾ, ಗೌರಿ, ಕಲ್ಲಿಯಾನ್, ನ್ಯೂ ಥಿಯೆಟರ್ಸಿನವರ ದೇವದಾಸ್, ಚಂಡೀದಾಸ್, ಬರಾದೀದಿ, ಕಾಶೀನಾಥ, ಗೃಹದಾಹ, ಪ್ರಗತಿಯವರ ಹರಿಶ್ಚಂದ್ರ, ವಸಂತಸೇನಾ, ಥೈಬರ್ ಅವರ ಉಲ್ಟಿಗಂಗಾ, ಪಾಲ್ ಜಿಲ್ಸ್ ಅವರ 'ಅವರ್ ಇಂಡಿಯಾ' ನಿದರ್ಶನಗಳಾಗಿವೆ. ಆದರೆ ಕೇವಲ ವ್ಯಾಪಾರಕ್ಕಾಗಿ ನಿರ್ಮಾಣವಾಗುವ ಸಾವಿರಾರು ಚಿತ್ರಗಳಲ್ಲಿ ಇವು ಮರೆಯಾಗುತ್ತವೆ.

ಕನ್ನಡ ಚಿತ್ರಗಳಲ್ಲಿ ಉದ್ಯಮಶೀಲತೆಯೂ ಕಂಡು ಬರುತ್ತಿಲ್ಲ. ಸುಸಂಸ್ಕೃತಿಯೂ ಕಂಡು ಬರುತ್ತಿಲ್ಲ. ಕನ್ನಡ ಜನತೆಯಲ್ಲಿ ಕಲಾಭಿರುಚಿಯಿದ್ದರೂ ಅದನ್ನು ಉಪಯೋಗಿಸಿಕೊಳ್ಳಬಲ್ಲ ನಿರ್ಮಾಪಕರಿಲ್ಲದಿರುವುದು ಒಂದು ಕಾರಣ. ನಿರ್ಮಾಪಕರು ಕೋಮುವಾರ ಅಧಿವ್ಯಾಧಿಗೆ ತುತ್ತಾಗಿ ತಮ್ಮ ಸಮಾಧಿಯನ್ನು ತಾವೇ ಕಟ್ಟಿಕೊಳ್ಳುತ್ತಿರುವುದೂ ಒಂದು ಕಾರಣ. ಹೊರಗಿನ ಮೋಹಕ್ಕೆ ಪಕ್ಕಾಗಿ ಕನ್ನಡಿಗರು ಕನ್ನಡಿಗರನ್ನೇ ತುಳಿಯುತ್ತಿರುವುದೂ ಒಂದು ಕಾರಣ.

ಸಿನೀಮಾ ನಾಟಕ, ಸಂಗೀತ, ನೃತ್ಯಗಳ ಮಟ್ಟದಲ್ಲಿ ನಿಲ್ಲುವ ಕಲೆಯಾಗಿದ್ದರೂ ಅದರ ಸಾರ್ವತ್ರಿಕ ಸ್ವರೂಪವನ್ನು ಜನತೆಯ ಉಚ್ಛ್ರಾಯಕ್ಕೆ ಉಪಯೋಗಿಸಿಕೊಳ್ಳಬಹುದು. ಆ ರೀತಿ ಉಪಯೋಗಿಸಿಕೊಳ್ಳುವ ಸಾಮರ್ಥ್ಯ ನಮ್ಮ ನಿರ್ಮಾಪಕರಲ್ಲಿ, ಸರ್ಕಾರದಲ್ಲಿ, ಸಾರ್ವಜನಿಕ ಮುಖಂಡರಲ್ಲಿ ಇಲ್ಲ.

ಇಂದು ಜನತೆಯ ಮೇಲೆ ಸಿನೀಮಾ ಮಾಡುತ್ತಿರುವ ದುಷ್ಪರಿಣಾಮ ಮತ್ತೆ ಯಾವದೂ ಮಾಡುತ್ತಿಲ್ಲ. ನಮ್ಮ ಜನತೆಯ ದೃಷ್ಟಿ, ಅಭಿರುಚಿ, ನಾಗರಿಕತೆ ಸಿನೀಮಾ ಸಂಸ್ಕೃತಿಯ ಪಡಿಯಚ್ಚಾಗುತ್ತಿದೆ. ತೀರ ಕೆಳವರ್ಗದ ಹೆಣ್ಣುಮಕ್ಕಳು ಪ್ರತಿನಿತ್ಯ ಹೊಲಸು ಚಿತ್ರಗಳನ್ನು ನೋಡುವುದೂ, ೩-೩೦ ಗಂಟೆಗೆ ಆರಂಭವಾಗುವ ಚಿತ್ರಕ್ಕೆ ೧೨-೩೦ ರಿಂದಲೇ ಕ್ಯೂ ನಿಲ್ಲುವುದೂ ನಿತ್ಯ ನೋಟ. ಕಾಲೇಜ್ ಹೈಸ್ಕೂಲುಗಳಲ್ಲಿ ಓದುವ ವಿದ್ಯಾರ್ಥಿ ವಿದ್ಯಾರ್ಥಿನಿಯರು ಓದುವುದು ಸಿನೀಮಾ ಪತ್ರಿಕೆಗಳು, ನೋಡುವುದು ಸಿನಿಮಾ, ಚರ್ಚೆ ಮಾಡುವುದು ಸಿನೀಮಾ ನಾಯಕ ನಾಯಕಿಯರ ಗುಣ, ರೂಪ, ವಯಸ್ಸು. ಅಶೋಕ ಕುಮಾರನಿಂದಲೋ ನರ್ಗೀಸಳಿಂದಲೋ ಒಂದು ಪತ್ರವೋ ಭಾವ ಚಿತ್ರವೋ ಬಂದು ಬಿಟ್ಟರೆ ನಮ್ಮ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ನೋಬೆಲ್ ಪಾರಿತೋಷಕ ಸಿಕ್ಕಿದಷ್ಟು ಸಂತೋಷವಾಗುತ್ತದೆ. ಸಿನೀಮಾ ನಟಿಯರು ಬಂದಾಗ ನಮ್ಮ ವಿದ್ಯಾರ್ಥಿ ವಿದ್ಯಾರ್ಥಿನಿಯರು ತೋರುವ ಮನೋಭಾವ, ನಡತೆ ಯಾರಿಗೂ ಗೌರವ ತರುವುದಿಲ್ಲ (ದೃಷ್ಟಾಂತಕ್ಕೆ ಶಾಂತಾ ಆಪ್ಟೆ, ಸಾಧನಾ ಬೋಸ್, ಜಯಶ್ರೀ ಬಂದಾಗ ನಡೆದ ಪ್ರಸಂಗಗಳು) ನಮ ಜೀವನ ಎಷ್ಟು ಕೃತಕವಾಗುತ್ತಿದೆ, ನಮ್ಮ ಆಶೋತ್ತರಗಳು ಎಷ್ಟು ಅಲ್ಪ ವಾಗುತ್ತಿವೆ, ನಮ್ಮ ನಾಗರಿಕತೆ ಎಷ್ಟು ತುಚ್ಛವಾಗುತ್ತಿದೆ!

ಸಿನೀಮಾಗಳ ಹಾವಳಿ ಇಷ್ಟು ಪ್ರಬಲವಾಗುವುದಕ್ಕೆ ನಮ್ಮ ಪತ್ರಿಕೆಗಳ ಜವಾಬ್ದಾರಿ ಎಷ್ಟರ ಮಟ್ಟಿನದು ಎಂದು ವಿಚಾರ ಮಾಡಬೇಕು. ಕನ್ನಡ ನಾಡಿನಲ್ಲಿ ಪತ್ರಿಕಾ ಪ್ರಪಂಚ ಜನ್ಮ ತಳೆದು ಸುಮಾರು ನಾಲ್ಕು ದಶಕಗಳಾ ದವು. ನಲವತ್ತು ವರ್ಷಗಳ ದೀರ್ಘಾವಧಿಯಲ್ಲಿ ಕನ್ನಡ ಪತ್ರಿಕೆಗಳು ಜನ ಮತವನ್ನು ರೂಪಿಸುವ ಸಾಮರ್ಥ್ಯವನ್ನು ದೊರಕಿಸಿಕೊಳ್ಳಬೇಕಾಗಿತ್ತು.

ಸಿನೀಮಾ ಹಂಚಿಕೆಗಾರರ (Distributors) ಜಾಹೀರಾತುಗಳ ಹಿಡಿತದಿಂದ ಪತ್ರಿಕೆಗಳು ಬಿಡುಗಡೆಯಾಗುವವರೆಗೆ ಚಿತ್ರಗಳ ಬಗ್ಗೆ ನಿಷ್ಪಕ್ಷ ಪಾತ ವಿಮರ್ಶೆ ಬರುವುದು ಸಾಧ್ಯವೇ ಇಲ್ಲ. ನಮ್ಮ ಪತ್ರಿಕೆಗಳಿಗೆ 'ಕಲಾ ವಿಮರ್ಶಕ'ರಿರುವುದಿಲ್ಲ. ಹಂಚಿಕೆಗಾರರೇ ಬರೆಸಿಕೊಡುವ (Write-up) ಲೇಖನಗಳನ್ನು ಅವರು ಕೊಡುವ ಪಡಿಯಚ್ಚುಗಳೊಂದಿಗೆ ಪ್ರಕಟಮಾಡ ಬೇಕಾಗುತ್ತದೆ.

ರಜತ ಫಲಕದ ಮೇಲೆ ಬರುವ ಚಿತ್ರಗಳನ್ನು ನೋಡಿ, ಸಿನೀಮಾ ನಟಿಯರು ಸುರಸುಂದರಿಯರೆಂದೂ, ಗುಣ ಶೀಲಗಳ ಆದರ್ಶ ವ್ಯಕ್ತಿಗಳೆಂದು ಭಾವಿಸಿ ಭ್ರಾಂತರಾಗುವ ನಮ್ಮ ಜನರ ಸಲುವಾಗಿ ಈ 'ಚಿತ್ರ ವಿಚಿತ್ರ'

ಬರೆದಿದ್ದೇನೆ. ನಾನು ಈ ಕಾದಂಬರಿಯಲ್ಲಿ ಕೊಟ್ಟಿರುವ ಚಿತ್ರದಲ್ಲಿ ಎಳ್ಳಷ್ಟೂ ಉತ್ಪ್ರೇಕ್ಷೆಯಿಲ್ಲ. ಸಿನೀಮಾ ಪ್ರಪಂಚದ ಕಾರ್ಯಕಲಾಪಗಳ ಬಗ್ಗೆ ನನಗೆ ಗೊತ್ತಿರುವ ವಿಷಯಗಳನ್ನೆಲ್ಲಾ ನಿರೂಪಿಸಬೇಕಾದರೆ ಇಂಥ ಇನ್ನು ೫-೬ ಕಾದಂಬರಿಗಳನ್ನು ಬರೆಯಬೇಕಾಗುತ್ತದೆ. ಸಿನೀಮಾ ನೋಡುತ್ತಿರುವ ಹಾವಳಿಯನ್ನು–ನಾಡಿನಲ್ಲಿ ತಂದೊಡ್ಡುತ್ತಿರುವ ಆರ್ಥಿಕ ಅಭದ್ರತೆಯನ್ನು–ಸಾಧಿಸುತ್ತಿರುವ ಮಾನಸಿಕ ಪತನವನ್ನು ಸ್ಮರಿಸಿಕೊಂಡರೆ ಭಾರತ ಸರ್ಕಾರ ಕೆಲವು ವರ್ಷವಾದರೂ ಸಿನೀಮಾ ಮಂದಿರಗಳನ್ನು ಮುಚ್ಚಿಸಿ, ಅವುಗಳನ್ನು ಶಿಕ್ಷಣ ಸಂಸ್ಥೆಗಳಿಗೆ ಏಕೆ ಒಪ್ಪಿಸಬಾರದು ಎಂಬ ಯೋಚನೆ ನನಗೆ ಬರುತ್ತದೆ. ನಮ್ಮ ರಾಷ್ಟ್ರಪ್ರಗತಿಗೆ ಇಂದು ನಮಗೆ ದಕ್ಷರಾದ ವೈದ್ಯರು, ಇಂಜನಿಯರುಗಳು, ಆಡಳಿತಗಾರರು, ವಿಜ್ಞಾನಿಗಳು, ಕಲಾವಿದರು ಬೇಕಾಗಿದ್ದಾರೆ. ಕಟ್ಟಡದ ಅನುಕೂಲವಿಲ್ಲವೆಂದು ವೈಜ್ಞಾನಿಕ ಶಾಲೆಗಳನ್ನು ತೆರೆಯಲು ಹಿಂಜರಿಯುತ್ತಿರುವ ಸರ್ಕಾರ ಸಿನೀಮಾ ಕಟ್ಟಡಗಳನ್ನೇಕೆ ಉಪಯೋಗಿಸಿಕೊಳ್ಳಬಾರದು.

'ಚಿತ್ರ ವಿಚಿತ್ರ' ಕಾದಂಬರಿಯ ತಂತ್ರದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬೇಕಾಗಿದೆ. ಕನ್ನಡದಲ್ಲಿ ಕಾವ್ಯ ಸಂಪತ್ತಿರುವಂತೆ ಕಾದಂಬರಿಯ ಸಂಪತ್ತಿಲ್ಲ. ೧೯೧೫ ರ ಹಿಂದೆ ಕನ್ನಡದಲ್ಲಿ ಕಾದಂಬರಿ ಸಾಹಿತ್ಯವಿರಲಿಲ್ಲ. ೧೯೪೫ ರಿಂದ ಈವರೆಗೆ ಕನ್ನಡದಲ್ಲಿ ಕಾದಂಬರಿ ಹೆಚ್ಚಾಗಿ ಬೆಳೆದಿದೆ. ಇಂಗ್ಲೆಂಡ್, ಫ್ರಾನ್ಸ್, ರಷ್ಯಾ ದೇಶಗಳ ಸಾಹಿತ್ಯ ಕಾದಂಬರಿಯ ವಿಷಯದಲ್ಲಿ ಪಡೆದಿರುವ ಪರಂಪರೆಯ ಬೆಂಬಲ ನಮಗಿಲ್ಲ. ಇಂಗ್ಲಿಷರಿಗೆ ಹಾರ್ಡಿ, ಸ್ಕಾಟ್, ಡಿಕೆನ್ಸ್; ಫ್ರೆಂಚರಿಗೆ ವಾಲ್ಟೇರ್, ಬಾಲಜಾಕ್, ಸ್ಟೆಂಡ್ಹಾಲ್, ಜೋಲಾ, ವಿಕ್ಟರ್ ಹ್ಯೂಗೋ, ಫ್ಲಾಬೋ; ರಷ್ಯಾದವರಿಗೆ ಟರ್ಗೀನೀವ್, ಟಾಲಸ್ಟಾಯ್, ಡಾಸ್ಟೊವಸ್ಕಿ, ಕುಪ್ರಿನ್, ಗಾರ್ಕಿ ಮೊದಲಾದವರ ಅಮರ ಕೃತಿಗಳ ಬೆಂಬಲ ಮೇಲ್ಪಂಗ್ತಿಯಿದೆ. ಇಂಗ್ಲೆಂಡ್, ರಷ್ಯಾ, ಫ್ರಾನ್ಸ್ ಗಳಲ್ಲಿ ಈ ಮಹನೀಯರು ಸಾಕಷ್ಟು ಉಳುಮೆ ಕೆಲಸ (Spade work) ಮಾಡಿದ್ದಾರೆ; ಇಂದಿನ ಕಾದಂಬರಿಗಾರ ಬಿತ್ತನೆಗೆ ಹೊರಡಬಹುದು. ನಮಗೆ ಆ ಸೌಕರ್ಯವಿಲ್ಲ. ನಾವೇ ಉಳುವವರು, ನಾವೇ ಬಿತ್ತುವವರು. ಹೊಸದಾದ ಸ್ವತಂತ್ರ ಮಾರ್ಗಗಳನ್ನು ನಾವು ಆವಿಷ್ಕಾರಮಾಡುತ್ತಿದ್ದೇವೆ. ಕಾದಂಬರಿಗೆ ಅವಶ್ಯಕವಾಗುವ ಶೈಲಿಯನ್ನು ರೂಪಿಸಲು ಪ್ರಯತ್ನಿಸುತ್ತಿದ್ದೇವೆ. ಮನೋವ್ಯಾಪಾರದ ಬಗೆಬಗೆಯ ಭಾವಗಳನ್ನು ವ್ಯಕ್ತಮಾಡಲು ಅವಶ್ಯಕವಾದ ಶಬ್ದಗಳನ್ನು ನಿರ್ಮಾಣಮಾಡುತ್ತಿದ್ದೇವೆ. ಆದರೆ ಈ ಪ್ರಯೋಗ

ಕಾಲದಲ್ಲಿಯೇ ಕನ್ನಡ ಕೆಲವು ಚಿರಸ್ಥಾಯಿಯಾದ ಕೃತಿಗಳನ್ನು ಕೊಟ್ಟಿರುವುದು ಕನ್ನಡದ ಹಿರಿಮೆಯನ್ನು ಎತ್ತಿ ಸಾರುತ್ತದೆ. ಈ ಸಮಯದಲ್ಲಿ ಕನ್ನಡ ಕೃತಿಗಳನ್ನಳೆಯುವವರಲ್ಲಿ ಜ್ಞಾನಸಂಪತ್ತು, ಸಾಂತಃಕರಣ, ಸಹೃದಯತೆ, ವಿಮರ್ಶನನೈಪುಣ್ಯ ಇರಬೇಕು. ಕನ್ನಡ ಕೃತಿಗಳನ್ನು ವಿಮರ್ಶೆ ಮಾಡುವವರಲ್ಲಿ ಜವಾಬ್ದಾರಿಯಿರಬೇಕು. ಒಬ್ಬ ಕ್ರಿಯಾಶಾಲಿ ಲೇಖಕನ ಅವಿಶ್ರಾಂತ ಪರಿಶ್ರಮದ ಫಲವನ್ನು ನಾಲ್ಕು ಸಣ್ಣ ಮಾತುಗಳಿಂದ ತೆಗಳುವುದು ಸುಲಭ- ಅದಕ್ಕೆ ಯಾವ ಉತ್ತರವಾದಿತನವೂ ಬೇಕಿಲ್ಲ. ಲೇಖಕನ ಕೃತಿ ಸರ್ವಾಂಗ ಸುಂದರವಾಗಿ ಸರ್ವಲಕ್ಷಣಯುತವಾಗಿಲ್ಲದೆ ಇರಬಹುದು. ಆದರೆ ಅವನ ಪರಿಶ್ರಮ, ಸಾಧನ, ಸಿದ್ಧಿಯನ್ನು ಅಲ್ಲಗಳೆಯುವುದು ಕಾರ್ಪಣ್ಯದ ಲಕ್ಷಣ.

ಕನ್ನಡ ಕಾದಂಬರಿಗೆ ಸ್ಥಿರವಾದ ನೆಲೆಗಟ್ಟನ್ನು ಕಟ್ಟಿ, ಅದರ ವ್ಯಾಪ್ತಿಯನ್ನು ವಿಸ್ತರಿಸಿ, ಅದರ ಸುಪ್ತಚೇತನವನ್ನು ಜಾಗೃತಗೊಳಿಸುವುದರಲ್ಲಿ ಈ ಲೇಖಕನ ದುಡಿಮೆಯೂ ಸಾಕಷ್ಟು ಆಗಿದೆಯೆಂದು ಹೇಳಬಹುದಷ್ಟೆ 'ಚಿತ್ರ ವಿಚಿತ್ರ' ಕಾದಂಬರಿಯಲ್ಲಿಯೂ ಈ ಪ್ರಯತ್ನವನ್ನು ಓದುಗರು ನೋಡಬಹುದು. ಇಲ್ಲಿ ಪ್ರಾಧಾನ್ಯ ಕಥೆಗಲ್ಲ, ಜೀವನಕ್ಕೆ. ಚಿತ್ರ ವಿಚಿತ್ರ ದೊಡ್ಡ ವೇಶ್ಮದ ಮೇಲೆ ದೊಡ್ಡ ಕುಂಚದಿಂದ ರಚಿತವಾಗಿರುವ ಚಿತ್ರ ವ್ಯಕ್ತಿಗಳನ್ನು, ವಸ್ತುವನ್ನು ಬಿಟ್ಟು ಇಡಿಯ ಜೀವನವನ್ನೇ ಪ್ರಧಾನವಾಗಿಟ್ಟುಕೊಂಡು ರಚಿತವಾಗಿರುವ ಕಾದಂಬರಿಗಳು ಐರೋಪ್ಯ ಸಾಹಿತ್ಯದಲ್ಲಿಯೂ ವಿರಳ. ಕನ್ನಡ ಕಾದಂಬರಿಕಾರನೊಬ್ಬ ಇಂಥ ಗುರುತರ ಕೆಲಸವನ್ನು ಸಾಧಿಸುತ್ತಿರುವುದು ಖಂಡನೀಯವೋ ಮಂಡನೀಯವೋ ಓದುಗರು ನಿರ್ಧರಿಸಲಿ.

ಇನ್ನೊಂದು ವಿಷಯದ ಕಡೆಗೆ ನಾನು ಓದುಗರ ಲಕ್ಷ್ಯವೆಳೆಯಲು ಬಯಸುತ್ತೇನೆ. ನನ್ನ 'ನಟ ಸಾರ್ವಭೌಮ' ಕಾದಂಬರಿಯಲ್ಲಿ ಬರುವ ಕೆಲವು ವ್ಯಕ್ತಿಗಳನ್ನೇ ಇಲ್ಲಿ ಉದ್ದೇಶಪೂರ್ವಕವಾಗಿ ಬಳಸಿಕೊಂಡಿದ್ದೇನೆ ಜೀವನದ ಹಾಸು ಹೊಕ್ಕನ್ನು ತೋರಿಸುವುದರ ಜತೆಗೆ ಕಲೆಯ ಸಮರಸತೆಯನ್ನೂ (Harmonic unity) ಇದರಿಂದ ನಿರ್ದೇಶಿಸಲು ಸಾಧ್ಯವಾಗಿದೆ. ಬಾಲಜಾಕ್ ತನ್ನ 'ಹ್ಯೂಮನ್ ಕಾಮಿಡಿ' (Comedie Humaine) ಮಾಲೆಗೆ ಕೆಲವು ಪಾತ್ರಗಳನ್ನು ಪುನಃ ಪುನಃ ಬಳಸಿರುವುದನ್ನು ನಾವು ನೋಡಬಹುದು. ಸಾಗಾ (Saga) ಸಂಪ್ರದಾಯಕ್ಕೆ ಸೇರಿದ್ದ ಕಾದಂಬರಿಗಳಲ್ಲಿ ಅವೇ ಪಾತ್ರಗಳು ಮೇಲಿಂದ ಮೇಲೆ ಬರುತ್ತವೆ. ಇಂಥ ಕೆಲವು ಪಾತ್ರಗಳು 'ಚಿತ್ರ ವಿಚಿತ್ರ' ದಲ್ಲಿ ಬಂದಿದ್ದರೂ ಹೊಸ ಪಾತ್ರಗಳಿಗೆ ಏನೂ ಕೊರತೆಯಿಲ್ಲ. ಇದರಲ್ಲಿ ನಾನು ತಂದಿರುವ ನಲವತ್ತೈದು ಪಾತ್ರಗಳಲ್ಲಿ

ಐದಾರು ಪಾತ್ರಗಳನ್ನು ಮಾತ್ರ 'ನಟ ಸಾರ್ವಭೌಮ' ದಿಂದ ಮುಂದು ವರಿಸಿದ್ದೇನೆ.

ಕಾದಂಬರಿಯ ವ್ಯಾಪ್ತಿಯನ್ನು ವಿಸ್ತರಿಸುವ ನನ್ನ ಪ್ರಯತ್ನ 'ಚಿತ್ರ ವಿಚಿತ್ರ' ದಲ್ಲಿ ಇನ್ನೊಂದು ಅಡಿ ಮುಂದಿಟ್ಟಿರುವುದು ಓದುಗರ ಗಮನಕ್ಕೆ ಬರಬೇಕಾದುದಗತ್ಯ. 'ನಟ ಸಾರ್ವಭೌಮ' ನಾಟಕಜೀವನವನ್ನು ಕುರಿತಾದ ಕಥೆ. ಅಲ್ಲಿ ಹತ್ತಾರು ನಾಟಕಗಳ ಪ್ರಸ್ತಾಪ ಬರುತ್ತದೆ. ಹತ್ತಾರು ನಾಟಕಗಳನ್ನು ಬರೆದು ಕಾದಂಬರಿಯಲ್ಲಿ ಅಡಕಮಾಡುವುದು ಶಕ್ಯವೂ ಅಲ್ಲ ಅವಶ್ಯಕವೂ ಅಲ್ಲ. ಅಲ್ಲಿ ಕೆಲವು ನಾಟಕಗಳ ಸಾರಾಂಶವನ್ನು ಕೊಟ್ಟು, ಕೆಲವು ನಾಟಕಗಳ ಮುಖ್ಯ ದೃಶ್ಯಗಳನ್ನು ಕಾಣಿಸಿ ಕಥೆಯನ್ನು ಮುನ್ನಡೆಸಿದ್ದೇನೆ 'ಚಿತ್ರ ವಿಚಿತ್ರ' ಸಿನೀಮಾ ಜೀವನ ಕುರಿತಾದ ಕಥೆ. ಇಲ್ಲಿ ಬರುವುದೆಲ್ಲಾ 'ಶ್ರೀರಾಮ ಪಟ್ಟಾಭಿಷೇಕ' ಚಿತ್ರ – ನಾಟಕದ ಪ್ರಸ್ತಾಪ. ಕಥೆ ಬೆಳೆಯುತ್ತ ಹೋದಂತೆ ಶ್ರೀರಾಮ ಪಟ್ಟಾಭಿಷೇಕದ ಕೆಲ ಕೆಲವು ಸನ್ನಿವೇಶಗಳ ಬಗ್ಗೆ ಮಾತು ಬರುತ್ತದೆ. ಓದುಗರ ಮನಸ್ಸಿನಲ್ಲಿ ಇಡಿಯ ಕಥೆಯ ಸಮಗ್ರ ಚಿತ್ರ ಮೂಡಲೆಂದು ನಾನು 'ಶ್ರೀರಾಮಪಾದುಕಾ ಪಟ್ಟಾಭಿಷೇಕ' ಚಿತ್ರ – ನಾಟಕವನ್ನು ಪೂರ್ಣವಾಗಿ 'ಚಿತ್ರ – ವಿಚಿತ್ರ' ದಲ್ಲಿ ಕೊಟ್ಟಿದ್ದೇನೆ. ಕಾದಂಬರಿ ತನ್ನ ವಿರಾಟ್‌ಗರ್ಭದಲ್ಲಿ ನಾಟಕವನ್ನೂ ಸಮಾವೇಶಗೊಳಿಸಿಕೊಳ್ಳಬಹುದೆಂದು ತೋರಿಸಿದ್ದೇನೆ. ನಾನು ವಿಚಾರ ಮಾಡಿರುವಂತೆ ಇಂಗ್ಲೆಂಡಿನ ಪ್ರಸಿದ್ಧ ಕಾದಂಬರಿಕಾರಳಾದ ವರ್ಜೀನಿಯಾ ವುಲ್ಫ್ (Virginia Woolf) ವಿಚಾರ ಮಾಡಿರುವುದೂ ಸ್ವಾರಸ್ಯವಾಗಿದೆ.

"I don't think there's any form in which the novel shouldn't be written. My idea is to make use of every form and bring it within a unity which is that particular novel. There's no reason why a novel shouldn't be written particularly in verse, partly in prose, and with scenes in it like those in a play. I would like to write a novel which is a fusion of poetry and dialogue as in a play. I would like to experiment with every form and bring it within the scope of a novel"*

---

* World Within World – Stephen Spender (Page 154)

ಕಂಪೆನಿಯ ಮುಖ್ಯ ನಟರು ಬಿಟ್ಟು ಹೋದರೂ ಕಂಪೆನಿ ನಿಲ್ಲಲಿಲ್ಲ. ಕಂಪೆನಿಯವರು ಹಾಕುತ್ತಿದ್ದ ಎರಡು ಊಟದ ಆಸೆಗೆ ಉಳಿದವರು ಪಾತ್ರಗಳನ್ನು ಅಭಿನಯಿಸುತ್ತಿದ್ದರು. ಚಿನ್ನಪ್ಪನ ಕಟಾಕ್ಷ ಸಂಪಾದಿಸಿದವರಿಗೆ ಬೀಡಿಗೆ ಕಾಸು ಸಿಕ್ಕುತ್ತಿತ್ತು. ನಾಟಕಗಳಲ್ಲಿ ಕೋಲು ಹಿಡಿದುಕೊಂಡು 'ಯಾರಲ್ಲಿ' ಎಂದರೆ 'ಏನಪ್ಪಣೆ' ಎನ್ನುತ್ತಿದ್ದವರೂ, ಫರದೆಗಳ ಹಗ್ಗ ಜಗ್ಗುತ್ತಿದ್ದವರೂ, ಪೇಂಟರ್ ತಿರುಪುಳಿಸ್ವಾಮಿ ನಾಯಿಡು, ಬಡಗಿ ಸೂರೊಂದಪ್ಪ, ಅಡಿಗೆ ವಿರೂಪಾಕ್ಷಿ, ಗೇಟ್‌ಪ್ಯಾಸ್ ಸೀನು ಎಲ್ಲರೂ ಪಾತ್ರಗಳನ್ನು ಅಭಿನಯಿಸಲಾರಂಭಿಸಿದರು. 'ಕಂಪೆನಿ ಯಾರು ಬಿಟ್ಟುಹೋದರೇನು. ಕಂಪೆನಿ ನಿಲ್ಲಿಸದೆ ನಡೆಸುತ್ತಿದ್ದೇನಲ್ಲಾ' ಎಂಬುದೇ ಚಿನ್ನಪ್ಪನ ಬಡಾಯಿಯಾಗಿತ್ತು.

ರಾಜಾಚಾರ್ಯರ ಕಂಪೆನಿಯ ವೈಭವ, ನಾಟಕಗಳ ಸೊಗಸು, ಸಾವಿರಾರಗಟ್ಟಳೆ ಕಲೆಕ್ಷನ್ ನೋಡಿದ್ದ ಭಾಗ್ಯಮ್ಮ 'ಶ್ರೀಶೈಲ ಕೃಪಾಪೋಷಿತ ನಾಟಕ ಮಂಡಳಿ' ಅವುಗಳನ್ನು ಮೀರಿಸಿಬಿಡುತ್ತದೆಂದು ಕಂಡಿದ್ದ ಕನಸು ಒಡೆದು ಚೂರಾಯಿತು. ಸಿಕ್ಕುಸಿಕ್ಕಿದವರ ಜತೆ ಪಾರ್ಟು ಮಾಡುವುದಕ್ಕೆ ಸರೋಜನೂ ತನ್ನ ಅಸಮ್ಮತಿಯನ್ನು ವ್ಯಕ್ತಮಾಡಿದಳು. ಶ್ರೀಶೈಲ ಕಂಪೆನಿ ಸದ್ದುಮಾಡದೆ ತಣ್ಣಗಾಯಿತು.

ಕಂಪೆನಿ ನಿಂತುಹೋದುದು ಅನೇಕರಿಗೆ ಅನಾನುಕೂಲವಾದರೂ ಚಿನ್ನಪ್ಪನಿಗೆ ಅನುಕೂಲವೇ ಆಯಿತು. ಊರಿಗೆ ಇದ್ದುದೆಲ್ಲಾ ಅದೇ ಒಂದು ನಾಟಕಶಾಲೆ. ಯಾವ ಕಂಪೆನಿಯವರು ಬಂದರೂ 'ಶ್ರೀಶೈಲ ನಾಟಕ ಮಂದಿರ'ದಲ್ಲಿಯೇ ತಮ್ಮ ನಾಟಕಗಳನ್ನು ಪ್ರದರ್ಶನ ಮಾಡಬೇಕಾಗಿತ್ತು. ನಾಟಕಶಾಲೆಯ ಬಾಡಿಗೆ ದಿನಕ್ಕೆ ನೂರು ರೂಪಾಯಿಯೆಂದು ಚಿನ್ನಪ್ಪ, ರುದ್ರಪ್ಪ, ಮುರಿಗೆಯ್ಯ ವಿಚಾರಮಾಡಿ ನಿರ್ಧರಿಸಿದರು. ಇದರ ಜತೆಗೆ ನಾಟಕವಾಡುವವರು ದೀಪದ ಖರ್ಚು, ನೀರಿನ ಖರ್ಚು, ಮುನಿಸಿಪಾಲಿಟಿಯವರ ಖರ್ಚು ಮುರಿದು ಹೋದ ಹರಿದುಹೋದ ಸಾಮಾನುಗಳ ಬೆಲೆ ಕೊಡಬೇಕಾಗುತ್ತಿತ್ತು. ಅಂದಿನ ಬಾಡಿಗೆ ಮುಂಗಡವಾಗಿ ಕೊಟ್ಟ ಹೊರತೂ ಚಿನ್ನಪ್ಪ ಥಿಯೇಟರ್ ಬಾಗಿಲೇ ತೆಗೆಸುತ್ತಿರಲಿಲ್ಲ.

'ಶ್ರೀಶೈಲ ನಾಟಕ ಮಂದಿರ'ಕ್ಕೆ ಬಾಡಿಗೆಗೆ ಬರುತ್ತಿದ್ದ ಕಂಪೆನಿಯವರಿಗೆಲ್ಲಾ ಹಣವಾಗುತ್ತಿರಲಿಲ್ಲ. ಕೆಲವು ಕಂಪೆನಿಗಳವರು ಬಾಡಿಗೆ ಹಣ ಕೊಡಲಾರದೆ ತಮ್ಮ ಸಾಮಾನುಗಳನ್ನು ಬಿಟ್ಟು ಹೇಳದೆ ಕೇಳದೆ ಓಡಿಹೋಗುತ್ತಿದ್ದರು. ಒಂದೆರಡು ವರ್ಷಗಳಲ್ಲಿ ನಾಟಕ ಮಂದಿರದಲ್ಲಿ ನಾಲ್ಕಾರು ಕಂಪೆನಿಗಳಿಗಾಗುವಷ್ಟು ಬಟ್ಟೆ, ಬರೆ, ಫರದೆಗಳು, ಸಂಗೀತವಾದ್ಯಗಳು ಸಂಗ್ರಹವಾದವು

ಚಿನ್ನಪ್ಪ ಯಾವ ವ್ಯವಹಾರ ಮಾಡಿದರೂ ಮುರಿಗೆಯ್ಯನನ್ನು ಮರೆಯುತ್ತಿರಲಿಲ್ಲ. ಮುರಿಗೆಯ್ಯ ಸಾಹುಕಾರರ ಆಪ್ತಸಚಿವ. ಅವನ ಮಾತೆಂದರೆ ಸಾಹುಕಾರರಿಗೆ ಗುರುವಾಕ್ಯದಷ್ಟು ಪವಿತ್ರ. ಮುರಿಗೆಯ್ಯನ ಸ್ನೇಹವನ್ನು ಕಟ್ಟಿಕೊಂಡರೆ ಅವನು ತನ್ನ ಬುಡಕ್ಕೆ ನೀರು ತಿದ್ದಿಬಿಡಬಲ್ಲನೆಂದು ಚಿನ್ನಪ್ಪನಿಗೆ ಚೆನ್ನಾಗಿ ಗೊತ್ತಿತ್ತು. ಕಂಪೆನಿಯವರ ಕುತ್ತಿಗೆ ಹಿಸುಕಿ ಚಿನ್ನಪ್ಪ ಸಂಪಾದಿಸುವುದರಲ್ಲಿ ಒಂದು ಪಾಲು ಮುರಿಗೆಯ್ಯನಿಗೆ ಹೋಗುತ್ತಿತ್ತು.

'ನನಗರ್ಧ ನಿನಗರ್ಧ' ಎಂದು ಬಾಯಿ ಉಪಚಾರ ಚಿನ್ನಪ್ಪ ಹೇಳಿದರೂ ಅವನು ಸಂಪಾದನೆಯಲ್ಲಿ ಹತ್ತನೆಯ ಒಂದು ಭಾಗವನ್ನೂ ತನ್ನ ಕೈಗೆ ಹಾಕುತ್ತಿರಲಿಲ್ಲವೆಂದು ಮುರಿಗೆಯ್ಯ ಚೆನ್ನಾಗಿ ಬಲ್ಲ. ಆದರೆ ಅವಕಾಶ ಸಿಕ್ಕಿದಾಗ ಕೈಗೆ ಸಿಕ್ಕಿದುದನ್ನು ಗೆಬರಿಕೊಳ್ಳುವುದಕ್ಕೆ ಅವನು ಹಿಂಜರಿಯುತ್ತಿರಲಿಲ್ಲ. ತನ್ನ ಮಗಳು ಸಂಗೀತಾಭ್ಯಾಸ ಮಾಡುತ್ತಿದ್ದಾಳೆಂದು ಒಂದು ಡಬ್ಬಲ್ ರೀಡ್ ಹಾರ್ಮೋನಿಯಂ ವಾದ್ಯವನ್ನು ಮನೆಗೆ ಸಾಗಿಸಿದ. ಇನ್ನೊಮ್ಮೆ ಕಂಪೆನಿಯಲ್ಲಿದ್ದ ಕೆಲವು ಸೀರೆಗಳನ್ನು ಸಂಗ್ರಹಿಸಿದ. ನಾಟಕಶಾಲೆಯ ಬಲ್ಬುಗಳು, ಸ್ವಿಚ್ಚುಗಳು, ವೈರಿಂಗ್ ಆಗಾಗ್ಗೆ ಮುರಿಗೆಯ್ಯನ ಮನೆಗೆ ಸಾಗುತ್ತಿದ್ದವು. ಅವುಗಳ ಖರ್ಚನ್ನು ಚಿನ್ನಪ್ಪ ಬಾಡಿಗೆಗೆ ಬರುತ್ತಿದ್ದ ಕಂಪೆನಿಯವರ ತಲೆಯಮೇಲೆ ಹೇರುತ್ತಿದ್ದ.

ಮುರಿಗೆಯ್ಯನಿಗೆ ಚಿನ್ನಪ್ಪ ಎಷ್ಟು ಹೆದರುತ್ತಿದ್ದನೋ ಅಷ್ಟೇ ಮುರಿಗೆಯ್ಯನೂ ಚಿನ್ನಪ್ಪನಿಗೆ ಹೆದರುತ್ತಿದ್ದ. ಸಾಹುಕಾರರ 'ಶ್ರೀಮನು ರಾಣೀವಾಸ'ದಲ್ಲಿ ಚಿನ್ನಪ್ಪನಿಗಿದ್ದ ಪ್ರಭಾವ ಮುರಿಗೆಯ್ಯನಿಗೆ ಚೆನ್ನಾಗಿ ಗೊತ್ತಿತ್ತು. ಅವನ ವಿರೋಧ ಕಟ್ಟಿಕೊಂಡರೆ ತನ್ನ ನಿತ್ಯಗೂಳಿಗೆ ಮಣ್ಣುಬೀಳುವುದು ಅಸಂಭವವಲ್ಲವೆಂದು ಅವನು ಚೆನ್ನಾಗಿ ತಿಳಿದುಕೊಂಡಿದ್ದ. ಪರಸ್ಪರ ಭೀತಿಯಿಂದ ಅವರ ಸ್ನೇಹ-ವಿಶ್ವಾಸ ಸಾಗಿತ್ತು.

ನಾಟಕದ ಕಂಪೆನಿಯ ಮ್ಯಾನೇಜರಿಗೆ ಲಭಿಸಿದ ಮೇಲೆ ಚಿನ್ನಪ್ಪ ಮೊದಲಿನ ಚಿನ್ನಪ್ಪನಾಗಿರಲಿಲ್ಲ. ಅವನ ತಲೆಯ ಮೇಲೆ ಒಂದಂಗುಲ ಜರತಾರಿ ರುಮಾಲು, ಮೈಮೇಲೆ ಸರ್ಜ್‌ಕೋಟ್, ಕಾಲಿಗೆ ಪೇಟೆಂಟ್ ಲೆದರ್ ಪಂಪ್‌ಷೂಸ್, ಕೈಗೆ ವಜ್ರದುಂಗುರಗಳು ಬಂದವು. ಅವನ ಮುಖದ ಕಳೆಯೇ ಬದಲಾಯಿಸಿತ್ತು. ಮಾತಿನಲ್ಲಿ ಶ್ರೀಮಂತಿಗೆಯ ಠೀವಿ ಒಡೆದು ಕಾಣುತ್ತಿತ್ತು. ಅವನ ಜತೆಯಲ್ಲಿ ನಿರಾಹಾರವ್ರತ ಆಚರಿಸುತ್ತಿದ್ದ ಹಳೆಯ ನಟರು ಅವನನ್ನು ಮಾತನಾಡಿಸಲು ಧೈರ್ಯವಾಗುತ್ತಿರಲಿಲ್ಲ. ಅವನಲ್ಲಿ ಆಗಿದ್ದ ಮಾರ್ಪಾಟನ್ನು ಕಂಡು ರುದ್ರಪ್ಪನವರು ಒಂದು ದಿವಸ ಸಂತೋಷ, ಆಶ್ಚರ್ಯದಿಂದ 'ಎಂಗಿ

ಪ್ಪೋನು ಎಂಗಾಗಿ ಓಗಿಬಿಟ್ಟಿಯೋ ಬೊಡ್ಡೀಮಗನೆ' ಎಂದರು. ಚಿನ್ನಪ್ಪ ತನ್ನ ಸಹಜ ವಿನಯದಿಂದ 'ಎಲ್ಲಾ ಅಣ್ಣಾವರ ಕಟಾಕ್ಸ' ಎಂದು ಸಾಹುಕಾರರನ್ನು ಅಟ್ಟಕ್ಕೇರಿಸಿದ.

ವಿದ್ಯೆ, ಬುದ್ಧಿ ಮಾಡಲಾಗದಿದ್ದುದನ್ನು ಚಿನ್ನಪ್ಪನ ಜರತಾರಿ ರುಮಾಲು, ಸರ್ಜ್‌ಕೋಟು, ವಜ್ರದುಂಗುರ, ಸರಿಗೆ ಪಂಚೆ ಮಾಡಿದವು. ನಾಟಕದಕಂಪೆನಿ ಅವನಿಗೆ ಎಲ್ಲರ ಪರಿಚಯವನ್ನೂ ಮಾಡಿಕೊಟ್ಟಿತ್ತು. ಬೇಕಾದ ಕಛೇರಿಗೆ ಹೋಗಿ ಬೇಕಾದ ಆಫೀಸರ ಹತ್ತಿರ ಬೇಕಾದ ಕೆಲಸ ಮಾಡಿಕೊಂಡು ಬರುವುದರಲ್ಲಿ ಚಿನ್ನಪ್ಪ ನಿಸ್ಸೀಮನೆಂದು ಹೆಸರಾಗುತ್ತ ಬಂದ. ಚಿನ್ನಪ್ಪ ಎಲ್ಲಾ ಕಡೆಯೂ ಓಡಿಯಾಡುತ್ತಿದ್ದುದರಿಂದ ಆಫೀಸರುಗಳು ಅವನಿಗೆ ಹೆದರುತ್ತಿದ್ದರು. 'ತಮ್ಮ ಬಗ್ಗೆ ಯಾರಲ್ಲಿ ಏನು ಹೇಳಿಬಿಡುತ್ತಾನೋ' ಎಂಬ ಅಳುಕು ಸದಾ ಅವರನ್ನು ಆವರಿಸಿರುತ್ತಿತ್ತು. ಚಿನ್ನಪ್ಪ ಬಂದನೆಂದರೆ ಅವನನ್ನು ಮರ್ಯಾದೆಯಾಗಿ ಕಂಡು ಅವನ ಕೆಲಸ ಮೊದಲು ಮಾಡಿಕೊಟ್ಟು ಕಳುಹಿಸುತ್ತಿದ್ದರು.

ಚಿನ್ನಪ್ಪನ ಯೋಗ್ಯತೆ, ಅಧಿಕಾರವರ್ಗದಲ್ಲಿ ಅವನಿಗಿದ್ದ ಪ್ರಭಾವ, ಅವನ ಕಾರ್ಯದಕ್ಷತೆಗಳನ್ನು ಪರೀಕ್ಷಿಸುವ ಒಂದು ಸನ್ನಿವೇಶ ಒದಗಿತು.

'ಶ್ರೀಶೈಲ ನಾಟಕ ಮಂದಿರ' ವಿದ್ದ ಸ್ಥಳ ರುದ್ರಪ್ಪನವರ ಸ್ವಂತದಲ್ಲ. ರಾಜಾಚಾರ್ಯರು ತಮ್ಮ ನಾಟಕಗಳಿಗೆ ಥಿಯೇಟರ್ ಕಟ್ಟಲು ಮುನಿಸಿಪಾಲಿಟಿಯವರು ಬಾಡಿಗೆಗೆ ಕೊಟ್ಟಿದ್ದುದು. ರಾಜಾಚಾರ್ಯರಿಂದ ಥಿಯೇಟರ್ ರುದ್ರಪ್ಪನವರು ಕಸಿದುಕೊಂಡ ಮೇಲೆ ಅವರೇ ಮುನಿಸಿಪಾಲಿಟಿಯ ಶುಲ್ಕವನ್ನು ತೆರುತ್ತ ಬಂದಿದ್ದರು.

ನಾಟಕಶಾಲೆ ಒಂದು ಚಪ್ಪರವಾಗಿತ್ತೇ ವಿನಾ ಭದ್ರವಾದ ಕಟ್ಟಡವಾಗಿರಲಿಲ್ಲ. ಒಂದೊಂದು ಮಳೆಗಾಲ ದಾಟುವುದು ಒಂದೊಂದು ಗಂಡಾಂತರವಾಗಿತ್ತು. ಕುಸಿದು ಬಿದ್ದೆಡೆಗಳನ್ನು ರಿಪೇರಿ ಮಾಡಿಸಿ, ಐಬು ಗೊತ್ತಾಗದಂತೆ ಸುಣ್ಣಬಣ್ಣ ಮಾಡಿಸಿ ರುದ್ರಪ್ಪ ಕಾಲ ತಳ್ಳಿಕೊಂಡೇ ಬಂದಿದ್ದರು. ಥಿಯೇಟರ್ ತೀರ ಅಪಾಯಕರ ಸ್ಥಿತಿಗೆ ಬರಲು ಸರ್ಕಾರದವರು ರುದ್ರಪ್ಪನವರಿಗೆ ನೋಟೀಸ್ ಕೊಟ್ಟರು.

ಹೇಗಾದರೂ ಮಾಡಿ ಥಿಯೇಟರ್ ಉಳಿಸಿಕೊಳ್ಳಬೇಕೆಂದು ರುದ್ರಪ್ಪ, ಚಿನ್ನಪ್ಪ ಇಬ್ಬರೂ ಪ್ರಯತ್ನಿಸಿದರು. ಅದು ಸಾಧ್ಯವಾಗಲಿಲ್ಲ. 'ಈ ಹರಕು ಮುರುಕು ಚಪ್ಪರ ಕಿತ್ತುಹಾಕಿಸಿ ಇದೇ ಸ್ಥಳದಲ್ಲಿ ಭದ್ರವಾದ ಸೊಗಸಾದ ಕಟ್ಟಡ ಕಟ್ಟುತ್ತೇನೆ. ಥಿಯೇಟರಿನ ಸ್ಥಳವನ್ನು ನನಗೇ ಮಾರಿಬಿಡಿ' ಎಂದು ರುದ್ರಪ್ಪ ಕೇಳಿಕೊಂಡರು. ಥಿಯೇಟರ್ ಪಕ್ಕದಲ್ಲಿಯೇ ನಗರ ವಿಸ್ತರಣ

ಕಾರ್ಯ ನಡೆದಿದ್ದುದರಿಂದ ಅದೂ ಸಾಧ್ಯವಾಗಲಿಲ್ಲ. 'ಮುಂದೇನು ಮಾಡು ವುದು' ಎನ್ನುವ ಚಿಂತೆ ರುದ್ರಪ್ಪನವರನ್ನೂ ಚಿನ್ನಪ್ಪನನ್ನೂ ಬಲವಾಗಿ ಮುತ್ತಿಬಿಟ್ಟಿತು.

ಒಂದು ತಿಂಗಳ ಸತತ ಪರಿಶ್ರಮದಿಂದ ಚಿನ್ನಪ್ಪ ಒಂದು ದಾರಿ ಹುಡುಕಿದ ಮುನಿಸಿಪಲ್ ಕಮಿಷನರು, ಅಧ್ಯಕ್ಷರ ಮನವೊಲಿಸಿಕೊಂಡು ಬೇರೊಂದೆಡೆಯಲ್ಲಿ ಸ್ಥಳ ದೊರಕಿಸಿಕೊಂಡು ಬಂದ.

"ಎಲ್ಲಿ ಕೊಡ್ತಾರಂತಯ್ಯಾ ಸೈಟು"

ಎಂದು ರುದ್ರಪ್ಪ ಅಸಮಾಧಾನದಿಂದಲೇ ಕೇಳಿದರು.

"ನಾವು ಕೇಳಿದ ಕಡೆ ಕೊಡುತ್ತಾರೆ ಸಾಹುಕಾರರೇ. ಅದಕ್ಕೆ ನಾನು ಏರ್ಪಾಟುಮಾಡಿದ್ದೇನೆ. ಟೌನ್‌ಹಾಲ್ ಸಮೀಪದಲ್ಲಿ ಸೊಗಸಾದ ಸೈಟಿದೆ. ಅದು ಸಿಕ್ಕಿಬಿಟ್ಟರೆ ನಮ್ಮ ರೊಟ್ಟಿ ಜಾರಿ ತುಪ್ಪಕ್ಕೆ ಬಿದ್ದ ಹಾಗಾಗುತ್ತದೆ."

"ಆ ಸೈಟನ್ನು ಚದುರ ಗಜಕ್ಕೆ ಮೂವತ್ತೆರಡು ರೂಪಾಯಿಗೆ ಕೇಳುತ್ತಾ ಇದ್ದಾರೆ ನಿನಗೆ ಗೊತ್ತೋ? ಬರೀ ಸೈಟಿನ ಧಾರಣೆಯೇ ಮೂವತ್ತು ನಲವತ್ತು ಸಾವಿರ ರೂಪಾಯಿ ಆಗುತ್ತದೆ."

"ಅದರ ಹತ್ತನೆಯ ಒಂದು ಅಂಶಕ್ಕೆ ನಾನು ಮಾಡಿಸಿಕೊಂಡು ಬರುತ್ತೇನೆ ಸಾಹುಕಾರರೇ. ನೀವು ಒಪ್ಪಿಕೊಂಡು ಮುಂದಿನ ಕೆಲಸ ನನಗೆ ಬಿಡಿ."

ಚಿನ್ನಪ್ಪನ ಸಲಹೆ ಸಾಹುಕಾರರ ಬಾಯಲ್ಲಿ ನೀರೂರಿಸಿತು.

"ಈ ಸೈಟ್ ಸಿಕ್ಕಿಬಿಟ್ಟರೆ ಸಿನೀಮಾ ಥಿಯೇಟರ್ ಕಟ್ಟಿಸಿಬಿಡೋಣ ಸಾಹುಕಾರರೇ. ನಾಟಕದ ಕಾಲ ಮುಗಿದುಹೋಯಿತು. ಹೊಟ್ಟೆಗಿಲ್ಲದ ಈ ನಾಟಕದ ಕಂಪೆನಿಯೋರ ಸಹವಾಸ ನಮ್ಮ ಮರ್ಯಾದೆಗೆ ತಕ್ಕುದಲ್ಲ. ಸಿನೀಮಾ ಇಡಿಸಿಬಿಟ್ಟರೆ ತನ್ನಷ್ಟಕ್ಕೆ ತಾನು ದುಡಿದುಕೊಂಡು ಹೋಗುತ್ತದೆ."

"ಈಗ ಸೈಟಿಗೆ ಹಣ–ಥಿಯೇಟರಿಗೆ ಹಣ–ಸಿನೀಮಾ ಇಡಿಸುವುದಕ್ಕೆ ಹಣ, ಇಷ್ಟು ಹಣ ನಾನು ಎಲ್ಲಿಂದ ತರಲೋ ಚಿನ್ನಪ್ಪ."

"ಸಿನೀಮಾ ಇಡಿಸುವುದಕ್ಕೆ ನೀವು ಹಣ ತೆರಬೇಕಾಗಿಲ್ಲ ಸಾಹುಕಾರರೇ. ಬಾಡಿಗೆಗೆ ಬರುವವರೇ ಹಣ ಹಾಕುತ್ತಾರೆ."

"ಇರಲಿ ತಡಿ. ಯೋಚನೆಮಾಡುವ."

ಎಂದು ಸಾಹುಕಾರರು ಹೇಳಿದರು.

ಸಾಹುಕಾರರು ಚಿನ್ನಪ್ಪನ ಸಲಹೆಯನ್ನೊಪ್ಪಲು ಬಹಳ ದಿವಸ ಹಿಡಿಯಲಿಲ್ಲ. ಮುನಿಗೆಪ್ಪನ ಸಹಾಯ ಚಿನ್ನಪ್ಪ ತೆಗೆದುಕೊಂಡು ಸಾಹುಕಾರರ

ಮನಸ್ಸನ್ನು ಅರ್ಧ ಗಟ್ಟಿಮಾಡಿಸಿದ. ಉಳಿಪರ್ಧದ ಉಸ್ತುವಾರಿ ಭಾಗ್ಯಮ್ಮ, ಸರೋಜ ನೋಡಿಕೊಂಡರು.

ಸೈಟು ದೊರೆತು 'ಶ್ರೀಶೈಲ ಥಿಯೇಟರ್' ರಚನೆ ಆರಂಭವಾಯಿತು. ಒಂದು ಲಕ್ಷ ರೂಪಾಯಿ ಅಂದಾಜು ಮಾಡಲಾಗಿತ್ತು. ಇದೇ ಸಂದರ್ಭದಲ್ಲಿ ಚಿನ್ನಪ್ಪನಿಗೆ ಮುನಿಸಿಪಲ್ ಚೇರ್‌ಮನ್ನರ ಸೋದರಳಿಯ ಶಿವಾನಂದನ ಪರಿಚಯವಾಯಿತು. ಶಿವಾನಂದನ ಸಹಾಯದಿಂದ ಇಡಿಯ ಮುನಿಸಿಪಾಲಿಟಿ ಚಿನ್ನಪ್ಪನ ವಶವರ್ತಿಯಾಯಿತು. ಚಿನ್ನಪ್ಪನ ದಕ್ಷತೆ ಕಂಡು ಸಾಹುಕಾರರೂ ನಸುಬೆರಗಾದರು.

೨

ಶಿವಾನಂದನ ತಂದೆತಾಯಿ ಅವನ ಶೈಶವ್ಯದಲ್ಲಿಯೇ ಕೈಲಾಸವಾಸಿಗಳಾಗಿದ್ದರು. ತಂಗಿಯ ಮಗನನ್ನು ವೀರಭದ್ರಪ್ಪನವರು ಸಾಕಿ, ಸಲಹಿ ವಿದ್ಯೆ ಕಲಿಸಿದರು. ಶಿವಾನಂದ ವಯಸ್ಸಿಗೆ ಬಂದ ಮೇಲೆ ತಮ್ಮ ಮಗಳು ಮಂಗಳಾಂಬಳನ್ನು ಅವನಿಗೆ ಕೊಟ್ಟು ಲಗ್ನ ಮಾಡಬೇಕೆಂದು ಸಂಕಲ್ಪ ಮಾಡಿಕೊಂಡಿದ್ದರು

ವೀರಭದ್ರಪ್ಪನವರು ಸಣ್ಣ ಪ್ರಮಾಣದಲ್ಲಿಯೇ ದಿನಸಿ ಅಂಗಡಿ ವ್ಯಾಪಾರ ಆರಂಭಿಸಿ, ಅದನ್ನೇ ಬೆಳಸಿಕೊಂಡು ಸ್ಥಿತಿವಂತರಾದರು. ನಾಲ್ಕಾರು ಹೊಲಗದ್ದೆಗಳನ್ನು ಮಾಡಿಕೊಂಡರು; ಬೆಂಗಳೂರಿನಲ್ಲಿ ಎರಡು ಮನೆ ಕಟ್ಟಿಕೊಂಡರು; ಸಾವಿರಾರು ರೂಪಾಯಿ ಲೇವಾದೇವಿ ಮಾಡುತ್ತಿದ್ದರು. ಮೊದಲನೆಯ ಮಹಾಯುದ್ಧದೊಂದಿಗೆ ವೀರಭದ್ರಪ್ಪನವರ ಶುಕ್ರದೆಶೆಯೂ ಆರಂಭವಾಯಿತು. ಯುದ್ಧ ಕೊನೆಗಾಣುವುದರ ಒಳಗಾಗಿ ವೀರಭದ್ರಪ್ಪನವರು ಸಾಹುಕಾರ ವೀರಭದ್ರಪ್ಪನವರಾದರು. ಎಂಟು ಲೈಸು ಹಿಡಿದು ಎಂಟು ಮೂಲೆಗೂ ಬಸ್ಸುಗಳನ್ನು ಓಡಿಸಿ ತಮ್ಮ ಕೀರ್ತಿ ಅಷ್ಟದಿಕ್ಕುಗಳಲ್ಲಿಯೂ ಘೋರ್ಗರೆಯುವಂತೆ ಮಾಡಿದರು. ವೀರಭದ್ರಪ್ಪನವರ ಗುರುಗಳಾದ ಕಾಡಮಲ್ಲೇಶ್ವರ ಮಹಾಸ್ವಾಮಿಗಳವರ ಸಲಹೆಯಂತೆ ಸ್ವಜಾತೀಯ ವಿದ್ಯಾರ್ಥಿಗಳಿಗೆ 'ಪ್ರಸಾದ ನಿಲಯ' ಸ್ಥಾಪಿಸಿ ತಮ್ಮ ಔದಾರ್ಯವನ್ನು ವ್ಯಕ್ತಪಡಿಸಿದರು

ದಾನಶೂರರಾದ ವೀರಭದ್ರಪ್ಪನವರಿಗೆ ಮುನಿಸಿಪಲ್ ಕೌನ್ಸಿಲ್ಲಿನಲ್ಲಿ ಸ್ಥಾನ ಸಿಗುವುದಕ್ಕೆ ತಡವಾಗಲಿಲ್ಲ. ನಿರ್ಗತಿಕನಾದ ಅವರ ಎದುರಾಳಿ, ಎಲೆಕ್ಷನ್ ಕಾಲದಲ್ಲಿ ಓಟರುಗಳಿಗೆ ತಲಾ ಹತ್ತು ರೂಪಾಯಿ ಕೊಡುವ ಮಾರ್ಗವಿಲ್ಲದೆ ವೀರಭದ್ರಪ್ಪನವರ ಮುಂದೆ ಉರುಳಿದ. ಓಟಿಂಗ್ ನಡೆದ ಎರಡು

ದಿನವೂ ಕಳ್ಳಂಗಡಿಯವರು ಬದುಕಿಹೋದರು. ಅನಕ್ಷರಜ್ಞನಾದ ಓಟರು ಗಳು ವೀರಭದ್ರಪ್ಪನವರ ಕಳ್ಳುಸೇವೆಯನ್ನು ಹೃತ್ಪೂರ್ವಕ ಕೊಂಡಾಡಿದರು.

ಮುನಿಸಿಪಲ್ ಕೌನ್ಸಿಲರಾದುದೇ ತಡ, ವೀರಭದ್ರಪ್ಪನವರಿಗೆ ಸಾರ್ವ ಜನಿಕಜೀವನದ ಅಮಲೇರಿತು. ತಿಂಗಳಿಗೊಮ್ಮೆಯಾದರೂ ಸೊಗಸಾದ ಔತಣ ಏರ್ಪಡಿಸಿ ಸರ್ಕಾರಿ ಅಧಿಕಾರಿಗಳನ್ನು ಸತ್ಕರಿಸುತ್ತಿದ್ದರು. ಅದೇ ವರ್ಷ ಅವರು ಕೌನ್ಸಿಲ್ ಅಧ್ಯಕ್ಷ ಚುನಾವಣೆಗೆ ನಿಂತಾಗ ಔತಣ ಕೂಟಗಳು ಸರ್ಕಾರಿ ಅಧಿಕಾರಿಗಳ ನೆರವನ್ನೂ, ನೋಟಿನ ಕಂತೆಗಳು ಸಾರ್ವಜನಿಕರ ನೆರವನ್ನೂ ತಂದುಕೊಟ್ಟು ಅವರಿಗೆ ಬಹುಮತದಿಂದ ಚುನಾವಣೆಯಾಯಿತು.

ವೀರಭದ್ರಪ್ಪನವರು ಅಧ್ಯಕ್ಷರಾದರೂ ಅವರ ಅಧ್ಯಕ್ಷತೆಯನ್ನು ನಡೆಸು ತ್ತಿದ್ದವನು ಶಿವಾನಂದನೇ. ಅವನು ಡಿಗ್ರಿ ಪರೀಕ್ಷೆಯವರೆಗೆ ಕಾಲೇಜಿಗೆ ಮಣ್ಣು ಹೊತ್ತು ಬಂದಿದ್ದ. ನೀರು ಕುಡಿದಹಾಗೆ ಇಂಗ್ಲಿಷ್ ಮಾತನಾಡು ತ್ತಿದ್ದ. ಆಫೀಸಿನ ಫೈಲುಗಳೆಲ್ಲಾ ಅವನ ಕೈಹಾದೇ ಅಧ್ಯಕ್ಷರ ಕೈಸೇರುತ್ತಿತ್ತು. ಅವನು ರುಜುಮಾಡಿರೆಂದು ಹೇಳುತ್ತಿದ್ದ ಜಾಗಗಳಲ್ಲಿ ಕಿಸೆಯಿಂದ ಗಂಭೀರವಾಗಿ ಷೀಫರ್‌ಪೆನ್ ತೆಗೆದು ವೀರಭದ್ರಪ್ಪನವರು ರುಜು ಹಾಕುತ್ತಿದ್ದರು.

ಶಿವಾನಂದ ಡಿಗ್ರಿ ಪರೀಕ್ಷೆಯಲ್ಲಿ ಉದ್ದೇಶಪೂರ್ವಕವಾಗಿ ಫೇಲ್ ಆಗಿರ ಲಿಲ್ಲ. ಪ್ಯಾಸ್ ಆಗಿದ್ದರೆ ಅವನು ಬೇಡವೆನ್ನುತ್ತಿರಲಿಲ್ಲ; ಫೇಲ್ ಆದುದಕ್ಕೆ ಅವನು ದುಃಖಪಡಲಿಲ್ಲ.

ಕಾಲೇಜಿನಲ್ಲಿ ಶಿವಾನಂದ ತನ್ನ ವಸ್ತ್ರ ಭೂಷಣಗಳಿಗೂ, ಆಟಗಾರಿಕೆಗೂ ಪ್ರಸಿದ್ಧಿಯಾಗಿದ್ದ. ಬಾಖರ್, ಫೈಜಿ, ವೆಸ್ಟ್ರನ್ ಸ್ಟೋರ್ಸ್ ದರ್ಜಿಗಳ ವಿಷಯ ಅವನು ಅಧಿಕಾರವಾಣಿಯಿಂದ ಮಾತನಾಡಲು ಸಮರ್ಥನಾಗಿದ್ದ. ಎಂ.ಜಿ.ಎಂ, ವಾರ್ನರ್ ಬ್ರದರ್ಸ್, ಪ್ಯಾರಮೌಂಟು ಕಂಪೆನಿಯವರ ಚಿತ್ರಗಳಲ್ಲಿ ರೊನಾಲ್ಡ್ ಕೋಲ್ಮನ್, ಟೈರಾನ್ ಪವರ್, ವಾರ್ನರ್ ಬಾಕ್ಸ್ಟರ್, ಮತ್ತಿತರ ನಟರು ಒಳ್ಳೆಯ ಸೂಟು ಧರಿಸಿದ್ದುದನ್ನು ಕಂಡರೆ ಶಿವಾನಂದನ ಮೈಮೇಲೆ ಅದೇ ಬಟ್ಟೆಯ—ಅದೇ ಮಾದರಿ ಹೊಲಿಗೆಯ ಸೂಟು ಕಾಣಬೇಕಾದರೆ ಒಂದೆರಡು ವಾರಗಳು ಮಾತ್ರ ಹಿಡಿಯುತ್ತಿದ್ದವು.

ಫ್ಯಾಷನ್ ಮಾಡುವುದರಲ್ಲಿ ಶಿವಾನಂದ, ಎಷ್ಟು ದಕ್ಷನಾಗಿದ್ದನೋ ಕ್ರಿಕೆಟ್ ಆಟದಲ್ಲಿಯೂ ಅಷ್ಟೇ ದಕ್ಷನಾಗಿದ್ದ. ಅವನ 'ಗುಗ್ಗಲಿ ಬೌಲಿಂಗ್' ಕಾಲೇಜ್ ಟೀಮಿನಲ್ಲಿ ಪ್ರಸಿದ್ಧವಾಗಿತ್ತು. ಎಂ. ಸಿ. ಸಿ. ಟೀಮಿನ ಮೇಲೆ ಆಡಿದ ಅವನ ಖ್ಯಾತಿ ಅವನ ಐದಡಿ ಹತ್ತಂಗುಲ ಎತ್ತರವನ್ನು ಮತ್ತಷ್ಟು ಎತ್ತರಿಸಿತ್ತು.

ಶಿವಾನಂದ ಇಂಗ್ಲಿಷ್ ಚಿತ್ರಗಳನ್ನು ನೋಡುತ್ತಿದ್ದುದಕ್ಕಿಂತಲೂ ಹೆಚ್ಚಾಗಿ ಭಾರತೀಯ ಚಿತ್ರಗಳನ್ನು ನೋಡುತ್ತಿದ್ದ. ಅಶೋಕ್ ಕುಮಾರ್, ಸೈಗಲ್, ಪೃಥ್ವಿರಾಜ್, ಚಂದ್ರಮೋಹನ್, ಸೊಹ್ರಾಬ್ ಮೋದಿ, ಶಾಂತಾ ಆಪ್ಟೆ, ದುರ್ಗಾಖೋಟೆ, ಲೀಲಾ ಚಿಟ್ನೀಸ್, ನಸೀಂ, ವನಮಾಲಾ ಅವನ ಅಚ್ಚುಮೆಚ್ಚಿನ ನಟನಟಿಯರಾಗಿದ್ದರು. 'ನ್ಯೂ ಥಿಯೇಟರ್ಸ್' ಕಂಪೆನಿಯವರ ಚಿತ್ರಗಳೆಂದರೆ ಅವನಿಗೆ ಸಾಕ್ಷಾತ್ ಕೈಲಾಸದರ್ಶನವಾದಂತೆ. ಆ ಕೈಲಾಸದಲ್ಲಿ ಸೈಗಲನೇ ಪ್ರತ್ಯಕ್ಷ ಪರಮೇಶ್ವರ; ಕಾನನಬಾಲಳೇ ಪ್ರತ್ಯಕ್ಷ ಪರಮೇಶ್ವರಿ. ದೇವಕಿ ಬೋಸ್, ನಿತಿನ್ ಬೋಸರೇ ನಂದಿ ಭೃಂಗಿಯರು, ಸೈಗಲ್, ಪಂಕಜ್ ಮಲ್ಲಿಕರ ಸಂಗೀತಕ್ಕೆ ಅವನ ಸಕಲಚೇತನವೂ ನಿಮಿರೇಳುತ್ತಿತ್ತು.

ಕಾಲೇಜಿನ ಸಮಾರಂಭಗಳಲ್ಲಿ ಶಿವಾನಂದನ ಗೆಳೆಯರು ಅವನನ್ನು ಹುರಿದುಂಬಿಸಿ 'ಫಿಲ್ಮ್ ಹಿಟ್ಸ್' ಹೇಳಿಸುತ್ತಿದ್ದರು. ಅವನ ಹಾಡುಗಾರಿಕೆಯನ್ನು ಮೆಚ್ಚಿಕೊಂಡ ಶ್ರಾವಕರು ಅವನನ್ನು ಸೈಗಲ್ಲಿನ ದ್ವಿತೀಯ ಅವತಾರವೆಂದು ಭಾವಿಸಲಾರಂಬಿಸಿದರು. ಅವರ ಭಾವನೆ ತಪ್ಪಲ್ಲ ಎಂದು ಸಮರ್ಥಿಸುವಂತೆ ತಾನೂ ಹಾಗೆಯೇ ಭಾವಿಸತೊಡಗಿದ. ಶಿವಾನಂದ ಪಾತ್ರವಹಿಸದೆ ಕಾಲೇಜ್ ನಾಟಕಗಳು ಆಗುವ ಹಾಗೇ ಇರಲಿಲ್ಲ

ಶಿವಾನಂದನಿಂದ ಸದಾ ಉಪಕಾರ ಪಡೆಯುತ್ತಿದ್ದ ಮಹಂತಯ್ಯ ಅವನ ಅಹಂಭಾವಕ್ಕೆ ತಪ್ಪದೆ ಆಜ್ಯ ಹುಯ್ಯುತ್ತಿದ್ದ

"ನೀನು ಫಿಲ್ಮ್ ಪ್ರಪಂಚಕ್ಕೆ ಕಾಲಿಟ್ಟರೆ ಶಿವೂ, ಅಲ್ಲಿ ಮಹಾ ಕ್ರಾಂತಿಯಾಗಿಬಿಡುತ್ತದೆ. ಅಶೋಕ್ ಕುಮಾರ್ ಮೊದಲಾದವರು ನಿನ್ನಮುಂದೆ ನಿಲ್ಲಲಾರದೆ ಫಿಲ್ಮ್ ಪ್ರಪಂಚವನ್ನೇ ಬಿಟ್ಟುಬಿಟ್ಟರೂ ನಾನೇನೂ ಆಶ್ಚರ್ಯಪಡುವುದಿಲ್ಲ"

"ನೀನು ಹೇಳುವುದು ಸರಿ ಮಹಂತೂ–ಆದರೆ ಹೊರಗಿನವರು ನಮಗೆ ಅವಕಾಶವೆಲ್ಲಿಕೊಡುತ್ತಾರೆ ಹೇಳು. ಬೊಂಬಾಯಿ ಸ್ಟೂಡಿಯೋಗಳಲ್ಲಿ ಗುಜರಾತಿ, ಮರಾಟಿಗರ ಪ್ರಾಬಲ್ಯ–ಅವರು ನಮ್ಮನ್ನು ಹತ್ತಿರವೂ ಸೇರಿಸುವುದಿಲ್ಲ. ಕಲ್ಕತ್ತೆಯ ಸ್ಟುಡಿಯೋಗಳು ಬಂಗಾಳಗಳಿಗೆ ಮೀಸಲು. ಬಂಗಾಳಿಗಳಲ್ಲದವರನ್ನು ಅವರು ಸ್ಟೂಡಿಯೋ ಒಳಕ್ಕೇ ಬಿಡುವುದಿಲ್ಲ."

"ನೀನು ಪ್ರಯತ್ನಮಾಡೋದಿಕ್ಕೆ ಮುಂಚೆಯೇ ಅಪಶಕುನ ನುಡಿಯುತ್ತಿದ್ದೀಯಲ್ಲಯ್ಯಾ ನಾನು ಹೇಳುವ ವಿಚಾರ ಸ್ವಲ್ಪ ಗಮನಿಸು. ಮುಂಬಯಿಯಿಂದ ಬರುವ ಚಿತ್ರಗಳು ಯಾರ ಬಲದ ಮೇಲೆ ನಡೆಯುತ್ತಿವೆ ಗೊತ್ತೇ?"

"ಶಾಂತಾ ಆಪ್ಟೆ, ದುರ್ಗಾಖೋಟೆ."

"ಕಲ್ಕತ್ತೆಯ ಚಿತ್ರಗಳು?"

"ಉಮಾ, ಕಾನನ್ ಬಾಲ."

"ಈಗಿನ ಹಿಂದೀ ಚಿತ್ರಗಳಲ್ಲಿ ಸರಿಯಾದ ನಾಯಕ ಇಲ್ಲವೆನ್ನುವುದನ್ನು ಒಪ್ಪುತ್ತೀಯೋ?"

"ಒಪ್ಪಲೇಬೇಕಾಗಿದೆ."

"ನಿನ್ನಂಥ ಆರ್ಟಿಸ್ಟ್ ಸಿಕ್ಕಿದರೆ ಯಾರು ಬಿಡುತ್ತಾರಯ್ಯ. ಸುಮ್ಮನೆ ಶಾಂತಾರಾಮರಿಗೊಂದು, ಸೊಹ್ರಾಬ್ ಮೋದಿಯವರಿಗೊಂದು, ದೇವಕೀ ಬೋಸರಿಗೊಂದು ಮಧು ಬಾನರ್ಜಿಯವರಿಗೊಂದು ಕಾಗದ ಬರೆದು ನಿನ್ನ ಫೋಟೋ ಕಳುಹಿಸು. ಉತ್ತರ ಏನು ಬರುತ್ತದೆ ನೀನೇ ನೋಡುವೆಯಂತೆ!"

"ನನಗೆ ಛಾನ್ಸ್ (Chance) ಇದೆಯಂತೀಯೇನು?"

"ಪ್ರಯತ್ನ ಮಾಡುವುದರಲ್ಲಿ ಏನು ನಷ್ಟ? ಪೋಸ್ಟ್ ಖರ್ಚು, ಫೋಟೋ ಖರ್ಚು ತಾನೆ ಹೋಗುವುದು"

"ನೀನೇ ನನ್ನ ಸೆಕ್ರೆಟರಿ ಆಗಿ ಪತ್ರವ್ಯವಹಾರ ಮಾಡಯ್ಯಾ. ನನ್ನ ಅದೃಷ್ಟ ಖುಲಾಯಿಸಿದರೆ ನಿನ್ನ ಅದೃಷ್ಟವೂ ಖುಲಾಯಿಸಿತೆಂದು ತಿಳಿದುಕೋ."

ಬಗೆಬಗೆಯಾಗಿ ಫೋಟೋ ತೆಗಿಸಿ ಶಿವಾನಂದ ಅವುಗಳ ಪ್ರತಿಗಳೊಂದಿಗೆ ಪ್ರಸಿದ್ಧ ಸಿನೀಮಾ ಕಂಪೆನಿಯವರಿಗೆ ಮಹಂತಯ್ಯನ ಕೈಯಲ್ಲಿ ಕಾಗದ ಬರೆಸಿದ.

ಹದಿನೈದು ದಿವಸಗಳ ತರುವಾಯ ಪುಣೆಯಿಂದ ಶಾಂತಾರಾಮರ ಉತ್ತರ ಬಂದಿತು. 'ಸದ್ಯಕ್ಕೆ ಕೆಲಸ ಖಾಲಿಯಿಲ್ಲ.' ಒಂದೆರಡು ದಿನಗಳಾದನಂತರ ಭಾಲ್. ಜಿ. ಪೆಂಡಾರ್ಕರ್ ಕಾಗದ, ಪಿ. ಕೆ. ಅತ್ರೆ ಕಾಗದ, ಬಾಬೂರಾವ್ ಪೆಂಡಾರ್ಕರ್ ಕಾಗದಗಳು ಬಂದವು. ಅವೇ ಪಲ್ಲವಿ—'ಕೆಲಸ ಖಾಲಿಯಿಲ್ಲ.' ನಾಲ್ಕು ದಿನಗಳು ಬಿಟ್ಟು ಸೊಹ್ರಾಬ್ ಮೋದಿಯವರ ಕಾಗದ ಬಂದಿತು. ಅವರಲ್ಲಿಯೂ 'ಕೆಲಸ ಖಾಲಿಯಿಲ್ಲ'ವೆಂದು ಸೂಚಿತವಾಗಿದ್ದರೂ 'ನಿಮ್ಮ ವ್ಯಕ್ತಿತ್ವ ಚೆನ್ನಾಗಿದೆ. ನಿರಾಶೆಯಾಗಬೇಡಿ. ನಾನು ಮುಂದಿನ ಚಿತ್ರ ಕೈಗೆ ತೆಗೆದು ಕೊಂಡಾಗ ನಿಮ್ಮ ಅಪ್ಲಿಕೇಷನ್‌ಗೆ ಗಮನ ಕೊಡುತ್ತೇನೆ' ಎಂದಿತ್ತು. ಮಹಂತಯ್ಯ ವಿಜಯೋತ್ಸಾಹದಿಂದ ಗೆಳೆಯನ ಬೆನ್ನು ಚಪ್ಪರಿಸಿದ.

ತಮ್ಮ ಪತ್ರಗಳಿಗೆ ಬಂದ ಮಾರುತ್ತರ ಕಂಡು ಶಿವಾನಂದನಿಗೆ ನಿರುತ್ಸಾಹ ವಾಯಿತು. ತನ್ನ ಬಗೆಬಗೆಯ ಭಾವಭಂಗಿಯ ಚಿತ್ರಗಳನ್ನು ಮುಂದೆ ಹರಡಿ ಕೊಂಡು ಅವುಗಳನ್ನು ಅಭಿಮಾನ ಆನಂದದಿಂದ ದಿಟ್ಟಿಸಿ ನೋಡುತ್ತಾ ಮುಂಬಯಿ, ಕಲ್ಕತ್ತೆಗಳಿಂದ ತಾರು ಬರುತ್ತವೆಂದು ನಿರೀಕ್ಷಿಸುತ್ತಿದ್ದ. ಮೊದಲನೆಯ ತಿಂಗಳಿನಿಂದಲೇ ಐದು ಸಾವಿರ ರೂಪಾಯಿ ಸಂಬಳ ಖಂಡಿತ ಸಿಕ್ಕುತ್ತದೆಂದು ಆಸೆಪಟ್ಟುಕೊಂಡಿದ್ದ. ಆವನ ಕನಸು ತಿರುಕನ ಕನಸಾಯಿತು.

ಶಿವಾನಂದನ ನಿರುತ್ಸಾಹವನ್ನು ಹೋಗಲಾಡಿಸಿ ಅವನಲ್ಲಿ ಮತ್ತೆ ಹುರುಪು ತುಂಬಬೇಕಾದರೆ ಮಹಂತಯ್ಯನಿಗೆ ಸಾಕುಸಾಕಾಗಿ ಹೋಯಿತು. ಆದರೆ ಮಧು ಬಾನರ್ಜಿಯವರಿಂದ ಬಂದ ಕಾಗದ ಮತ್ತೆ ಆಶಾವೃಕ್ಷವನ್ನು ಚಿಗುರಿಸಿತು.

"ನಿಮ್ಮಂಥ ವಿದ್ಯಾವಂತರು ಚಲಚ್ಚಿತ್ರ ರಂಗಕ್ಕೆ ಬರುವುದು ನನಗೆ ಸಂತೋಷವನ್ನುಂಟುಮಾಡಿದೆ. ನಿಮ್ಮ ಭಾವ ಚಿತ್ರಗಳನ್ನು ನೋಡುವಲ್ಲಿ ನಿಮಗೆ ಚಲಚ್ಚಿತ್ರರಂಗದಲ್ಲಿ ಉಜ್ವಲ ಭವಿಷ್ಯ ಕಾದಿದೆಯೆಂದು ನನಗೆ ಭಾಸವಾಗುತ್ತದೆ. ನಿಮಗೆ ಸದ್ಯಕ್ಕೆ ಯಾವ ಸಹಾಯ ಮಾಡುವುದಕ್ಕೂ ನನಗೆ ಸಾಧ್ಯವಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ. ನಿಮಗೆ ಹಿಂದಿ ಅಥವಾ ಬಂಗಾಳಿ ಭಾಷೆ ಬರದಿರುವುದೊಂದು ದೊಡ್ಡ ಕೊರತೆ. ನೀವು ಹಿಂದಿ ಅಭ್ಯಾಸಮಾಡಿಕೊಂಡು ನನಗೆ ತಿಳಿಸಿದರೆ ನನ್ನ ಕೈಯಲ್ಲಾಗುವ ಸಹಾಯ ಮಾಡುತ್ತೇನೆ."

"ಇನ್ನೇನಯ್ಯ ನಿನಗೆ ಬೇಕಾದದ್ದು. ನಿನ್ನ ಭಾಗ್ಯದ ಬಾಗಿಲು ತೆಗೆಯಲು ಮಧು ಬಾನರ್ಜಿ ಕಾದಿದ್ದಾರೆ."

"ನಾನು ಹಿಂದಿ ಚೆನ್ನಾಗಿ ಕಲಿತ ಮೇಲೆ ತಾನೆ ಮಾತು?"

"ಅದೇನು ದೊಡ್ಡ ವಿಷಯ–ಆರು ವಾರಗಳಲ್ಲಿ ಹಿಂದಿ ಕಲಿಸುತ್ತೇವೆಂದು ಹಿಂದಿ ಪ್ರಚಾರಕರು ಬೊಬ್ಬೆ ಹೊಡೆಯುತ್ತಿದ್ದಾರಲ್ಲಾ."

"ಹಾಗಾದರೆ ಒಂದು ಕೈ ನೋಡಲೇನು ಮಹಂತೂ."

"ಎಣ್ಣೆ ಬಂದಾಗ ಕಣ್ಣುಮುಚ್ಚಿಕೊಂಡರೆ ಲೋಕ ನಿನ್ನನ್ನು ಡಡ ಎಂದು ಕರೆಯುತ್ತದೆ."

ಶಿವಾನಂದ ಕಾಲಹರಣ ಮಾಡಲಿಲ್ಲ. ಹಿಂದೀ ಪ್ರಚಾರಕ ಜ್ವಾಲಾ ಪ್ರಸಾದನನ್ನು ಗೊತ್ತುಮಾಡಿ ಹಿಂದಿ ಶಿಕ್ಷಣವನ್ನಾರಂಭಿಸಿದ. ಆರುವಾರಗಳು ಕಳೆದವು – ಇನ್ನೂ ಪಹಿಲಿ ಪುಸ್ತಕದಲ್ಲಿಯೇ ಗುರುಶಿಷ್ಯರಿಬ್ಬರೂ ತಿಂಡಾಡುತ್ತಿದ್ದರು. ಹನ್ನೆರಡು ವಾರಗಳು ಕಳೆದವು - ಶಿವಾನಂದ ಒಂದೊಂದು ಹಿಂದಿ ಮಾತು ತಾನೆ ಆಡಲಾರಂಭಿಸಿದ. ಹದಿನೆಂಟು ವಾರಗಳು ಕಳೆಯುವ ವೇಳೆಗೆ ಶಿವಾನಂದನಿಗೆ ಇತರರು ಹಿಂದಿ ಮಾತನಾಡಿದರೆ ಅರ್ಥವಾಗುವಂತಾಯಿತು. ಇಪ್ಪತ್ತುನಾಲ್ಕು ವಾರ ಮುಗಿಯುವ ವೇಳೆಗೆ ಶಿವಾನಂದ ತಪ್ಪು ತಪ್ಪು ಹಿಂದಿ ಮಾತನಾಡಲಾರಂಭಿಸಿದ. ಶಿಷ್ಯನ ಅಮೋಘ ಜಾಣ್ಮೆಯನ್ನು ಕಂಡು ಜ್ವಾಲಾ ಪ್ರಸಾದ ಪರಮಾನಂದಭರಿತನಾದ.

ಶಿವಾನಂದ ಕಲ್ಕತ್ತೆಗೆ ಹೊರಡಲು ಎರಡೇ ಆತಂಕಗಳಿದ್ದದ್ದು. ಒಂದು ಮಧು ಬಾನರ್ಜಿ ಒಪ್ಪಿ ಬಾರೆಂದು ಅವನನ್ನು ಕರೆಯಬೇಕಾಗಿತ್ತು; ಎರಡು ಸೋದರಮಾವ ವೀರಭದ್ರಪ್ಪನವರು ಅಳಿಯನ ಪ್ರಯಾಣಕ್ಕೆ ಒಪ್ಪಿ ಕೈತುಂಬ ಹಣ ಕೊಡಬೇಕಾಗಿತ್ತು.

ಶಿವಾನಂದ ಬಾನರ್ಜಿಯವರಿಗೆ ಕಾಗದ ಬರೆದು ತಾನು ಹಿಂದಿಯಲ್ಲಿ ಶಿಕ್ಷಣ ಪಡೆದಿರುವ ವಿಷಯ ತಿಳಿಸಿದ. ಅದಕ್ಕೆ ಬಾನರ್ಜಿ ಉತ್ತರ ಬರೆಯುತ್ತಾ

"ಸದ್ಯ ನಾವು ಸಂಬಳಕ್ಕೆ ಹೊಸದಾಗಿ ಯಾರನ್ನೂ ಗೊತ್ತುಮಾಡಿ ಕೊಳ್ಳಲು ಸಾಧ್ಯವಿಲ್ಲ. ನೀವು ಸ್ವಂತ ಖರ್ಚಿನಲ್ಲಿ ಇಲ್ಲಿಗೆ ಬಂದು ಇರ ಲೊಪ್ಪಿದರೆ ಬರಬಹುದು. ನಾನೀಗಲೇ ಯಾವ ವಾಗ್ದಾನಮಾಡಲು ಸಿದ್ಧ ವಾಗಿಲ್ಲ. ನಿಮ್ಮ ಉಪಯುಕ್ತತೆ ನೋಡಿಕೊಂಡು ನನ್ನ ಕೈಯಲ್ಲಾದ ಸಹಾಯ ಮಾಡುತ್ತೇನೆ."

ಶಿವಾನಂದನ ಉತ್ಸಾಹ ಪಿನ್ ತಾಗಿಸಿಕೊಂಡ ಬಲೂನಿನಂತೆ ಇಳಿದು ಹೋಯಿತು. ಮಹಂತಯ್ಯ ಮತ್ತೆ ಉತ್ಸಾಹ ನೀಡಿ.

"ಹುಚ್ಚಾ ಕೇಳಿದ ಕೂಡಲೆ - ನಿನ್ನ ಮುಖ ಕೂಡ ನೋಡದೆ ಯಾರಾದರೂ ಕೆಲಸ ಕೊಡುತ್ತಾರೇನಯ್ಯ. ಬಾನರ್ಜಿ ನಿನಗೆ ಸೊಗಸಾದ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಸುಮ್ಮನೆ ಕಲ್ಕತ್ತೆಗೆ ಹೋಗಿ ಅವರ ಜತೆ ಯಲ್ಲಿರು. ಸಂದರ್ಭ ತಾನೇ ಒದಗಿ ಬಂದು ನಿನ್ನ ರೊಟ್ಟಿಜಾರಿ ತುಪ್ಪದಲ್ಲಿ ಬೀಳುತ್ತದೆ."

"ಮಾವನನ್ನು ಒಪ್ಪಿಸುವುದು! ಸಿನೀಮಾ ಸೇರುತ್ತೇನೆಂದರೆ ಅವನು ಕಿಲುಬು ಕಾಸು ಕೂಡ ಕೊಡುವುದಿಲ್ಲ."

"ಸಿನೀಮಾ ಸುದ್ದಿಯೇ ಎತ್ತಬೇಡ. ಕಲ್ಕತ್ತ ವಿಶ್ವವಿದ್ಯಾನಿಲಯದಲ್ಲಿ ಟ್ಯಾಕ್ಸಿಡರ್ಮರಿ ಕೋರ್ಸ್ ತೆಗೆದುಕೊಳ್ಳುತ್ತೇನೆಂದು ಹೇಳು."

"ಹಾಗೆಂದರೇನಯ್ಯ?"

"ಪ್ರಾಣಿಗಳ ಚರ್ಮ ಸುಲಿಯುವ ಕೆಲಸ."

"ಶಿವಶಿವ! ಮಾವ ಅದಕ್ಕೆ ಒಪ್ಪುತ್ತಾನೆಯೇ?"

"ಇನ್ನೇನಾದರೂ ಹೇಳು – ಎಲೆಕ್ಟ್ರೋ ರೇಡಿಯಾಲಜಿ ಎಂದೆನ್ನು."

"ಮಾವ ಘಾಟಿ ಕಣಯ್ಯ. ಅದಕ್ಕೆಲ್ಲಾ ಒಪ್ಪುವುದಿಲ್ಲ."

"ನೋಡು ಶಿವೂ – ನಿನ್ನ ಕಂಸ ಮಾವ ಒಪ್ಪುವ ಒಂದು ದಾರಿ ಹೇಳಿ ಕೊಡುತ್ತೇನೆ. ಕಲ್ಕತ್ತಾ ವಿಶ್ವವಿದ್ಯಾನಿಲಯದ ಪರೀಕ್ಷೆಗಳು ನಮ್ಮ ವಿಶ್ವ

ವಿದ್ಯಾನಿಲಯದ ಪರೀಕ್ಷೆಗಳಿಗಿಂತ ಸುಲಭ. ಇದು ಲೋಕಕ್ಕೆ ತಿಳಿದ ಅಂಶ. ಕಲ್ಕತ್ತೆಗೆ ಹೋಗಿ ಡಿಗ್ರಿ ಮುಗಿಸಿಕೊಂಡು ಬರುತ್ತೇನೆಂದು ಹೇಳು. ನಿಮ್ಮ ಮಾವ ಬೇಡ ಎನ್ನಲಾರ ''

'' ಹೌದಯ್ಯ. ಈ ಆರ್ಗ್ಯುಮೆಂಟ್ (argument) ಹಿಡಿಯುತ್ತೆ ''

ಎಂದು ಹೇಳಿದ. ಮಹಂತಯ್ಯ ಯೋಚಿಸಿದ್ದಂತೆ ಆರ್ಗ್ಯುಮೆಂಟ್ ವೀರಭದ್ರಪ್ಪನವರಿಗೆ ಹಿಡಿಯಿತು ಅಳಿಯನಿಗೆ ನಾಲ್ಕು ಹೊಸ ಸೂಟು ಹೊಲಿಸಿಕೊಟ್ಟು, ಕೈತುಂಬ ಹಣಕೊಟ್ಟು ಕಲ್ಕತ್ತೆಗೆ ಸುಖಪ್ರಯಾಣ ಮಾಡಿಸಿದರು.

ಕಲ್ಕತ್ತೆ ತಲುಪಿದ ಕೂಡಲೆ ಶಿವಾನಂದನಿಗೆ ಬಾನರ್ಜಿಯವರ ದರ್ಶನ ಸಿಗಲಿಲ್ಲ. ಅವರು ತಮ್ಮ ಪಿಕ್ಚರಿನ ' ಔಟ್ ಡೋರ್ ಷೂಟಿಂಗ್ ' ಗೆ (out-door shooting) ಹೋಗಿದ್ದವರು ಒಂದು ವಾರದನಂತರ ಬಂದರು.

ಶಿವಾನಂದನನ್ನು ಸಂತೋಷದಿಂದ ಬಾನರ್ಜಿ ಸ್ವಾಗತಿಸಿ,

'' ಕೆಲಸ ಖಾಲಿಯಾದ ಮೇಲೆ ತಿಳಿಸುತ್ತೇನೆಂದು ನಾನು ಬರೆದಿದ್ದೆ. ನೀವು ಬಂದೇ ಬಿಟ್ಟಿರಲ್ಲಾ. ''

'' ನಿಮ್ಮ ಜತೆಯಲ್ಲಿದ್ದು ನಿಮ್ಮ ಕೆಲಸ ನೋಡುತ್ತಿದ್ದರೆ ಅದೇ ನನಗೆ ಒಂದು ಶಿಕ್ಷಣವಾಗುತ್ತದೆ ನನ್ನ ಭಾಷೆಯೂ ಕುದುರುತ್ತದೆ—ಅಷ್ಟಕ್ಕೆ ಅವ ಕಾಶ ಮಾಡಿಕೊಡಬೇಕು. ''

ಕಲ್ಕತ್ತೆಯಲ್ಲಿರುವುದಕ್ಕೆ ಬಹಳ ಕರ್ಚಾಗುತ್ತದೆ. ''

'' ಆ ಬಗ್ಗೆ ತಾವು ಯೋಚಿಸಬೇಡಿ. ನನಗೆ ಮನೆಯ ಸಹಾಯ ಚೆನ್ನಾಗಿದೆ. ''

'' ನನ್ನ ಅಸಿಸ್ಟೆಂಟಾಗಿ ಇರಿ. ನನ್ನ ಫಸ್ಟ್ ಅಸಿಸ್ಟೆಂಟ್ ಶೈಲೇಂದ್ರ ಮುಖರ್ಜಿ ಪರಿಚಯ ಮಾಡಿಕೊಳ್ಳಿ. ಅವರು ನಿಮಗೆ ಎಲ್ಲಾ ಸಹಾಯ ಮಾಡುತ್ತಾರೆ. ''

ಸಿನೀಮಾ ಕಂಪೆನಿಯಲ್ಲಿ ಡೈರೆಕ್ಟರ್ ಅಸಿಸ್ಟೆಂಟಾಗಿರುವುದೆಂದ ರೇನೆಂಬುದು ಶಿವಾನಂದನಿಗೆ ಕ್ರಮಕ್ರಮೇಣ ಅನುಭವವಾಗತೊಡಗಿತು.

ಬಾನರ್ಜಿಯವರು ಸೆಟ್ಟಿನ ಮೇಲಿದ್ದಾಗ ' ಚಹಾ ' ಎನ್ನುತ್ತಿದ್ದರು. ಅವರು ಫಸ್ಟ್ ಅಸಿಸ್ಟೆಂಟ್ ಶೈಲೇಂದ್ರ, ಸೆಕೆಂಡ್ ಅಸಿಸ್ಟೆಂಟ್ ಭೂಪೇನ್ ಮುಖ ನೋಡಿ ' ಚಹಾ ' ಎನ್ನುತ್ತಿದ್ದ; ಅವನು ಥರ್ಡ್ ಅಸಿಸ್ಟೆಂಟ್ ಶಿವಾ ನಂದನ ಮುಖ ನೋಡಿ ' ಚಹಾ ' ಎಂದು ಚೀರುತ್ತಿದ್ದ. ಶಿವಾನಂದ ಓಡಿ ಹೋಗಿ ' ಚಹಾ ' ತಂದು ಕೊಡಬೇಕಾಗಿತ್ತು. ಸೆಟ್ ಮೇಲಿದ್ದ ನಟನಟಿ

ಯರು ಶಿಷೆಯೆಂದರೆ ಫ್ಯಾನ್ ತಿರುಗಿಸುವುದು, ಬಾಯಾರಿಕೆಯೆಂದರೆ ಅವರಿಗೆ ಬಿಸಿ ಚಹಾ ಒದಗಿಸುವುದು, ಅವರ ಮುಖದಲ್ಲಿ ಬೆವರುನೀರು ಇಳಿಯುತ್ತಿದ್ದರೆ 'ಮೇಕಪ್' ಕೆಡದಂತೆ ಒತ್ತುಕಾಗದ ತೆಗೆದುಕೊಂಡು ಬೆವರುನೀರು ಒರಸುವುದು – ಡೈರೆಕ್ಟರ್ ಸಾಹೇಬರಿಗೆ ಫೋನ್‌ಕಾಲ್ ಬಂದರೆ ಅದಕ್ಕೆ ಉತ್ತರ ಹೇಳುವುದು ಇವೆಲ್ಲಾ ಅಸಿಸ್ಟೆಂಟರ ಕಾರ್ಯಭಾಗವಾಗಿತ್ತು. ಕಲ್ಕತ್ತೆಗೆ ಬಂದಮೇಲೆ ಶಿವಾನಂದ - 'ಆನಂದಬಾಬು'ವಾಗಿದ್ದ,

ಎರಡು ತಿಂಗಳು ಅಸಿಸ್ಟೆಂಟ್‌ಗಿರಿ ಮಾಡಿ ಶಿವಾನಂದನಿಗೆ ಸಾಕು ಸಾಕಾಗಿ ಹೋಯಿತು. ಅವನು ಅಸಮಾಧಾನ ವ್ಯಕ್ತಪಡಿಸಿದಾಗ ಶೈಲೆನ್ ಬಾಬು ನಗುತ್ತಾ

"ಆನಂದ್‌ಬಾಬು ನೀವಿನ್ನೂ ಚಿಕ್ಕವರು - ಅನನುಭವಿಗಳು. ನಾನು ಬಾನರ್ಜಿಯವರ ಅಸಿಸ್ಟೆಂಟಾಗಿ ಬಂದು ಎಷ್ಟು ಕಾಲವಾಯಿತೆಂದು ತಿಳಿದಿರುವಿರಿ?"

"ಎಷು ಕಾಲವಾಯಿತು."

"ನಾಳೆ ವೈಶಾಖಕ್ಕೆ ನಾಲ್ಕುವರ್ಷ. ಎರಡು ತಿಂಗಳು ಚಹಾ ತಂದು ಕೊಟ್ಟೇ ನಿಮಗಿಷ್ಟು ಬೇಸರವಾಗಿರಬೇಕಾದರೆ ನಾಲ್ಕು ವರ್ಷ ಸರ್ವೀಸು ಮಾಡಿರುವ ನನಗೆ, ಎರಡುವರ್ಷ ಸರ್ವೀಸು ಮಾಡಿರುವ ಭೂಪೆನ್ ಬಾಬುಗೆ ಎಷ್ಟು ಬೇಸರವಾಗಿರಬಹುದು ವಿಚಾರಮಾಡಿ."

"ನಾಲ್ಕುವರ್ಷದಿಂದ ಚಹಾ ಸಮಾರಾಧನೆ ಬಿಟ್ಟು ನೀವು ಇನ್ನೇನೂ ಮಾಡಿಲ್ಲವೇ?"

"ಮಾಡಿದ್ದೇನೆ. ಬಾಬುಗಳ ಅಟ್ಯಾಚಿ ಕೇಸ್ ಹೊತ್ತಿದ್ದೇನೆ. ಬಾಬುಗಳಿಗೆ ಟ್ಯಾಕ್ಸಿ ತಂದುಕೊಟ್ಟಿದ್ದೇನೆ. ಷೂಟಿಂಗ್ ವೇಳೆ ಬಂದಿತೆಂದರೆ ನಟನಟಿಯರನ್ನು ಸೆಟ್ಟಿಗೆ ಕರೆದುಕೊಂಡು ಬಂದಿದ್ದೇನೆ. ನಟನಟಿಯರು ಮುನಿಸಿಕೊಂಡರೆ ಪೇಟೆಗೆ ಓಡಿಹೋಗಿ ಅವರು ಕೇಳಿದ್ದು ತಂದುಕೊಟ್ಟಿದ್ದೇನೆ."

"ಸಿನಿಮಾ ದಿಗ್ದರ್ಶನ."

"ದಿಕ್ - ದರ್ಶನ! ನೀವು ಎಲ್ಲಿದ್ದೀರಿ ಬಾಬು. ಇದುವರೆಗೆ ನಾನು ಕ್ಯಾಮರಾ ಮುಟ್ಟಿಲ್ಲ. ರಿಕಾರ್ಡಿಂಗ್ ವ್ಯಾನ್ ಒಳಗೆ ನೋಡಿಲ್ಲ. ಎಡಿಟಿಂಗ್ ರೂಮ್ ಪ್ರವೇಶಮಾಡಿಲ್ಲ. ಲ್ಯಾಬೊರೇಟರಿಗಂತೂ ಯಾರನ್ನೂ ಸೇರಿಸುವುದಿಲ್ಲ."

"ಬಾಬೂ–ಹಾಗಾದರೆ ಯಾವ ಪುರುಷಾರ್ಥಕ್ಕೆ ನೀವು ಇಲ್ಲಿ ಕಚ್ಚಿ ಕೊಂಡಿರುವಿರಿ."

"ದೊಡ್ಡಬಾಬುಗಳ ಒಂದು ಸರ್ಟಿಫಿಕೇಟಿಗೆ - 'ಶೈಲೆನ್‌ಬಾಬು ನನ್ನ ಅಸಿಸ್ಟೆಂಟರಾಗಿ ನಾಲ್ಕು ವರ್ಷ ಬಹಳ ದಕ್ಷತೆಯಿಂದ ಕೆಲಸಮಾಡಿ ನನ್ನ ವಿಶ್ವಾಸ ಗೌರವಗಳಿಗೆ ಪಾತ್ರರಾಗಿದ್ದಾರೆ' ಎಂದು ದೊಡ್ಡ ಬಾಬುಗಳು ಆಸೇ ಮಾರ್ಕಿನ ಕಾಗದದ ಮೇಲೆ ಬರೆದುಕೊಟ್ಟರೆ ನನ್ನ ಕೆಲಸವಾಯಿತು - ಶ್ರಮ ಸಾರ್ಥಕವಾಯಿತು. ಅದರ ಬಲದಿಂದ ನಾನು ಲಕ್ಷಾಂತರ ರೂಪಾಯಿ ಸಂಪಾದಿಸಬಲ್ಲೆ. ಮುಂಬಯಿ ಚಿತ್ರನಿರ್ಮಾಪಕರಿಗೆ ಬೇಕಾದದ್ದು ಅಷ್ಟೆ. ನನ್ನ ಹಿತವಚನ ಕೇಳಿ. ನೀವೂ ಹಲ್ಲುಮುಡಿ ಕಚ್ಚಿ ಇಲ್ಲಿಯೇ ಕೆಲವು ಕಾಲ ನಿಂತು ದೊಡ್ಡ ಬಾಬುಗಳ ಹತ್ತಿರ ಸರ್ಟಿಫಿಕೇಟು ಪಡೆದುಕೊಳ್ಳಿ. ನಿಮ್ಮ ಭವಿಷ್ಯವೂ ಭವ್ಯವಾಗುತ್ತದೆ."

ಶಿವಾನಂದನಿಗೆ ಶೈಲೆನ್‌ಬಾಬುಗಳ ಹಿತೋಕ್ತಿ ಪಥ್ಯವಾಯಿತು.

ಶಿವಾನಂದನ ಸೇವೆಯಿಂದ ಸಂತೃಪ್ತರಾದ ಬಾನರ್ಜಿಯವರು ಅವನ ಮೇಲೆ ಒಂದು ವಿಶೇಷಾನುಗ್ರಹ ತೋರಿದರು. ಅವರು ದಿಗ್ದರ್ಶಿಸುತ್ತಿದ್ದ 'ನಯಾ ಪೂರ್ಣಿಮಾ' ಚಿತ್ರ ಮುಗಿಯುವ ವೇಳೆಗೆ ಒಂದು ಪಾತ್ರದ ಅವಶ್ಯಕತೆ ಬಿತ್ತು. ಪಾತ್ರಕ್ಕೆ ದಷ್ಟಪುಷ್ಟವಾದ ಕಟ್ಟಾಳು ಬೇಕಾಗಿತ್ತು. ನಾಲ್ಕೇ ಮಾತುಗಳು ಆಡಬೇಕಾಗಿತ್ತು. ಒಂದು ದಿನ ಇದ್ದಕ್ಕಿದ್ದಂತೆ ಬ್ಯಾನರ್ಜಿಯವರ ಕಣ್ಣು ಶಿವಾನಂದನ ಕಡೆಗೆ ಹೊರಳಿತು. ಆ ಪಾತ್ರದ ಮಾತುಗಳನ್ನು ಪಾಠಮಾಡಿಕೊಳ್ಳಲು ಅವನಿಗೆ ತಿಳಿಸಿ ಅವನಿಂದ ಪಾತ್ರ ಮಾಡಿಸಿದರು.

ಚಲಚಿತ್ರ ರಂಗದಲ್ಲಿ ನಟನಟಿಯರು, ದಿಗ್ದರ್ಶಕರು ಪಡೆದಿದ್ದ ಸ್ಥಾನ, ಅನುಭವಿಸುತ್ತಿದ್ದ ವೈಭವ ಕಂಡು ಇಂದಲ್ಲ ನಾಳೆ ತನ್ನ ಜೀವನವೂ ಹಾಗೇ ರೂಪುಗೊಳ್ಳುತ್ತದೆಂದು ಶಿವಾನಂದ ಭಾವಿಸಿದ. ಆ ಗುರಿಸಾಧನೆಗಾಗಿ ತನ್ನ ಪ್ರಕೃತ ಪರಿಸ್ಥಿತಿಯನ್ನು ಮರೆಯಲು ಅವನು ಸಿದ್ಧನಾದ

ಬಾನರ್ಜಿಯವರು ದಿಗ್ದರ್ಶಿಸುತ್ತಿದ್ದ ಚಿತ್ರ, ಪ್ರದರ್ಶನಕ್ಕೆ ಸಿದ್ಧವಾಯಿತು. ಸಿಲಲಾಯಿಡ್ ಮೇಲೆ ಮೂರನೆಯ ಅಸಿಸ್ಟೆಂಟ್ ಎಂದು ತನ್ನ ಹೆಸರು ಪ್ರಕಟವಾಗಿದ್ದುದಲ್ಲದೆ ಪಾತ್ರ ವಿವರದಲ್ಲಿಯೂ ತನ್ನ ಹೆಸರು ಬಂದಿದ್ದುದನ್ನು ಕಂಡು ಶಿವಾನಂದನಿಗೆ ಸ್ವರ್ಗವೇ ಲಭಿಸಿದಂತಾಯಿತು. ನಿರೀಕ್ಷಿಸುತ್ತಿದ್ದ 'ಸರ್ಟಿಫಿಕೇಟು' ಶೈಲೆನ್‌ಬಾಬುವಿಗೆ ದೊರೆಯಿತು. ಅದನ್ನು ಶಿವಾನಂದನಿಗೆ ತೋರಿಸುತ್ತಾ

"ನೋಡಿ, ಇನ್ನು ಆರುತಿಂಗಳಲ್ಲಿ ನನ್ನ ಸ್ವಂತ ಚಿತ್ರ ರಜತ ಪರದೆಯ ಮೇಲೆ ತರುತ್ತೇನೆ."

"ನಿಮ್ಮ ಚಿತ್ರಪ್ರಯತ್ನ ಕೈಗೂಡಿದರೆ ನನಗೊಂದು ಅವಕಾಶ ಕಲ್ಪಿಸಿ ಕೊಡುವಿರಾ?"

"ಆಗಬಹುದು. ಅದರಿಂದ ಪ್ರಯೋಜನವಾಗುವುದಿಲ್ಲ. ನನ್ನ ಮೊದಲ ನೆಯ ಚಿತ್ರಕ್ಕೆ ದೊಡ್ಡ ದೊಡ್ಡ ಸ್ಟಾರ್‌ಗಳನ್ನೇ ನಾನು ಆರಿಸಿಕೊಳ್ಳಬೇಕಾಗು ತ್ತದೆ. ನಿಮಗೆ ಯಾವುದಾದರೂ ಸಣ್ಣ ಪುಟ್ಟ ಪಾತ್ರಕೊಡಲು ಸಾಧ್ಯ."

"ಕಥೆ ಯಾವುದು ಆರಿಸಿಕೊಂಡಿದ್ದೀರಿ."

"ಮಹಾಕವಿ ಕಾಳಿದಾಸನ 'ವಿಕ್ರಮೋರ್ವಶೀಯ.' ನಾಯಕನ ಪಾತ್ರಕ್ಕೆ ಪಹರಿ ಸನ್ಯಾಲ್ ಜತೆ ಮಾತನಾಡಿದ್ದೇನೆ."

"ನಾಯಕಿ."

"ಪ್ರಾಯಶಃ ಶಾಂತಾ ಆಪ್ಟೆ ಅಥವಾ ಮೊಲಿನಾ."

"ನಿಮ್ಮ ಪ್ರಯತ್ನಕ್ಕೆ ನಾನು ಜಯಕೋರುತ್ತೇನೆ. ನನ್ನನ್ನು ಮರೆಯ ಬಾರದೆಂದು ಪ್ರಾರ್ಥಿಸಿಕೊಳ್ಳುತ್ತೇನೆ — ನೀವು ದೊಡ್ಡ ಬಾಬುಗಳನ್ನು ಬಿಟ್ಟು ಹೋದರೆ ನಿಮ್ಮ ಸ್ಥಾನಕ್ಕೆ ಯಾರು?"

"ಲ್ಯಾಬೊರೇಟರಿ ಅಸಿಸ್ಟೆಂಟ್ ಅಸಿತ್‌ರಾಯ್ ಗೊತ್ತಷ್ಟೇ?"

"ಗೊತ್ತು."

"ಅವನಿಗೂ ಚಿತ್ರ ದಿಗ್ದರ್ಶನ ಮಾಡಬೇಕೆಂದು ಚಾಪಲ್ಯ. ನನ್ನ ಸ್ಥಾನಕ್ಕೆ ಅವನು ಬರಬಹುದು."

ಕಾಲೇಜ್ ಟರ್ಮು ಮುಗಿದು ಬೇಸಿಗೆಗೆ ಕಾಲೇಜ್ ಬಾಗಿಲು ಹಾಕಿ ದರೂ ಶಿವಾನಂದ ಊರಿಗೆ ಹಿಂದಿರುಗದಿದ್ದುದು ವೀರಭದ್ರಪ್ಪನವರಿಗೆ ಚಿಂತೆಗೆ ಕಾರಣವಾಯಿತು. ಕಲ್ಕತ್ತೆಯಲ್ಲಿದ್ದ ತಮ್ಮ ಗುರಿತಿನವರಿಗೆ ಕಾಗದ ಬರೆದು ಅಳಿಯನ ಯೋಗಕ್ಷೇಮ ತಿಳಿಸಬೇಕೆಂದು ಪ್ರಾರ್ಥಿಸಿದರು. ಅವರು ತಿಳಿಸಿದ ಸುದ್ದಿ ಕೇಳಿ ವೀರಭದ್ರಪ್ಪನವರು ಕೆರಳಿ ಕೆಂಡವಾಗಿ ಕೂಡಲೆ ಊರಿಗೆ ಹಿಂದಿರುಗುವಂತೆ ಸುಗ್ರೀವ ನಿರೂಪ ಕಳುಹಿಸಿದರು.

ಶಿವಾನಂದನಿಗೆ ತುಂಬ ಕಷ್ಟಕ್ಕಿಟ್ಟುಕೊಂಡಿತು. ಕಲ್ಕತ್ತೆಯನ್ನು ಈಗ ಬಿಟ್ಟು ಹೋದರೆ ಇದುವರೆಗೆ ಮಾಡಿದ ಪ್ರಯತ್ನ ನೀರಿನಲ್ಲಿ ಹೋಮ ಮಾಡಿ ದಂತಾಗುತ್ತದೆ, ದೊಡ್ಡಬಾಬುಗಳ ಸರ್ಟಿಫಿಕೇಟ್ ಸಿಕ್ಕುವುದಿಲ್ಲ; ಬಿಟ್ಟು ಹೋಗದಿದ್ದರೆ ಮಾವನ ಕೋಪಕ್ಕೆ ಪಾತ್ರನಾಗಬೇಕಾಗುತ್ತದೆ. ಮಾವನು

ಆಸ್ತಿಗೆಲ್ಲಾ ತಾನೇ ಹಕ್ಕುದಾರನಾಗಿದ್ದಾಗ ಅದನ್ನು ವೃಥಾ ಕಳೆದುಕೊಳ್ಳು ವುದು ಜಾಣತನವಲ್ಲವೆಂದು ಶಿವಾನಂದ ಭಾವಿಸಿದ.

ತನ್ನ ದುಃಖವನ್ನು ಭೂಪೇನ್‌ಬಾಬುಗಳಲ್ಲಿ ತೋಡಿಕೊಂಡು ಅವರ ಸಲಹೆ ಕೇಳಿದ.

"ನೋಡಿ ಬಾಬು, ಚಿತ್ರ ವ್ಯವಸಾಯ ಬಿಸಿಲ್ಗುದುರೆ ಇದ್ದಹಾಗೆ. ಒಡಕು ದೋಣಿ ನಂಬಿಕೊಂಡು ಯಾರೂ ನದಿ ದಾಟುವುದಕ್ಕೆ ಹೋಗುವುದಿಲ್ಲ. ಶ್ರೀಮಂತರಾದ ನಿಮ್ಮ ಮಾವನವರ ಆಗ್ರಹಕ್ಕೆ ತುತ್ತಾಗಿ ನೀವು ಆಸ್ತಿ ಕಳೆದು ಕೊಳ್ಳುವುದು ವಿವೇಕವಲ್ಲ. ಸುಮ್ಮನೆ ಊರಿಗೆ ಹೋಗಿ ನಿಮ್ಮ ಮಾವನವರ ಮನಸ್ಸು ಸಂತೋಷಪಡಿಸಿ."

"ಫಿಲ್ಮ್‌ಸ್ಟಾರ್ ಆಗಬೇಕೆನ್ನುವುದು ನನ್ನ ಇವತ್ತಿನ ಆಸೆಯಲ್ಲ ಬಾಬು. ಬಹಳ ದಿನಗಳ ಆಸೆ. ನನ್ನ ಕನಸಿನ ಗೋಪುರವನ್ನು ನಾನೇ ಕೈಯಾರೆ ಮುರಿದು ಮಾವನ ಅಂಗಡಿಯಲ್ಲಿ ಹೇಗೆ ಅಕ್ಕಿ ಬೇಳೆ ವ್ಯಾಪಾರಮಾಡುತ್ತ ಕೂಡಲಿ."

"ಮೊದಲು ಮಾವನವರ ವಿಶ್ವಾಸ ಗಟ್ಟಿಮಾಡಿಕೊಳ್ಳಿ. ಮುಂದಕ್ಕೆ ಅವರ ಸಹಕಾರದಿಂದ ನೀವೇ ಒಂದು ಚಿತ್ರನಿರ್ಮಾಣ ಮಾಡಬಹುದು."

ನಾನೇನೋ ಪ್ರಯತ್ನ ಮಾಡುತ್ತೇನೆ. ಅದು ಸಫಲವಾದರೆ ನೀವು ಬಂದು ನನಗೆ ನೆರವಾಗುವಿರೇನು?"

"ಬೇಡವೆಂದವರು ಯಾರು? ಸ್ವತಂತ್ರವಾಗಿ ನಾನು ಚಿತ್ರದಿಗ್ದರ್ಶಿಸುವ ಅವಕಾಶ ಸಿಕ್ಕಿದರೆ ಬೇಡವೆನ್ನುತ್ತೇನೆಯೇ? ನಿಮ್ಮ ವೈರ್ ತಲುಪಿದ ನಾಲ್ಕು ದಿವಸಗಳೊಳಗೆ ನಾನು ನಿಮ್ಮ ಊರಿನಲ್ಲಿರುತ್ತೇನೆ."

"ಹಾಗಾದರೆ ಒಪ್ಪಂದ ಮಾಡಿಕೊಳ್ಳೋಣ. ನನ್ನ ಪ್ರಯತ್ನ ಸಫಲ ವಾದರೆ ನಿಮ್ಮನ್ನು ಕರೆಸಿಕೊಳ್ಳುತ್ತೇನೆ; ನಿಮ್ಮ ಪ್ರಯತ್ನ ಸಫಲವಾದರೆ ನೀವು ನನ್ನನ್ನು ಕರೆಸಿಕೊಳ್ಳಬೇಕು."

"ಆಗಬಹುದು."

"ದೊಡ್ಡ ಬಾಬುಗಳು ನನಗೊಂದು ಮೆಚ್ಚುಗೆಯೋಲೆ ಕೊಡಲಾರರೇ? ಅವರು ಕೊಡುವಂತೆ ನೀವು ಪ್ರಯತ್ನಿಸಬಾರದೇಕೆ?"

"ಪ್ರಯತ್ನಮಾಡಿ ನೋಡುತ್ತೇನೆ. ಫಲಿತಾಂಶ ಈಗಲೇ ಹೇಳಲಾರೆ."

ಎರಡು ದಿವಸಗಳ ತರುವಾಯ ಶಿವಾನಂದ ದೊಡ್ಡ ಬಾಬುಗಳನ್ನು ಕಂಡು ತಾನು ಊರಿಗೆ ಹೊರಡುವ ವಿಷಯ ತಿಳಿಸಿದ.

" ನನಗೆ ಆ ವಿಷಯ ಗೊತ್ತು ಆನಂದ್‌ಬಾಬು, ಭೂಪೆನ್ ಹೇಳಿದರು. ನಿಮ್ಮ ಆಶೋತ್ತರಗಳು ಹೀಗೆ ಪರ್ಯವಸಾನವಾದುದಕ್ಕೆ ನನಗೆ ತುಂಬ ವ್ಯಸನವಾಗುತ್ತದೆ. "

" ನಿಮ್ಮ ಆಶೀರ್ವಾದವಿದ್ದರೆ ನಾಳೆಯಾದರೂ ನಾನು ಅದನ್ನು ಸಾಧಿಸುತ್ತೇನೆ. "

" ಸಂತೋಷ. ಆ ಮಾತು ನಾನು ಒಪ್ಪುತ್ತೇನೆ. ಮನುಷ್ಯ ಸೋಲಿಗೆ ಅಂಜಬಾರದು. ಸಂಕಲ್ಪವನ್ನು ಶತಾಯಗತಾಯ ಸಾಧಿಸಬೇಕು. "

" ನಿಮ್ಮ ಅಸಿಸ್ಟೆಂಟಾಗಿ ನಾನು ಕೆಲಸ ಮಾಡಿದ್ದೇನೆಂದು ಒಂದು ಕಾಗದ ಕೊಡಲು ಸಾಧ್ಯವೇ ? "

" ಅದರಿಂದ ನಿಮಗೆ ಪ್ರಯೋಜನವಾಗುತ್ತದೇನು ? "

" ಕಲ್ಕತ್ತೆಯಲ್ಲಿ ವೃಥಾ ಕಾಲಹರಣ ಮಾಡಲಿಲ್ಲವೆಂದು ಹಿರಿಯರಿಗೆ ಹೇಳುವುದಕ್ಕಾದರೂ ಬರುತ್ತದೆ. "

" ಆಗಲಿ ಕೊಡುತ್ತೇನೆ. "

" ನಿಮ್ಮ ಮನಸ್ಸು ಎಷ್ಟು ಉದಾರ ! ದ್ರೋಣರ ಮಣ್ಣು ಮೂರ್ತಿ ಮಾಡಿಟ್ಟುಕೊಂಡು ಪೂಜಿಸಿ ಏಕಲವ್ಯ, ದೊಡ್ಡ ಬಿಲ್ಲುಗಾರನಾದಂತೆ. ನಾನೂ ಹಾಗೆಯೇ ಮಾಡುತ್ತೇನೆ. ನಿಮ್ಮ ಅನುಗ್ರಹವಾಗಬೇಕು "

ಎಂದು ದೊಡ್ಡ ಬಾಬುಗಳ ಪಾದಮುಟ್ಟಿ ನಮಸ್ಕಾರಮಾಡಿದ. ಬಾನರ್ಜಿಯವರ ಅಂತಃಕರಣ ಕಲಕಿತು. ಶಿವಾನಂದನ ವಿನಯ, ಭಕ್ತಿ ಅವನಿಗೆ ಸರ್ಟಿಫಿಕೇಟ್ ದೊರಕಿಸಿಕೊಟ್ಟಿತು.

ಶಿವಾನಂದ ಊರಿಗೆ ಹಿಂದಿರುಗಿದ ನಾಲ್ಕುದಿನ ವೀರಭದ್ರಪ್ಪನವರು ಅವನ ಮೇಲೆ ' ಗುರ್ '.ಎಂದುಕೊಂಡೇ ಇದ್ದರು. ಅವರ ಹೆಂಡತಿ ಕಾಳಮ್ಮ ಗಂಡನಿಗೆ ಬುದ್ಧಿ ಹೇಳಿ ಮಾವ, ಅಳಿಯನಿಗೆ ರಾಜಿ ಮಾಡಿಸಿದರು. ಈ ಸನ್ನಿವೇಶದಲ್ಲಿಯೇ ಮದುವೆಯ ಪ್ರಸ್ತಾಪವೂ ನಡೆದು ಮಾಘಮಾಸದಲ್ಲಿ ಲಗ್ನ ನಿಶ್ಚಯವಾಯಿತು.

ಲಗ್ನದ ವ್ಯವಸ್ಥೆ ಚಿನ್ನಪ್ಪನ ಮೇಲೆ ಬಿತ್ತು. ಥಿಯೇಟರ್ ಕೆಲಸ ಮುಗಿಯುತ್ತ ಬಂದಿತ್ತು. ಅವನಿಗೆ ಸ್ವಲ್ಪವೂ ಪುರಸತ್ತಿರಲಿ ಆದರೆ
ಇಂಥ ಸಮಯದಲ್ಲಿ ಮೈಗಳ್ಳತನ ತೋರಬಾರದೆಂದು ಅವನು
ಕಾರ್ಯಗಳ ಜವಾಬ್ದಾರಿ ಹೊತ್ತ. ಮುನಿಸಿಪಲ್ ಸಿಬ್ಬಂದಿಂ
ಕಾರ್ಯಕ್ಕೆ ನೆರವಾಯಿತು.

ವೀರಭದ್ರಪ್ಪನವರು ದುಡ್ಡಿನ ಮುಖ ನೋಡಲು ಸಾಧ್ಯವಿರಲಿಲ್ಲ. ತಮ್ಮ ಘನತೆ, ಅಂತಸ್ತಿಗೆ ತಕ್ಕಹಾಗೆ ಲಗ್ನ ಮಾಡಲೇ ಬೇಕಾಗಿತ್ತು. ಸರ್ಕಾರಿ ಅಧಿಕಾರಿಗಳು, ಮಂತ್ರಿಗಳು, ವ್ಯಾಪಾರಿಗಳು, ಊರಿನ ಇತರ ಗಣ್ಯ ಮಹನೀಯರು ಎಲ್ಲರನ್ನೂ ಸತ್ಕರಿಸಬೇಕಾಗಿತ್ತು. ಯಾವುದಕ್ಕೂ ಕೊರೆಯಾಗದಂತೆ ವಿವಾಹ ಮಂಗಳಕಾರ್ಯ ಯಶಸ್ವಿಯಾಗಿ ನೆರವೇರಿತು. ವಧೂವರರಿಗೆ ಸಾವಿರಾರು ರೂಪಾಯಿಗಳ ಉಡುಗೊರೆಗಳು ಬಂದವು.

ಶಿವಾನಂದನ ಲಗ್ನ ಸಮಯದಲ್ಲಿ ಅವನಿಗೂ ಚಿನ್ನಪ್ಪನಿಗೂ ಇದ್ದ ಪರಿಚಯ ಗಾಢಸ್ನೇಹವಾಗಿ ಪರಿಣಮಿಸಿತು.

೩

'ಶ್ರೀಶೈಲ ಪಿಕ್ಚರ್ ಪ್ಯಾಲೆಸ್' ಆರಂಭೋತ್ಸವವನ್ನು ದಿವಾನ್ ಸಾಹೇಬರೇ ನಡಸಿಕೊಟ್ಟರು. ರಜತ ಕರಂಡದಲ್ಲಿ ಅವರಿಗೆ ಮಾನಪತ್ರ ಅರ್ಪಿಸಲಾಯಿತು. ಕಲೋದ್ಧಾರಕ್ಕೆ ಶ್ರೀಮಂತರಾದ ಸಾಹುಕಾರ್ ರುದ್ರಪ್ಪ ನವರು ಮುಂದೆ ಬಂದಿರುವುದನ್ನು ಅಧ್ಯಕ್ಷರು ಪ್ರಶಂಸಿಸಿದರು. ಅತಿಥಿಗಳ ಸಂತೋಷಾರ್ಥವಾಗಿ 'ರಾತ್ರಿರಾಜ' ವಾಕ್ಚಿತ್ರದ ಪ್ರದರ್ಶನವಾಯಿತು.

ಸಿನಿಮಾ ಮಂದಿರ ನಡೆಸುವುದಕ್ಕೆ ಸೇಠ್ ಮೂಲ್‌ಚಂದ್ ಧನ್‌ರಾಜ್ ಮುಂದೆ ಬಂದಿದ್ದ. ಅವನಿಗೂ ಸಾಹುಕಾರ ರುದ್ರಪ್ಪನವರಿಗೂ ಹತ್ತು ವರ್ಷದ ಕರಾರಾಗಿತ್ತು. ಸೇಠ್ ತಿಂಗಳಿಗೆ ಎರಡು ಸಾವಿರ ರೂಪಾಯಿ ಬಾಡಿಗೆ ಕೊಡಬೇಕೆಂದು ನಿಶ್ಚಯವಾಗಿತ್ತು. ರುದ್ರಪ್ಪ ಹನ್ನೊಂದು ತಿಂಗಳ ಬಾಡಿಗೆಯನ್ನು ಮುಂಗಡವಾಗಿ ವಸೂಲ್ಮಾಡಿಕೊಂಡಿದ್ದರು.

ಭಾರತವರ್ಷ ಒಡೆದು ಎರಡು ಹೋಳಾಗಿ ಹಿಂದೂಸ್ಥಾನ, ಪಾಕೀಸ್ತಾನವಾಗುವುದಕ್ಕೆ ಸ್ವಲ್ಪ ಮುಂಚೆ ಕರಾಚಿ ಬಿಟ್ಟು ಓಡಿಬಂದವರಲ್ಲಿ ಸೇಠ್ ಮೂಲ್‌ಚಂದ್ ಧನರಾಜನೂ ಒಬ್ಬ. ಪಾಕೀಸ್ತಾನ ನಿರ್ಮಾಣದ ಸೂಚನೆ ಕಂಡೊಡನೆಯೇ ಕರಾಚಿಯಲ್ಲಿದ್ದ ತನ್ನ ಚರಾಸ್ತಿಗಳನ್ನೂ, ಥಿಯೇಟರುಗಳನ್ನೂ ಮಾರಿ ನಗದು ಹಣದೊಂದಿಗೆ ಸೇಠ್ ಮುಂಬಯಿಗೆ ಬಂದು ತಲುಪಿದ. ಅವನೂ ನಿರಾಶ್ರಿತರ (refugees) ಲೆಕ್ಕಕ್ಕೆ ಸೇರಿದ್ದುದರಿಂದ ನಿರಾಶ್ರಿತರಿಗೆ ಸರ್ಕಾರ ಕೊಡುತ್ತಿದ್ದ ಸಹಾಯದ ಪಾಲು ಅವನಿಗೂ ದೊರೆಯಿತು. ಮುಂಬಯಿ ವಾಸ ಅವನಿಗೆ ಸರಿಬೀಳದೆ ಬೆಂಗಳೂರಿಗೆ ಬಂದು ಗಾಂಧಿನಗರದಲ್ಲಿ ಒಂದು ಸೊಗಸಾದ ಬಂಗಲೆಕೊಂಡು ಮನೆಯಲ್ಲಿಯೇ ತನ್ನ

"ಧನ್‌ರಾಜ ಪಿಕ್ಚರ್ ಸರ್ಕ್ಯೂಟ್" ಆರಂಭಿಸಿ ವ್ಯವಹಾರ ಆರಂಭಿಸಿದ. ಶೇಠನ ಸ್ಪರ್ಧೆ ತಡೆಯಲಾರದೆ ಅನೇಕ ಚಿತ್ರಹಂಚಿಕೆಯ ಸಂಸ್ಥೆಗಳು ದಿವಾಳಿ ತೆಗೆಯಬೇಕಾಯಿತು. ಒಂದು ಎರಡು ಚಿತ್ರಗಳನ್ನು ಕೊಂಡು ವ್ಯಾಪಾರ ಮಾಡುತ್ತಿದ್ದ ಸಣ್ಣ ಬಂಡವಾಳದ ಕನ್ನಡ ವ್ಯಾಪಾರಸ್ಥರು ಅಡ್ಡಾದಿಡ್ಡಿ ಬೆಲೆಗೆ ತಮ್ಮ ಚಿತ್ರಗಳನ್ನು ಸೇಠಿಗೆ ಮಾರಿಕೊಂಡರು. ಸೇಠ್ ಬೆಂಗಳೂರಿಗೆ ಬಂದದ್ದು ಬೆಂಗಳೂರು ಚಿತ್ರಪ್ರಪಂಚಕ್ಕೆ ರಾಹುಗ್ರಸ್ತವಾದಂತಾಯಿತು. ಮಾರವಾಡಿ, ಗುಜರಾತಿ ಚಿತ್ರ ಹಂಚಿಕೆಗಾರರೂ ಸೇಠನ ಸ್ಪರ್ಧೆಗೆ ನಡುಗಿಬಿಟ್ಟರು.

ಸೇಠನ ಕೈಯಲ್ಲಿ ಸುಮಾರು ಅರವತ್ತು ಹಿಂದಿ, ತಮಿಳು, ತೆಲುಗು ಚಿತ್ರಗಳಿದ್ದರೂ ಅವನಿಗೆ ಥಿಯೇಟರ್ ಇರಲಿಲ್ಲ. ಗುಜರಾತಿ, ಮಾರವಾಡಿಗಳು ನಡಸುತ್ತಿದ್ದ ಥಿಯೇಟರುಗಳಲ್ಲಿ ಅವನ ಚಿತ್ರಗಳಿಗೆ ಅವಕಾಶ ದೊರೆಯುತ್ತಿರಲಿಲ್ಲ. ಯಾವದಾದರೂ ಥಿಯೇಟರ್ ಸಿಕ್ಕಿದರೆ ಸಾಕಲ್ಲಾ ಎಂದು ಸೇಠ್ ತಹತಹ ಪಡುತ್ತಿದ್ದ.

ಸಾಹುಕಾರ ರುದ್ರಪ್ಪನವರು ಥಿಯೇಟರ್ ಕಟ್ಟಿಸುವ ವ್ಯವಸ್ಥೆ ಮಾಡಿದ ಕೂಡಲೆ ಸೇಠ್ ತನ್ನ ಜನಗಳನ್ನು ಬಿಟ್ಟು ಚಿನ್ನಪ್ಪನನ್ನು ಹಿಡಿದು ತರಿಸಿದ. ಚಿನ್ನಪ್ಪನ ತಲೆಸವರಿ, ಅವನಿಗೆ ಬೇಕಾದಷ್ಟು ಆಸೆಯಿಟ್ಟು, ಕೈಗೆ ಒಂದು ಸಾವಿರ ರೂಪಾಯಿ ಹಾಕಿ "ಶ್ರೀಶೈಲ ಥಿಯೇಟರ್" ತನಗೆ ಬಾಡಿಗೆಗೆ ದೊರೆಯುವಂತೆ ಮಾಡಿಕೊಂಡ.

ಶೇಠನ ಮೇಲಣ ಹಟಕ್ಕಾಗಿಯಾದರೂ ಇತರರು ಥಿಯೇಟರಿಗೆ ಎರಡು ಸಾವಿರಕ್ಕಿಂತಲೂ ಹೆಚ್ಚು ಬಾಡಿಗೆ ಕೊಡಲು ಸಿದ್ಧರಾಗಿದ್ದರು. ಆದರೆ ಚಿನ್ನಪ್ಪ ಸೇಠಿಗೇ ಒಲಿಯುವುದಕ್ಕೆ ಒಂದು ಪ್ರಭಲ ಕಾರಣವಿತ್ತು

ಮಾತಿನ ಸಂದರ್ಭದಲ್ಲಿ ಸೇಠ್ ಯಾರಾದರೂ ಚಿತ್ರ ನಿರ್ಮಾಣ ಮಾಡಲು ಮುಂದುವರಿದರೆ ಅವರಿಗೆ ಬಂಡವಾಳ ತಾನು ಒದಗಿಸುವುದಾಗಿ ಸೂಚಿಸಿದ. ಸೇಠಿನಿಂದ ಮುಂದೆ ಪ್ರಯೋಜನವಾಗಬಹುದೆಂಬ ಆಸೆಯಿಂದ ಚಿನ್ನಪ್ಪ ಸೇಠನ ಪರವಾಗಿ ವಕಾಲತ್ತು ವಹಿಸಿ, ಥಿಯೇಟರ್ ಅವನಿಗೇ ಗಿಟ್ಟುವಂತೆ ಮಾಡಿದ.

ಥಿಯೇಟರಿಗೆ ಸೇರಿದ ಹಾಗೆಯೇ ಒಂದು ಭಾಗದಲ್ಲಿ ಸಾಹುಕಾರ ರುದ್ರಪ್ಪನವರ ಆಫೀಸ್. ಆಫೀಸಿನ ಕೆಳಭಾಗದಲ್ಲಿ ಮೂರು ಕೋಣೆಗಳೂ ಮೇಲ್ಭಾಗದಲ್ಲಿ ಒಂದು ದೊಡ್ಡ ತೊಟ್ಟಿ, ಒಂದು ಕೋಣೆ ಇದ್ದವು. ಆಫೀಸಿನಲ್ಲಿ ಚಿನ್ನಪ್ಪ ಪ್ರತಿಷ್ಠಿತನಾದ.

ಶ್ರೀಶೈಲ ಪಿಕ್ಚರ್ ಪ್ಯಾಲೆಸಿನಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಆಟಕ್ಕೂ ಹತ್ತು 'ಫ್ರೀಪಾಸು' ಗಳನ್ನು ಕೊಡುವ ಅಧಿಕಾರ ಥಿಯೇಟರ್ ಮಾಲಿಕರಿಗಿತ್ತು. ಫ್ರೀಪಾಸುಗಳ ಆಸೆಗೆ ಅನೇಕರು ಚಿನ್ನಪ್ಪನನ್ನು ಆಶ್ರಯಿಸತೊಡಗಿದರು.

ಕಲ್ಕತ್ತೆಯಿಂದ ಹಿಂದಿರುಗಿದ ಮೇಲೆ ಶಿವಾನಂದನಿಗೆ ಮಾಡುವುದಕ್ಕೇನೂ ಕೆಲಸವಿರಲಿಲ್ಲ. ಆಫೀಸಿನಲ್ಲಿ ಕುಳಿತುಕೊಂಡು ಸಿಗರೇಟ್ ಸೇದುವುದನ್ನು ಬಿಟ್ಟು ಚಿನ್ನಪ್ಪನಿಗೂ ಏನೂ ಕೆಲಸವಿರಲಿಲ್ಲ, ಇಬ್ಬರಿಗೂ ಜತೆ ಚೆನ್ನಾಗಿಕೂಡಿತು. ಶಿವಾನಂದ ಬೆಳಿಗ್ಗೆಯಿಂದ ಸಂಜೆಯವರೆವಿಗೂ ಚಿನ್ನಪ್ಪನ ಆಫೀಸಿನಲ್ಲಿ ಕಾಲತಳ್ಳತೊಡಗಿದ.

ಶಿವಾನಂದ ಅವಕಾಶ ಸಿಕ್ಕಿದಾಗಲೆಲ್ಲಾ ತಾನು ಕಲ್ಕತ್ತೆಯಲ್ಲಿದ್ದದ್ದು, ಅಲ್ಲಿ ನೋಡಿದ್ದು ಮೊದಲಾದುವುಗಳನ್ನು ಚಿನ್ನಪ್ಪನಿಗೆ ಹೇಳುತ್ತಿದ್ದ. ಚಿತ್ರ ಪ್ರಪಂಚದಲ್ಲಿ ನಟನಟಿಯರು, ದಿಗ್ದರ್ಶಕರು ಇವರ ವೈಭವವನ್ನು ವಿವರಿಸುವುದಕ್ಕೆ ಶಿವಾನಂದನಿಗೆ ಒಂದು ಬಾಯಿಸಾಲದು; ಚಿತ್ರ ಪ್ರಪಂಚದ ವ್ಯವಹಾರ, ಚಿತ್ರಗಳ ವರಮಾನ, ನಿರ್ಮಾಪಕರ ಐಶ್ವರ್ಯದ ವಿಷಯ ಕೇಳುವುದಕ್ಕೆ ಚಿನ್ನಪ್ಪನಿಗೆ ಎರಡು ಕಿವಿಗಳು ಸಾಲದಾದವು.

ತನ್ನ ಮನಸ್ಸಿನಲ್ಲಿ ಮಿಡಿಯುತ್ತಿದ್ದ ಭಾವನೆಯನ್ನು ಧೈರ್ಯಮಾಡಿ ಶಿವಾನಂದನಲ್ಲಿ ಒಂದು ದಿನ ಪ್ರಸ್ತಾಪಿಸಿದ.

ನೀವು ಮನಸ್ಸು ಮಾಡಿದರೆ ಅದೇನು ದೊಡ್ಡ ವಿಷಯವಲ್ಲ ಚಿನ್ನಪ್ಪನವರೇ."

"ಯಾವದು ಸ್ವಾಮಿ."

"ಚಿತ್ರ ನಿರ್ಮಾಣ."

ಹಾಗೆಂದರೆ..........."

"ನೀವೇಕೆ ನಿರ್ಮಾಪಕರಾಗಬಾರದೆಂದು ನಾನು ಯೋಚಿಸುತ್ತಿದ್ದೇನೆ."

"ಎಲ್ಲಿಯ ಮಾತು ಸ್ವಾಮಿ. ನಾನೆಲ್ಲಿ, ಚಿತ್ರನಿರ್ಮಾಪನವೆಲ್ಲಿ? ಅಟ್ಟಕ್ಕೆ ಹಾರದ ಬಡ್ಡಿ ಬೆಟ್ಟಕ್ಕೆ ಹಾರಿದಳು ಎಂದ ಹಾಗಾಗುತ್ತದೆ. ನಮ ಸಾಹುಕಾರರು ದೊಡ್ಡ ಮನಸ್ಸು ಮಾಡುವ ಹೊತ್ತಿಗೆ ನಾನೊಬ್ಬ ಮನುಷ್ಯನಾದೆ ಮರ್ಯಾದೆಯಿಂದ ಜೀವನ ಸಾಗಿಸಿಕೊಂಡು ಹೋಗುತ್ತಿದ್ದೇನೆ."

"ನೀವಿಲ್ಲದಿದ್ದರೆ ನಿಮ್ಮ ಸಾಹುಕಾರರು ಎಲ್ಲಿರುತ್ತಿದ್ದರೊ? ನಮ್ಮ ಮಾವನವರು ಸೈಟು ಕೊಡಿಸಿಕೊಟ್ಟು, ಥಿಯೇಟರ್ ಕಟ್ಟುವುದಕ್ಕೆ ಎಲ್ಲಾ

ಸಹಾಯ ಮಾಡಿದ್ದು ನಿಮ್ಮ ಮುಖ ನೋಡಿಯೇ ವಿನಾ ನಿಮ್ಮ ಸಾಹುಕಾರರ ಮುಖ ನೋಡಿಯಲ್ಲ. "

ಸಾಹುಕಾರರಿಗಿಂತ ತನ್ನನ್ನು ದೊಡ್ಡವನೆಂದು ಶಿವಾನಂದ ಭಾವಿಸಿರುವುದನ್ನು ಕಂಡು ಚಿನ್ನಪ್ಪನಿಗೆ ಪರಮ ಸಂತೋಷವಾಯಿತು.

"ನಿಮ್ಮ ಸೇಠ್ ಹತ್ತಿರ ಕೊಳೆತು ಹೋಗುವಷ್ಟು ಹಣವಿದೆಯಂತಲ್ಲಾ!"

"ಇದೆ – ನಮಗೆ ಅದರಿಂದಾಗುವ ಪ್ರಯೋಜನ! ಮೈಸೂರು ಬ್ಯಾಂಕಿನಲ್ಲಿಯೂ ಬೇಕಾದಷ್ಟು ಹಣವಿದೆ."

"ಅವನು ಚಿತ್ರವ್ಯವಸಾಯದಲ್ಲಿ ಖದೀಮ. ಬಂಡವಾಳ ಹಾಕುವುದಕ್ಕೆ ನೀವು ಅವನನ್ನು ಒಪ್ಪಿಸಿದರೆ ಉಳಿದೆಲ್ಲಾ ಕೆಲಸ ನಾನು ಮಾಡಿಕೊಡುತ್ತೇನೆ. ನ್ಯೂ ಥಿಯೇಟರ್ಸ್ ಡೈರೆಕ್ಟರನ್ನು ಕರೆಸಿಕೊಡುತ್ತೇನೆ."

"ಬಂಡವಾಳಗಾರರು ನನ್ನ ಮುಖ ನೋಡಿ ಲಕ್ಷಾಂತರ ರೂಪಾಯಿ ಕೊಡುತ್ತಾರೆಯೇ ಸ್ವಾಮಿ. ಹಣಕ್ಕೆ ಆಧಾರ ಕೇಳಿದರೆ ನಾನು ಎಲ್ಲಿಂದ ಒದಗಿಸಲಿ?"

"ಅವನು ಬಂಡವಾಳ ಭಾಗಸ್ಥನಾಗಲಿ. ನೀವು ಕ್ರಿಯಾಭಾಗಸ್ಥರಾಗಿ. ಹಣದ ಜವಾಬ್ದಾರಿ ಅವನದು; ಕೆಲಸದ ಜವಾಬ್ದಾರಿ ನಿಮ್ಮದು."

"ನಾನು ಸ್ವತಂತ್ರವಾಗಿ ಇಂಥ ವ್ಯವಹಾರ ಮಾಡಿದರೆ ಸಾಹುಕಾರರು ನನ್ನ ಜೀವಮೊರಸೆ ಬಿಡುತ್ತಾರೆಯೇ? ತಿಂಗಳ ಕೂಳು ನೆಚ್ಚಿಕೊಂಡು ವರ್ಷದ ಕೂಳು ಕಳೆದುಕೊಂಡರು ಎನ್ನುವ ಹಾಗಾಗುತ್ತದೆ ನನ್ನ ಪಾಡು."

"ನಿಮ್ಮ ಸಾಹುಕಾರರನ್ನೇ ಒಪ್ಪಿಸಿ ಈ ಕೆಲಸಕ್ಕೆ ಏಕೆ ಹೂಡಬಾರದು?"

"ಥಿಯೇಟರ್ ಮೇಲೆ ಈಗಾಗಲೆ ಒಂದೂವರೆ ಲಕ್ಷ ಅವರು ಸುರಿದಿದ್ದಾರೆ. ಅಂದಾಜುಮಾಡಿದ್ದು ಲಕ್ಷಕ್ಕೆ – ಖರ್ಚಾದದ್ದು ಒಂದೂವರೆ ಲಕ್ಷ. ಚಿತ್ರನಿರ್ಮಾಣವೆಂದರೆ ಮತ್ತೆ ಒಂದೂವರೆಯೋ ಎರಡೋ ಲಕ್ಷರೂಪಾಯಿ ಬೇಕು. ಸಾಹುಕಾರರು ಖಂಡಿತ ಒಪ್ಪುವುದಿಲ್ಲ."

"ನೀವು ಮನಸ್ಸು ಮಾಡಿದರೆ ಒಂದು ದಾರಿ ಹುಡುಕಬಹುದು ಚಿನ್ನಪ್ಪನವರೇ–ಅವಸರವಿಲ್ಲ, ಯೋಚನೆಮಾಡಿ ನೋಡಿ."

ಎಂದು ಹೇಳಿದ.

ಚಿನ್ನಪ್ಪನ ತಲೆಯಲ್ಲಿ ಅಣುರೂಪದಲ್ಲಿದ್ದ ಚಿತ್ರ ನಿರ್ಮಾಣ ಯೋಜನೆಗೆ ಶಿವಾನಂದ ಆಕಾರ ಕೊಟ್ಟಂತಾಯಿತು. 'ನಾನೆಂದರೇನು–ಚಿತ್ರನಿರ್ಮಾಣ

ವೆಂದರೇನು' ಎಂದು ಚಿನ್ನಪ್ಪ ಶಿವಾನಂದನ ಸಲಹೆಯನ್ನು ತನ್ನ ಮನಸ್ಸಿನಿಂದ ಹೊರತಳ್ಳಲೆತ್ನಿಸಿದರೂ ಅದು ಸಾಕಿದ ನಾಯಿಯಂತೆ ಮತ್ತೆ ಮತ್ತೆ ಬಂದು ಅವನನ್ನು ತಾಗುತ್ತಿತ್ತು. ಸಾಹುಕಾರರ ಹತ್ತಿರ ಈ ವಿಷಯ ನೇರವಾಗಿ ಪ್ರಸ್ತಾಪಿಸುವುದರಿಂದ ಏನೂ ಪ್ರಯೋಜನವಿಲ್ಲವೆಂದು ಚಿನ್ನಪ್ಪನಿಗೆ ಗೊತ್ತಿತ್ತು. ಯೋಚನೆ ಮಾಡಿಮಾಡಿ ಕೊನೆಗೆ ಒಂದು ನಿರ್ಧಾರಕ್ಕೆ ಬಂದ. ಈ ವಿಷಯದಲ್ಲಿ ಭಾಗ್ಯಮ್ಮನಿಗೆ ಆಸಕ್ತಿಹುಟ್ಟಿಸಿದರೆ ಇಂದಲ್ಲ ನಾಳೆ ಕೆಲಸ ಕೈಗೂಡಬಹುದೆಂದು ಅವನಿಗೆ ಹೊಳೆಯಿತು.

೪

'ಶ್ರೀಶೈಲ ಕೃಪಾಪೋಷಿತ ಕರ್ನಾಟಕ ನಾಟಕ ಮಂಡಳಿ'ಯ ಇತಿಶ್ರೀಯಾದ ಮೇಲೆ ಸರೋಜ ನಿರುದ್ಯೋಗಿಯಾದಳು. ಸಾಹುಕಾರ ರುದ್ರಪ್ಪನವರ ವಿಶ್ವಾಸವಿರುವವರೆಗೆ ಅವಳು ಜೀವನೋಪಾಯಕ್ಕೆ ಮಾರ್ಗ ಹುಡುಕಬೇಕಾಗಿರಲಿಲ್ಲ ಒಂದುವೇಳೆ—ಯಾವದಾದರೂ ಕಾರಣಕ್ಕೆ ಸಾಹುಕಾರರ ವಿಶ್ವಾಸ ತಪ್ಪಿದರೂ ಅವಳು ಒಂದೆರಡು ವರ್ಷ ಸುಖವಾಗಿ ಜೀವನ ಮಾಡಬಹುದಾಗಿತ್ತು. ದೂರದರ್ಶಿಯಾದ ಭಾಗ್ಯಮ್ಮ ಆ ವಿಷಯದಲ್ಲಿ ಎಚ್ಚರಳಾಗಿದ್ದು ಮಗಳ ಹಿತಸಂರಕ್ಷಣೆ ಮಾಡಿದ್ದಳು.

ಆದರೆ ಎಲ್ಲೆಡೆಯಲ್ಲಿಯೂ ನಾಲ್ಕುದಿನ ಮೆರೆದಾಡಿದ ತನ್ನ ಮಗಳ ಹೆಸರು ಇದ್ದಕ್ಕಿದ್ದಂತೆ ಮರೆಯಾದುದು ಭಾಗ್ಯಮ್ಮನಿಗೆ ಅಸಮಾಧಾನವನ್ನುಂಟುಮಾಡಿತ್ತು. ನಾಟಕದ ಕಂಪೆನಿಯನ್ನು ಪುನರುಜ್ಜೀವನಗೊಳಿಸಿ, ರಂಗದ ಮೇಲೆ ಬರಲು ಸರೋಜಳಿಗೆ ಮತ್ತೆ ಅವಕಾಶ ಕಲ್ಪಿಸಬೇಕೆಂದು ಸಾಹುಕಾರರಲ್ಲಿ ವಿನಂತಿ ಮಾಡಿಕೊಂಡಿದ್ದಳು. ನಾಟಕದ ಕಂಪೆನಿಯೆಂದರೆ ಸಾಹುಕಾರರ ಮೈಮೇಲೆ ಮುಳ್ಳೇಳುತ್ತಿತ್ತು. ಇನ್ನು ನಾಟಕದ ಕಂಪೆನಿ ಸ್ಥಾಪಿಸುವುದಕ್ಕೆ ತಾನು ಕೈಹಾಕುವುದಿಲ್ಲವೆಂದು ಸಾಹುಕಾರರು ಖಂಡಿತವಾಗಿ ಹೇಳಿಬಿಟ್ಟಿದ್ದರು.

ಸ್ವಜನ ಸಮೂಹಕ್ಕೆ ಸೇರಿದ ಕೋಲಾರದ ವನಜಾಕ್ಷಿಗೆ ಮದರಾಸಿನ ಒಂದು ತಮಿಳು ಚಿತ್ರದಲ್ಲಿ ಅಭಿನಯಿಸುವ ಅವಕಾಶ ಸಿಕ್ಕಿದ ಸುದ್ದಿ ಕೇಳಿದ ಮೇಲಂತೂ ಭಾಗ್ಯಮ್ಮ ಕೆಂಡಕೆಂಡವಾದಳು. ಸಾಹುಕಾರರ ಸಂಬಂಧಕ್ಕೆ ತಿಲತರ್ಪಣ ಕೊಟ್ಟು ಮದರಾಸಿಗೆ ಹೋಗಿ ಮಗಳನ್ನು ಚಿತ್ರರಂಗ ಪ್ರವೇಶ ಮಾಡಿಸುವುದರ ಬಗ್ಗೆಯೂ ಅವಳು ವಿಚಾರಮಾಡಿದಳು. ಆದರೆ ಈ ವಿಷಯ

ದಲ್ಲಿ ಸರಿಯಾದವರ ಸಹಾಯವಿಲ್ಲದೆ ದುಢುಂ ಪ್ರವೇಶಮಾಡುವುದು ಅಪಾಯ ಕರವೆಂದು ಭಾಗ್ಯಮ್ಮ ಸಂಯಮ ತಂದುಕೊಂಡಳು.

ಚಿನ್ನಪ್ಪ ಮನೆಗೆ ಬಂದೊಡನೆಯೇ ಅವನ ಮೇಲೆ ಹುಲಿಯ ಹಾಗೆ ಬೀಳಬೇಕೆಂದು ಭಾಗ್ಯಮ್ಮನ ಮನಸ್ಸಿನಲ್ಲಿದ್ದರೂ ಸಮಾಧಾನದಿಂದಲೇ

" ಮ್ಯಾನೇಜರ್ ಸಾಹೇಬರಿಗೆ ನಮ್ಮ ಮನೆ ದಾರಿ ಸಿಕ್ಕಿತೇ? "

ಎಂದು ಕೇಳಿದಳು. ಅವಳ ವ್ಯಂಗ್ಯೋಕ್ತಿಗೆ ಸಿದ್ಧವಾಗಿಯೇ ಚಿನ್ನಪ್ಪ ಬಂದಿದ್ದ.

" ಪುರುಸತ್ತೇ ಆಗಲಿಲ್ಲಮ್ಮ, ಥಿಯೇಟರ್ ಕೆಲಸ ಜೀವ ಹಿಂಡುತ್ತದೆ."

" ನೀನೇನಪ್ಪಾ ಈಗ ದೊಡ್ಡಮನುಷ್ಯ. ನೂರಾರು ಜನ ನಿನ್ನ ಆಶ್ರಯ ಮಾಡುತ್ತಾರೆ. ನಮ್ಮಂಥ ಬಡವರು ನಿನ್ನ ಕಣ್ಣಿಗೆ ಹೇಗೆ ಬೀಳ ಬೇಕು ಹೇಳು. "

" ನಿನ್ನ ಆಶೀರ್ವಾದದಿಂದ ಅಲ್ಲವೇನಮ್ಮ ನಾನು ಇಷ್ಟರಮಟ್ಟಿಗಾದುದು. "

" ನಾನೂ ನಿನಗೆ ಹೇಳಿಕಳುಹಿಸಬೇಕೆಂದಿದ್ದೆ–ನೀನೇ ಬಂದೆಯಲ್ಲಾ."

" ಏನಾದರೂ ಕೆಲಸವಿತ್ತೇನು? "

" ಸರೋಜನ ವಿಷಯ ನನಗೆ ಹಗಲು ರಾತ್ರಿ ಚಿಂತೆಯಾಗಿಹೋಗಿದೆ. ನಾನು ಕಣ್ತುಂಬ ನಿದ್ದೆಮಾಡಿ ಯಾವ ಯುಗವಾಯಿತೋ? "

" ಸರೋಜನಿಗೆ ಏನಮ್ಮ ಕಡಿಮೆಯಾಗಿರೋದು? "

" ಉಂಡು ಉಟ್ಟು ಸಾಹುಕಾರರು ಬಂದಾಗ ಅವರ ಜತೆ ಮಲಗಿ ಬಿಟ್ಟರೆ ಮುಗಿದುಹೋಯಿತೇನೊ ಚಿನ್ನಪ್ಪ. ಶ್ರೀಮಂತರ ವಿಶ್ವಾಸ ಆಷಾಡ ಮಾಸದ ಬಿಸಲು ಇದ್ದಹಾಗೆ. ಸರೋಜ ಬದುಕಿರುವವರೆಗೆ ಹೀಗೇ ನಡೆಯುತ್ತದೆಂದು ಯಾವ ನೆಚ್ಚಿಗೆ. ನಾಳೆ ಸಾಹುಕಾರರಿಗೆ ಇನ್ನು ಯಾವಳಾದರ ಮೇಲೆ ಮನಸ್ಸುಬಿದ್ದರೆ ಸರೋಜನ ಕಥೆ ಮುಗಿದುಹೋಗುತ್ತದೆ. ಅವಳ ತಾರುಣ್ಯವಾದರೂ ಶಾಶ್ವತವಾದದ್ದೇ? ಒಳ್ಳೆಯ ವಯಸ್ಸಿನಲ್ಲಿ ಕೈತುಂಬ ನಾಲ್ಕು ಕಾಸು ಮಾಡಿಕೊಳ್ಳದಿದ್ದರೆ ಮುಂದೇನು ಗತಿ? "

" ಸರಿ–ಇದಕ್ಕೇನು ಮಾಡು ಎನ್ನುವೆ? "

" ನಾಟಕದ ಕಂಪೆನಿ ಮತ್ತೆ ಆರಂಭಿಸಿ ಎಂದು ಸಾಹುಕಾರರ ಹತ್ತಿರ ನಾನು ಎಷ್ಟೋಸಲ ಹೇಳಿಕೊಂಡೆ. ಅವರಿಗೇಕೊ ಅದರಲ್ಲಿ ಮನಸ್ಸಿಲ್ಲ. "

" ನಾಟಕದ ಕಂಪೆನಿ ಸುದ್ದಿ ತೆಗೆದರೆ ಸಾಹುಕಾರರು ಅಂಗಾರವಾಗುತ್ತಾರೆ ಭಾಗ್ಯಮ್ಮ"

" ಕೋಲಾರದ ಜಾನಕಿ ಮಗಳು ವನಜಾಕ್ಷಿಯನ್ನು ಬಲ್ಲೆಯಷ್ಟೆ ? "

" ನಾನು ಕಾಣೆನೇ ! ಅರಸೂ ಕಂಪೆನಿಯಲ್ಲಿ ಪಾರ್ಟು ಮಾಡುತ್ತಿದ್ದಳಲ್ಲಾ ಅವಳು ! "

" ಅವಳಿಗೆ ತಮಿಳು ಚಿತ್ರದಲ್ಲಿ ಅವಕಾಶ ಸಿಕ್ಕಿದೆಯಂತೆ ! ನಮ್ಮ ಸರೋಜ ವನಜಾಕ್ಷಿಗಿಂತಲೂ ಕೇಡೇನೋ ಚಿನ್ನಪ್ಪ. "

" ಬಿಡಮ್ಮ; ಏನುಮಾತು ! ಸರೋಜನ ಉಂಗುಷ್ಟ ಹೋಲೋ ಯೋಗ್ಯತೆ ವನಜಾಕ್ಷಿಗಿಲ್ಲ. "

" ಏನಿದ್ದರೇನಾಯಿತು ಚಿನ್ನಪ್ಪ, ಮುಖ್ಯ ನಮ್ಮ ಹುಡುಗಿ ಅದೃಷ್ಟ ಚೆನ್ನಾಗಿಲ್ಲ. ಇನ್ನು ಆರುತಿಂಗಳಲ್ಲಿ ಯಾವ ಪೇಪರಿನಲ್ಲಿ ನೋಡಿದರೂ ವನಜಾಕ್ಷಿ ಭಾವಚಿತ್ರ. ಆ ಅನಿಷ್ಟ ಮುಂಡೇದರ ಅಟ್ಟಹಾಸ ನಾನು ನೋಡಿಕೊಂಡು ಬಾಯಿಮುಚ್ಚಿಕೊಂಡು ಕುಳಿತಿರಬೇಕು. ಇದಕ್ಕೆ ನೀನೇ ಯಾವದಾದರೂ ದಾರಿ ಹುಡುಕದಿದ್ದರೆ ನಾನು ಸರೋಜನನ್ನು ಕರೆದುಕೊಂಡು ಮದರಾಸಿಗೆ ಹೋಗಿಬಿಡುತ್ತೇನೆ. "

" ಆತುರಪಡಬಾರದು ಭಾಗ್ಯಮ್ಮ. ಎಲ್ಲದಕ್ಕೂ ಕಾಲಬರಬೇಕು. ಈ ವಿಷಯ ನಾನು ಯೋಚನೆಮಾಡುತ್ತಿಲ್ಲವೆಂದು ತಿಳಿದುಕೊಂಡಿದ್ದೀಯೇನು? ದುಡುಕಿದರೆ ಕೆಲಸ ಕೆಟ್ಟುಹೋಗುತ್ತದೆಂದು ಸುಮ್ಮನಿದ್ದೇನೆ. "

" ಏನು ಯೋಚನೆ ಮಾಡಿದ್ದೀ ಹೇಳು ಚಿನ್ನಪ್ಪ. ಕೇಳಿಯಾದರೂ ಸಂತೋಷಪಡುತ್ತೇನೆ. "

" ಚಿತ್ರ ತಯಾರಿಕೆಗೆ ಹೇಗಾದರೂ ಮಾಡಿ ಸಾಹುಕಾರರನ್ನು ಒಪ್ಪಿಸಬೇಕು. ನೀನೂ ಸರೋಜ ಮನಸ್ಸುಮಾಡಿದರೆ ಅದೇನು ದೊಡ್ಡ ವಿಷಯವಲ್ಲ. ಉಳಿದ ವ್ಯವಸ್ಥೆಯೆಲ್ಲಾ ನಾನು ನೋಡಿಕೊಳ್ಳುತ್ತೇನೆ. "

"ಅವರು ದುಡ್ಡು ದುಡ್ಡು ಎಂದು ಒಂದೇ ಸಮನಾಗಿ ಬಡಿದುಕೊಳ್ಳುತ್ತಾರಲ್ಲಪ್ಪಾ. ಥಿಯೇಟರಿಗೆ ಒಂದೂವರೆ ಲಕ್ಷವಾಯಿತು ಎಂದು ಒಂದೇ ಕಣ್ಣಲ್ಲಿ ಅಳುತ್ತಿದ್ದಾರೆ. "

" ದುಡ್ಡುಕೊಡೋದಿಕ್ಕೆ ನಾನು ಆಸಾಮಿ ಪತ್ತೆ ಮಾಡಿದ್ದೀನಿ. ಬೇರೆ ಬೇರೆ ಕೆಲಸದ ಜವಾಬ್ದಾರಿ ಹೊರುವುದಕ್ಕೆ ಜನಗಳನ್ನು ಹೊಂದಿಸಿದ್ದೀನಿ. ಸಾಹುಕಾರರು ' ಹೂ ' ಅಂದರೆ ಉಳಿದ ಕೆಲಸ ಗಡಿಯಾರದ ಹಾಗೆ ನಡೆದು ಹೋಗುತ್ತದೆ. "

ಮುದುಡಿದ್ದ ಭಾಗ್ಯಮ್ಮನ ಮುಖ ಸೂರ್ಯದರ್ಶನವಾದ ಕೆಂದಾವರೆಯಂತೆ ಅರಳಿತು. ಅವಳ ಉತ್ಸಾಹಕ್ಕೆ ಕೊನೆಮೊದಲಿರಲಿಲ್ಲ.

" ಏನು ಮಾಡಿದ್ದೀ ಬಿಡಿಸಿ ಹೇಳು ಚಿನ್ನಪ್ಪ."

" ನಿನಗೆ ವೀರಭದ್ರಪ್ಪನವರು ಗೊತ್ತೋ?"

" ಪ್ರೆಸಿಡೆಂಟರು."

" ಹೂ ಅವರೇ! ಅವರಿಗೊಬ್ಬ ಸೋದರಳಿಯ ಇದ್ದಾನೆ. ಮೊನ್ನೆ ನಾನು ಸಾಹುಕಾರರೂ ಓಡಿಯಾಡಿದ್ದು ಅವನ ಮದುವೆಯಲ್ಲೇ. ಆ ಹುಡುಗ ಕಲ್ಕತ್ತೆಗೆ ಹೋಗಿ ನ್ಯೂ ಥಿಯೇಟರ್ಸ್ ಕಂಪೆನಿಯಲ್ಲಿ ತರಬೇತು ಪಡೆದುಬಂದಿದ್ದಾನೆ. ಅವನಿಗೆ ಚಿತ್ರದಲ್ಲಿ ಅಭಿನಯಿಸುವ ಹುಚ್ಚು ಬಲವಾಗಿದೆ. ಶಿವಾನಂದ ಕಲ್ಕತ್ತೆಯಲ್ಲಿ ಫಿಲಂ ಜನಗಳ ಸ್ನೇಹ ಬೆಳಸಿಕೊಂಡು ಬಂದಿದ್ದಾನೆ. ಅವನ ಮೂಲಕ ಕಲ್ಕತ್ತೆಯಿಂದ ಒಬ್ಬ ಫಿಲಂ ಡೈರೆಕ್ಟರನ್ನು ಕರೆಸಿಕೊಂಡು ನಾವು ಈ ಕೆಲಸಕ್ಕೆ ಕೈಹಾಕಿದರೆ ಎಲ್ಲಾ ಸಾಂಗವಾಗಿ ಆಗುತ್ತದೆ."

" ದುಡ್ಡಿಗೇನು ಮಾಡುತ್ತೀ? ಶಿವಾನಂದನ ಮಾವ ಹಣ ಕೊಡುತ್ತಾರೆಯೋ?"

" ಅವರ ಸಹಾಯ ನಮಗೇನೂ ಬೇಕಿಲ್ಲ. ನಮ್ಮ ಥಿಯೇಟರ್ ನಡೆಸುತ್ತಿದ್ದಾನೆ ನೋಡು ಸಿಂಧಿ—ಅವನು ಬೇಕಾದಷ್ಟು ಹಣ ಕೊಡುವುದಕ್ಕೆ ಸಿದ್ಧವಾಗಿದ್ದಾನೆ.

" ನನ್ನ ಏನುಮಾಡೂಂತಿ ಚಿನ್ನಪ್ಪ. ನೀನು ಏನು ಹೇಳಿದರೂ ನಾನು ಮಾಡಲು ಸಿದ್ಧಳಾಗಿದ್ದೇನೆ."

" ಮದರಾಸಿಗೆ ಹೋಗಬೇಕೆಂದಿದ್ದೇನೆ ಎಂದು ನೀನು ಹೇಳಿದೆ ನೋಡು – ಅದು ರಾಮಬಾಣ. ಅದನ್ನು ಸಾಹುಕಾರರ ಮೇಲೆ ಪ್ರಯೋಗಿಸು. ಅವರು ನನ್ನ ಸಲಹೆ ಕೇಳುತ್ತಾರೆ. ಮುಂದಿನ ಕೆಲಸ ನಾನು ನೋಡಿಕೊಳ್ಳುತ್ತೇನೆ."

" ನೀನು ಹೇಳಿದ ಹಾಗೇ ಮಾಡುತ್ತೇನೆ ಮಾರಾಯ"

" ಎಂದು ಆಶ್ವಾಸನವಿತ್ತಳು.

ನಾಲ್ಕೈದು ದಿವಸಗಳು ಕಳೆದವು. ಒಂದು ದಿನ ಸಂಜೆ ಚಿನ್ನಪ್ಪ ಶಿವಾನಂದನೊಂದಿಗೆ ತನ್ನ ಕಛೇರಿಯಲ್ಲಿ ಮಾತನಾಡುತ್ತ ಕುಳಿತಿದ್ದಾಗ ಸಾಹುಕಾರ ರುದ್ರಪ್ಪನವರ ಸವಾರಿ ಅತ್ತ ದಯಮಾಡಿಸಿತು. ಅಪರೂಪವಾಗಿ ಬಂದ ಸಾಹುಕಾರರಿಗೆ ಚಿನ್ನಪ್ಪ ಸ್ವಾಗತ ಬಯಸಿದ. ಚಿನ್ನಪ್ಪನ ಸಂಜ್ಞೆಯನ್ನು ಗ್ರಹಿಸಿ ಶಿವಾನಂದ ಸಾಹುಕಾರರ ಹತ್ತಿರ ಸ್ವಲ್ಪಹೊತ್ತು ಮಾತನಾಡುತ್ತಿದ್ದು ಎದ್ದುಹೋದ.

ಶಿವಾನಂದ ಹೋದಮೇಲೆ ಸಾಹುಕಾರರು ಚಿನ್ನಪ್ಪನಿಗೆ

" ಇನ್ನೂ ಯಾರಾದರೂ ಬತ್ತಾರಾ ಚಿನ್ನಪ್ಪ ? " ಎಂದು ಕೇಳಿದರು.

" ಯಾರೂ ಬರುವುದಿಲ್ಲ ಸ್ವಾಮಿ. "

" ತಲೆಬಾಗಿಲು ಹಾಕಿ ಮೇಲಕ್ಕೆ ಒಂದು ಪಾಕೀಟು ಸಿಗರೇಟು ತಕ್ಕೊಂಡು ಬಾ. ಪ್ರೈವೀಟಾಗಿ (Private) ನಿನ್ನ ತಾವ ಒಸಿ ಮಾತೋಡೋದು ಐತೆ "

ಎಂದು ಹೇಳಿ ಮೇಲಕ್ಕೆದ್ದು ಹೋದರು

ಚಿನ್ನಪ್ಪ ಎರಡು ಪ್ಯಾಕೆಟ್ ಸಿಗರೇಟ್ ತೆಗೆದುಕೊಂಡು ಒಂದು ಕಪ್ ಕಾಫಿ ತಾನೇ ಕೈಯಲ್ಲಿ ಹಿಡಿದುಕೊಂಡು, ಆಫೀಸಿನ ತಲೆಬಾಗಿಲು ಹಾಕಿಕೊಂಡು ಮೇಲಕ್ಕೆ ಬಂದ.

ಸಾಹುಕಾರರು ಮಹಡಿಮೇಲಿದ್ದ ಹರಕಲು ಸೋಫಾದ ಮೇಲೆ ಕಾಲು ಮಡಚಿಕೊಂಡು ಕುಳಿತಿದ್ದರು. ಎದುರಿಗಿದ್ದ ಮೇಜಿನ ಮೇಲೆ ಅವರ ಬೂಟಾದಾರಿ ರುಮಾಲು ತಲೆಕೆಳಕಾಗಿ ಕುಳಿತಿತ್ತು. ಚಿನ್ನಪ್ಪ ತಂದುಕೊಟ್ಟ ಕಾಫಿ ಮುಗಿಸಿ, ಸಿಗರೇಟ್ ಹೊತ್ತಿಸಿಕೊಂಡು ಹೊಗೆ ಬಿಡುತ್ತ, ಸಾಹುಕಾರರು ಕುಳಿತರು. ಅವರ ಮುಖದ ಮೇಲೆ ಚಿಂತೆಯ ನೇಗಿಲುಗೆರೆಗಳು ಮೂಡಿದ್ದವು.

ಚಿನ್ನಪ್ಪ ಮೃದುವಾಗಿ

" ಏನು ಸ್ವಾಮಿ–ಬಹಳ ಚಿಂತೆ ಮಾಡುತ್ತಾ ಇದ್ದೀರಿ. "

ಸಾಹುಕಾರರು ಅರ್ಧ ಮುಗಿದಿದ್ದ ಸಿಗರೇಟ್ ಬಿಸುಟು ಬೇರೆ ಸಿಗರೇಟ್ ಹಚ್ಚಿಕೊಳ್ಳುತ್ತಾ

" ಏನು ಹೇಳಲೋ ಚಿನ್ನಪ್ಪ. ನಾನು ಯಾರನ್ನು ನಂಬಿದರೂ ಅವರು ನನ್ನ ತಲೇಮ್ಯಾಕೆ ಚಪ್ಪಡಿ ಎಳೆಯೋಕೆ ನೋಡ್ತಾರೆ. "

" ಅಂಥಾದ್ದು ಏನು ಆಯ್ತು ಸ್ವಾಮಿ. ನನ್ನಿಂದೇನೂ ಅಪರಾಧವಾಗಿಲ್ಲವಷ್ಟೆ ? "

" ಛೀ ! ಪಾಪ ! ನೀನೇನು ಮಾಡಿದ್ದಿ ? ಭಾಗ್ಯಮ್ಮ ಬಿರುಗಾಳಿ ಎಬ್ಬಿಸವ್ಳೆ ಚಿನ್ನಪ್ಪ. "

" ಬಿರುಗಾಳಿ ! "

" ವನಜಾಕ್ಷೀಗೆ ಮದರಾಸಿನಲ್ಲಿ ಕೆಲಸ ಸಿಕ್ಕಿತು ಎಂದು ಕೇಳಿದಾರಭ್ಯ ಭಾಗ್ಯಮ್ಮ ಅಂಗಾರಾ ಆಗಿಬಿಟ್ಟವ್ಳೆ. ಅವಳಿಗಿಂತ ನಮ್ಮ ಸರೋಜ ಕಡೇನಾ ಎಂದು ಗೊಣಗ್ತಾವ್ಳೆ. "

" ವನಜಾಕ್ಷಿ ಅದೃಷ್ಟ ಚೆನ್ನಾಗಿದ್ದರೆ ಯಾರೇನು ಮಾಡುವುದಕ್ಕಾಗುತ್ತದೆ ಸಾಹುಕಾರರೇ. ಎಲ್ಲಾರಿಗೂ ಒಂದೇ ರೀತಿ ನಡೆಯಬೇಕೆಂದರೆ ಹೇಗೆ ಸಾಧ್ಯ. ಈಗ ಭಾಗ್ಯಮ್ಮನಿಗೂ ಸರೋಜವ್ವಗೂ ಏನು ಗುನಗಾಗಿರುವುದು. ಮಾರಾಯರು ನೀವು ಯಾವದಕ್ಕೆ ಕಡಿಮೆಮಾಡಿದ್ದೀರಿ. "

" ಕ್ರಿಯಾ ಏಳಿಕೊಟ್ಟರೆ ಬತ್ತೈತೇನೋ ಚಿನ್ನಣ್ಣ. ಎಷ್ಟಾದರೂ ಸೂಳೆ ರಕ್ತ ಅಲ್ವಾ ? "

" ಅದಕ್ಕೆ ನೀವೇನು ಮಾಡಬೇಕಂತೆ ? "

" ಅವಳು ಮಗಳನ್ನು ಕರ್ಕೊಂಡು ಮದರಾಸಿಗೆ ಹೋಗ್ತಾಳಂತೆ—ಫಿಲ್ಮ್ ಕಂಪೆನಿ ಸೇರೋದಿಕ್ಕೆ. "

" ಅಯ್ಯೋ ಮೂಳಿ ! ಹೋದರೆ ಹೋಗಲಿ ಬಿಟ್ಟುಬಿಡಿ ಸಾಹುಕಾರರೇ ಸರೋಜನ್ನ ಬಿಟ್ಟರೆ ನಿಮಗೆ ಯಾರೂ ಗತಿಯಿಲ್ಲ ಎಂದು ತಿಳಿದುಕೊಂಡಿದ್ದಾಳೇನೋ ? ನಿಮ್ಮನ್ನು ಬಿಟ್ಟುಹೋಗಿ ಹೊಟ್ಟೆಗಿಲ್ಲದೆ ಸತ್ತರೆ ಆವಾಗ ಬುದ್ಧಿ ಬರುತ್ತದೆ. "

" ಚಿನ್ನಣ್ಣಾ – ನೀನು ಏಳೋದೆಲ್ಲಾ ಸರೀನೆ. ಆದರೆ....... "

" ಏನು ಆದರೆ....... "

" ಸರೋಜನ್ನ ಬಿಟ್ಟು ಎಂಗೆ ಇರ್ಲೋ ? ಅವಳು ನನ್ನ ಮನೆಗೆ ಬಂದ ಒತ್ತು ಒಳ್ಳೇದು ಕಣ್ಲೇ. "

" ಅಕ್ಕಿ ಮೇಲೆ ಆಸೆ, ನಂಟರ ಮೇಲೆ ಇಷ್ಟ ಎಂದರೆ ಹೇಗಾಗುತ್ತದೆ ಅಣ್ಣಾ. ಸರೋಜನ್ನ ಬಿಡೋದಕ್ಕೆ ನಿಮಗೆ ಇಷ್ಟವಿಲ್ಲದಿದ್ದರೆ ಅವರಮ್ಮ ಹೇಳಿದ ಹಾಗೆ ಕೇಳೋದೊಂದೇ ದಾರಿ. "

" ಸರೋಜ ಫಿಲ್ಮ್‌ನಲ್ಲಿ ಪಾಲ್ಟು ಮಾಡಬೇಕಂತಲ್ಲಾ ! "

" ಆ ಚಪಲಾನೂ ತೀರಿಸಿಕೊಂಡು ಬಿಡಲಿ. ನಾವೇ ಎಲ್ಲಿಯಾದರೂ ಸೇರಿಸಿ ಪಾರ್ಟು ಮಾಡಿಸೋಣ. "

" ಏನು ಏಳ್ತೀಯೋ ಚಿನ್ನಪ್ಪ ! ನಿನ್ನ ಬುದ್ದೀಗೂ ಯಾಕ್ಲೀಗೆ ಮಂಕು ಬಡಿತೂಂತೀನಿ. ನಾನು ಮಡಿಕ್ಕೊಂಡಿರೋಳ್ನ ಬೇರೆ ಕಂಪೆನಿ ಜೀತಕ್ಕೆ ಸೇರಿಸಿದರೆ ನನ್ನ ಮರ್ರ್ಯಾದೆ ಏನಾಗ್ತೈತೆ ? ನೋಡಿದೋರು ನಗಾಕಿಲ್ವಾ ? "

" ಸರೋಜ ಬೇರೆ ಕಂಪೆನಿಯಲ್ಲಿ ಪಾರ್ಟು ಮಾಡೋದು ನಿಮ್ಮ ಗೌರವಕ್ಕೆ ಕುಂದೇ ಸರಿ – ಆದರೆ ಬೇರೆ ಉಪಾಯವೇನಿದೆ ಸಾಹುಕಾರರೇ ? "

" ಒಂದು ಪಿಕ್ಚರ್ ಮಾಡೋಕೆ ಎಷ್ಟಾಗತ್ತೈತೋ ? "

" ಕಮ್ಮಿಯೆಂದರೆ ಒಂದೂವರೆ ಲಕ್ಷವಾಗಬಹುದು. "

"ಕನ್ನಡದಲ್ಲಿ ಮಾಡಿದರೆ ದುಡ್ಡಾಗಾಕಿಲ್ಲ ಕಣೋ. ತಮಿಳಿನಲ್ಲಿ ಮಾಡಿದರೆ?"

"ತಮಿಳಿನಲ್ಲಿ ಚಿತ್ರ ಮಾಡುವುದಕ್ಕೆ ನಾಲ್ಕೈದು ಲಕ್ಷ ರೂಪಾಯಿ ಬೇಕಾಗುತ್ತದೆ. ತಮಿಳು ಸ್ಟಾರುಗಳ ಧಾರಣೆ ಬಹಳ ಏರಿಹೋಗಿದೆ ಸಾಹುಕಾರರೇ. ಐವತ್ತು ಸಾವಿರ, ಲಕ್ಷ ಬಿಟ್ರೆ ಅವರು ಮಾತೇ ಆಡೋದಿಲ್ಲ. ನಮ್ಮೋರಿಗೆ ಹೇಗೋ ಕೊಟ್ಟ ಹಾಗೆ ಮಾಡಿ ಕೆಲಸ ತೂಗಿಸಬಹುದು. ಎಷ್ಟೋ ಜನ ಫಿಲಂನಲ್ಲಿ ಪಾರ್ಟು ಮಾಡೋ ಷೋಕೀಗೆ ಬಿಟ್ಟಿಬಂದು ದುಡೀತಾರೆ. ಕಮ್ಮಿ ಖರ್ಚಿನಲ್ಲಿ ಕನ್ನಡದಲ್ಲಿ ಚಿತ್ರವಾಗುತ್ತದೆ. ಈ ಚಿತ್ರ ಚೆನ್ನಾಗಿ ನಡೆದರೆ ಮುಂದೆ ತಮಿಳಿನಲ್ಲಿ ನಾವೇ ಚಿತ್ರ ನಿರ್ಮಾಣಮಾಡಬಹುದು."

"ಒಂದೂವರೆ ಲಕ್ಷಾಂದ್ರೆ ತುಸ ಆಗ್ಲಿಲ್ಲ ಚಿನ್ನಣ್ಣ."

"ಅಷ್ಟು ದುಡ್ಡೂ ಒಟ್ಟಿಗೆ ಹಾಕಬೇಕಾಗಿಲ್ಲ ಅಣ್ಣಾ! ಕೈಯಲ್ಲಿ ೨೦-೨೫ ಸಾವಿರ ಇಟ್ಟುಕೊಂಡು ಕೆಲಸ ಆರಂಭಿಸಬಹುದು. ಚಿತ್ರ ಎರಡು ಮೂರು ಸಾವಿರ ಅಡಿ ಸಾಗಿದರೆ ಹಂಚಿಕೆಗಾರರು (Distributors) ತಾವೇ ಬಂದು ಹಣ ಕೊಡುತ್ತಾರೆ. ಅವರು ಮುಂಗಡವಾಗಿ ಕೊಡೋ ಹಣದಲ್ಲೇ ನಾವು ಚಿತ್ರ ಮುಗಿಸಬಹುದು."

"ಅಂಗಾ! ಇದು ನನಗೆ ಗೊತ್ತೇ ಇರ್ಲಿಲ್ಲ ಕಣ್ಲೇ?"

"ಇದರಲ್ಲಿ ಇನ್ನೊಂದು ಸ್ವಾರಸ್ಯ ಇದೆ ಸಾಹುಕಾರರೇ. ನಮ್ಮ ಜನಕ್ಕೆ ಡಬ್ಬ ಬೇಕು. ಹೊರಗಿಂದ ಬಂದದ್ದಾದರೆ ನಮ್ಮ ಜನ ತಲೆಯ ಮೇಲಿಟ್ಟು ಕೊಂಡು ಮೆರಸುತ್ತಾರೆ. ಚಿತ್ರಕ್ಕಿರುವುದು ಡೈರೆಕ್ಟರು, ಸ್ಟಾರು, ಮ್ಯೂಸಿಕ್ ಡೈರೆಕ್ಟರು – ಇವರು ಮೂವರನ್ನೂ ಹೊರಗಿನಿಂದ ಕರೆಸೋದು ಒಳ್ಳೆಯದು."

"ಅವರು ಎಷ್ಟೆಷ್ಟು ಕೇಳುತ್ತಾರೋ"

"ಅದಷ್ಟು ರಿಯಾಯಿತಿ ದರಕ್ಕೆ ಕುದುರಿಸೋಣ. ಕನ್ನಡರಂಗಕ್ಕೆ ಬಂದು ಕೆಲಸಮಾಡಿ ಹೆಸರು ತೆಗೆದುಕೊಳ್ಳಬೇಕೆಂದು ಹೊರಗಿನವರೂ ಆತುರರಾಗಿರುತ್ತಾರೆ. ಅಂಥವರನ್ನು ಹಿಡಿದರೆ ನಮ್ಮ ಕೆಲಸ ಸುಲಭವಾಗಿ ಆಗಿ ಹೋಗುತ್ತದೆ."

"ಹೊರಗಿನ ಟಾರ್ (Star) ಕರ್ಕೊಂಡು ಬಂದ್ರೆ ಸರೋಜನ ಎಸ್ರು ಹಿಂದಕ್ಕೆ ಬಿದ್ದುಹೋಗ್ತದಲ್ಲೋ?"

"ಐನಾತಿ ವಿಷಯ ಅಲ್ಲೇ ಇರೋದು ಅಣ್ಣಾ. ದೊಡ್ಡ ಹೆಸರು ಮಾಡಿಕೊಂಡಿರುವ ಸ್ಟಾರ್ ಕರ್ಕೊಂಡು ಬರಬೇಕು. ಅವಳ ಜತೆ ಸರೋಜನ

ಪಾರ್ಟ್ನರ್ ಮಾಡಿಸಬೇಕು. ಡೈರೆಕ್ಟರ್ ನಮ್ಮವನಾಗಿರುತ್ತಾನೆ. ಅವನಿಗೆ ಹೇಳಿ ಸ್ಟಾರ್ ಕೆಲಸ ಕೀಳುಮಾಡಿಸಿ, ಸರೋಜನ ಕೆಲಸ ಕಣ್ಣಿಗೆ ಬೀಳೋ ಹಾಗೆ ಮಾಡಿದರೆ ಒಂದೇ ಪಿಕ್ಚರಿನಲ್ಲಿ ಸರೋಜ ದೊಡ್ಡ ಹೆಸರು ಮಾಡಿ ಕೊಂಡುಬಿಡುತ್ತಾಳೆ."

"ಅದೆಲ್ಲಾ ಸರಿ ಚಿನ್ನಣ್ಣ. ಆಕಿದ ದುಡ್ಡಿನ ಗತಿಯೇನು ಅದು ಮೊದ್ಲು ಹೇಳು."

"ಹೇಳಿದೆನಲ್ಲಾ. ಚಿತ್ರ ಮುಗಿಯುವಷ್ಟರಲ್ಲಿ ಹಾಕಿದ ಹಣ ಬಂದು ಬಿಡುತ್ತದೆ – ಅದರಲ್ಲಿ ಸಂದೇಹವೇ ಇಲ್ಲ. ಮೇಲೆ ವರಮಾನ ಒಂದು ಲಕ್ಷ ಗಟ್ಟಿ ಎಂದು ನಾನು ಲೆಕ್ಕಹಾಕಿದ್ದೇನೆ. ಚಿತ್ರ ತಯಾರುಮಾಡುವುದೂ, ಪ್ರದರ್ಶಿಸುವುದೂ ಎಲ್ಲಾ ಲೆಕ್ಕ ಹಾಕಿದರೆ ಎರಡು ವರ್ಷ ಎಂದು ತಿಳಿದರೂ ಬಡ್ಡಿ ಲೆಕ್ಕ ಹಾಕಿ ನೋಡಿ ಅಣ್ಣ. ಎಷ್ಟು ಗಿಟ್ಟಿದ ಹಾಗಾಯಿತು. ಒಂದು ವೇಳೆ ಲಾಭ ಬರದೇ ಇದ್ದರೂ ಅಸಲಿಗಂತೂ ಮೋಸವಿಲ್ಲ."

"ಅಂಗಾದರೆ ಶಿವನ ಮೇಲೆ ಬಾರ ಹಾಕಿ ಪಿಲ್ಮು ಮಾಡೂಂತೀಯಾ?

"ಯೋಚನೆ ಮಾಡಿ ನಿರ್ಧಾರ ಮಾಡಿ ಅಣ್ಣಾ."

ಎಂದು ಚಿನ್ನಪ್ಪ ಮೆಲ್ಲನೆ ನುಣಚಿಕೊಂಡ.

ಸಾಹುಕಾರರ ಮನಸ್ಸಿನಲ್ಲಿ ಚಿನ್ನಪ್ಪನ ಚಿತ್ರವರ್ಣನೆ ಅಚ್ಚಳಿಯದೆ ನಿಂತುಬಿಟ್ಟಿತು. ಅಲ್ಲಿಂದೆದ್ದು ಅಂಗಡಿಗೆ ಹೋಗಿ ಅಂದಿನ ಜಮಾಖರ್ಚು ನೋಡಿ ನೇರವಾಗಿ ಭಾಗ್ಯಮ್ಮನ ಮನೆಗೆ ನಡೆದರು.

ಸಾಹುಕಾರರು ನಿತ್ಯಕ್ಕಿಂತ ಬೇಗ ಬಂದುದನ್ನು ಕಂಡು ಭಾಗ್ಯಮ್ಮ ಆಶ್ಚರ್ಯಪಟ್ಟುಕೊಂಡಳು. ತೊಟ್ಟಿಯಲ್ಲಿದ್ದ ಮಂಚದ ಮೇಲೆ ಸಾಹು ಕಾರರು ಕುಳಿತರು. ಪದ್ಧತಿಯಂತೆ ಮಂಚದ ಬುಡದಲ್ಲಿದ್ದ ಜಮಖಾನೆಯ ಮೇಲೆ ಭಾಗ್ಯಮ್ಮ ಕುಳಿತಳು. ಸಾಹುಕಾರರು ಸುತ್ತಲೂ ನೋಡಿ

"ಅಮ್ಮಯ್ಯ ಎಲ್ಲಿ" ಎಂದು ಕೇಳಿದರು.

"ಬರ್ತಾಳೆ. ತಲೆ ಬಾಚಿಕೊಳ್ತಿದ್ದಾಳೆ."

ಎಂದು ಹೇಳಿ, ಮಂಚದ ಕೆಳಗಿದ್ದ ತಾಂಬೂಲ ಕರಂಡವನ್ನೆಳೆದು ಕೊಂಡು

"ತಾಂಬೂಲ ಹಾಕಿಕೊಳ್ಳುತ್ತೀರೇನು?" ಎಂದು ಕೇಳಿದಳು.

"ಉಣ್ಣಾಕೆ ಇಡಾಕಿಲ್ವೇನು? ತಾಂಬೂಲ ಕೊಟ್ಟು ಕಳಿಸಿ ಬುಡ್ತೀಯೋ?"

ಭಾಗ್ಯಮ್ಮ ನಕ್ಕು ಒಳಗೆ ಹೋಗಿ ಅಡಿಗೆಯ ರೇವಣ್ಣನಿಗೆ ಸೂಚನೆ ಕೊಟ್ಟು ಬಂದಳು. ಸರೋಜ ತನ್ನ ಅಲಂಕಾರ ಮುಗಿಸಿಕೊಂಡು, ತಲೆ ತುಂಬ ಮಲ್ಲಿಗೆ ದಂಡೆ ಮುಡಿದುಕೊಂಡು ಬಂದಳು. ಸಾಹುಕಾರರು ಅವಳನ್ನು ಸ್ವಾಗತಿಸಿ, ಸಂತೋಷದಿಂದ ಪಕ್ಕದಲ್ಲಿ ಕೂರಿಸಿಕೊಂಡರು.

ಸಾಹುಕಾರರು ಸರೋಜನನ್ನೇ ದಿಟ್ಟಿಸಿ ನೋಡುತ್ತಿದ್ದುದನ್ನು ಕಂಡು ಭಾಗ್ಯಮ್ಮ

"ಇದೇನು ಸರೋಜನ್ನ ಇವತ್ತೇ ನೋಡಿದ ಹಾಗೆ ನೋಡುತ್ತಿರುವಿರಿ?"

"ಅವಳ ಮುಕದಲ್ಲಿ ಏನೋ ಒಸ ಕಳೆ ಬಂದೈತೆ. ಏನೂಂತ ತಿಳೀಸಲಿಲ್ಲ. ಮರಿ ಸಾವಕಾರರು ಅವತಾರ ಮಾಡವ್ರೋ?"

"ಹೋಗಿ ಅಂದ್ರೆ"

ಎಂದು ಸರೋಜ ಹುಸಿಮುನಿಸನ್ನು ತೋರಿದಳು.

ಸಾಹುಕಾರರು ಯೋಚನೆ ಮಾಡುತ್ತ ಭಾಗ್ಯಮ್ಮನನ್ನು ನೋಡಿ

"ವನಜಾಕ್ಷಿ ವಿಚಾರ ನೀನು ಏಳಿದ್ದು ನನ್ನ ಮನಸ್ಸಿಗೆ ಎಂಗೆಂಗೋ ಆಗೈತೆ ಭಾಗ್ಯಮ್ಮ."

ಭಾಗ್ಯಮ್ಮ ದೀರ್ಘವಾಗಿ ನಿಟ್ಟುಸಿರುಬಿಟ್ಟು

"ಯಾರ ಅದೃಷ್ಟಕ್ಕೆ ಯಾರು ಹೊಣೆ ಸಾಹುಕಾರರೇ. ಸಮುದ್ರದ ನಂಟಸ್ಥನ, ಉಪ್ಪಿಗೆ ಬಡತನ ಎನ್ನೋ ಹಾಗಿದೆ ನಮ್ಮ ಪಾಡು. ನಮ್ಮ ಜಾತಿಯವರು, ಸರೀಕರು ನಮ್ಮನ್ನು ನೋಡಿ ನಗೋ ಹಾಗಾಯಿತು."

"ಹುಚ್ಚಿ. ಸರೋಜನ ಯೋಗಕ್ಷೇಮ ನಿಂಗೆ ಮಾತ್ರ ಸೇರಿದ್ದು, ನಂಗೆ ಸೇರಿದ್ದಲ್ಲಾಂತ ತಿಳ್ಕೊಂಡಿದ್ದೀಯೇನು? ನನ್ನ ಕೈ ಇಡಿದೋಳು ಅವರಿವರ ಕಂಪನಿಗೆ ಓಗಿ ದುಡಿಯೋಕೆ ಕಳ್ಸಿದ್ರೆ ನನ್ನ ಮರ್ವಾದೆ ಏನಾಯ್ತು?"

"ನೀವೇನು ಯೋಚನೆ ಮಾಡಿದ್ದೀರಿ ಹೇಳಿ."

"ನನ್ನ ಯಾಕೆ ಕೇಳ್ತಿ ಚಿನ್ನಪ್ಪನ್ನ ಕೇಳು. ಇಷ್ಟುಹೊತ್ತು ಅವನ ತಾವ ಅದೇ ಮಾತಾಡ್ತಿದ್ದೆ. ನಾವೇ ಪಿಲ್ಮು ಮಾಡಿಬಿಡೋವ ಎಂದು ನಿಶ್ಚಯ ಮಾಡಿವ್ನಿ ಭಾಗ್ಯಮ್ಮ."

ಭಾಗ್ಯಮ್ಮನ ಸಂತೋಷ ಕೂಡಲೆ ಮುಖದಲ್ಲಿ ವ್ಯಕ್ತವಾಗಿಬಿಟ್ಟಿತು.

"ನೀವು ಸುಮ್ಮನೆ ಕೂಡುವುದಿಲ್ಲಾಂತ ನನಗೆ ಗೊತ್ತಿತ್ತು. ಕೇಳಿ ಇವತ್ತು ಬೆಳಿಗ್ಗೆ ಅಮ್ಮಯ್ಯನ ಹತ್ತಿರ ನಾನೇನು ಹೇಳಿದೆ. ವನಜಾಕ್ಷಿ ವಿಷಯ ಕೇಳಿದ ಮೇಲೆ ಸಾಹುಕಾರರು ಖಂಡಿತ ಸುಮ್ಮನೆ ಇರುವುದಿಲ್ಲ.

ಅವರೇ ಪಿಕ್ಚರ್ ಮಾಡಿ ನಿನ್ನ ಕೈಯಲ್ಲಿ ಪಾರ್ಟಿಮಾಡಿಸ್ತಾರೆ ಎಂದು ಹೇಳಿದೆ."

"ಕೆಲಸ ಯಾವಾಗ ಷುರು ಮಾಡಿಸುತ್ತೀರಿ"

ಎಂದು ಸರೋಜ ಕೇಳಿದಳು.

"ಬೇಗಲೇ ಷುರು ಮಾಡಿಸ್ತೀನಿ ಚಿನ್ನಾ. ಸ್ವಲ್ಪ ತಡೆದುಕೋ—ಆತುರ ಪಡಬೇಡ"

ಎಂದು ಸಾಹುಕಾರರು ಸಮಾಧಾನ ಹೇಳಿದರು.

ಅಂದು ಭಾಗ್ಯಮ್ಮನ ಮನೆಯಲ್ಲಿ ಸಾಹುಕಾರರಿಗೆ ರಾಜೋಪಚಾರ ವಾಯಿತು. ಬೆಳಗಾಗುವ ವೇಳೆಗೆ ಸಾಹುಕಾರರ ನಿರ್ಧಾರ ಮತ್ತಷ್ಟು ದೃಢಪಟ್ಟಿತು.

ತಮ್ಮ ಅಂಗಡಿಗೆ ಹೋಗುವ ಮುನ್ನ ಸಾಹುಕಾರರು ಚಿನ್ನಪ್ಪನ ಆಫೀಸಿಗೆ ಬಂದು

"ಒಳ್ಳೇ ದಿನ ನೋಡಿ ಕೆಲಸ ಸುರುಮಾಡ್ಬುಡು ಚಿನ್ನಪ್ಪ. ಒಳ್ಳೆ ಪ್ರೊಗದಸ್ತು ಆಸಾಮಿ ಹಿಡಿದು ಕಥೆ ಬರಸಬೇಕು ನೋಡು. ಜನ ಯಾರು ಯಾರು ಅವ್ರೆ ಇಚಾರಿಸಿ ನೀನು ನಂಗೆ ತಿಳಿಸು"

ಎಂದು ಹೇಳಿ ಹೋದರು.

೫

ಆಫೀಸಿನಲ್ಲಿ ಗೆಲುವಿನ ಸುಮ್ಮಾನದಿಂದ ಕುಳಿತಿದ್ದ ಚಿನ್ನಪ್ಪನನ್ನು ನೋಡಿ ಶಿವಾನಂದ

"ಮ್ಯಾನೇಜರು ಒಳ್ಳೆ ಕುಷಿಯಾಗಿದ್ದಾರೆ ಇವತ್ತು. ರೇಸ್‌ನಲ್ಲಿ ಏನಾದರೂ ಪುಟ್ಟಗಂಟು ಸಿಕ್ಕಿತೋ ?"

"ಬನ್ನೀ – ಕುಳಿತುಕೊಳ್ಳಿ. ಸೊಗಸಾದ ಕಾಫಿ ತಿಂಡಿ ಮೊದಲು ತರಿಸಿ. ನಿಮಗೆ ಭಾರಿ ಸಂತೋಷದ ಸುದ್ದಿ ಹೇಳಬೇಕಾಗಿದೆ."

ಅವನು ಹೇಳಲಿರುವ ಸುದ್ದಿ ಏನೆಂದು ಶಿವಾನಂದ ಊಹಿಸಲು ಸಾಧ್ಯ ವಾಗಲಿಲ್ಲ.

"ವಿಷಯ ಏನು ಹೇಳಿ ಚಿನ್ನಪ್ಪನವರೇ. ನಾವೇ ಎದ್ದು ಕಬ್ಬನ್‌ಪಾರ್ಕ್ ರೆಸ್ಟುರಾಗೆ ಹೋಗಿ ಬರೋಣ. ಇಲ್ಲಿಗೆ ತಿಂಡಿ ತರಿಸಿದರೆ ಆರಿ ತಂಗುಳಾಗಿ ಹೋಗುತ್ತದೆ.

"ತಿಂಡಿ ಇರಲಿ ಕೇಳಿ – ಸಾಹುಕಾರರ ಕೈಯ್ಯಲ್ಲಿ ಹೂ ಎನಿಸಿಬಿಟ್ಟೆ."

"ಫಿಲಂ ಪ್ರೊಡಕ್ಷನ್ನಿಗೆ........"

"ಹೂ! ಇನ್ನು ಯಾವದಕ್ಕೆ ಎಂದು ತಿಳಿದುಕೊಂಡಿರಿ"

"ನಿಜವಾಗಿ!"

"ಪ್ರಮಾಣ ಮಾಡಲೇನು?"

ಸಂತೋಷದ ಭರದಲ್ಲಿ ಶಿವಾನಂದನ ಬಾಯಲ್ಲಿ ಮಾತೇ ಹೊರಡಲಿಲ್ಲ. ಸಿಗರೇಟ್ ಪ್ಯಾಕೆಟ್ ತೆಗೆದು ಚಿನ್ನಪ್ಪನಿಗೆ ನೀಡಿ, ತಾನು ಸಿಗರೇಟ್ ಹಚ್ಚಿ

"ನೀವು ಅಸಾಧ್ಯರಪ್ಪ. ಪವಾಡಪುರುಷರು."

"ಕೀಲಿ ತಿರುಗಿಸೋ ಕಡೆ ತಿರುಗಿಸಿದರೆ ಕೆಲಸ ಆಗತ್ತೆ ಶಿವಾನಂದರೇ. ಸಾಹುಕಾರರು ಮನಸ್ಸು ಬದಲಾಯಿಸುವುದರೊಳಗಾಗಿ ನಾವು ಕೆಲಸ ಆರಂಭಿಸಿಬಿಡಬೇಕು. ಕಲ್ಕತ್ತೆಯಲ್ಲಿ ನಿಮ್ಮ ಸ್ನೇಹಿತರು ಡೈರೆಕ್ಟರ್ ಇದ್ದಾರೆ ಎಂದು ಹೇಳಿದಿರಲ್ಲಾ ಅವರನ್ನು ಕೂಡಲೆ ಕರೆಸುವುದಕ್ಕೆ ಸಾಧ್ಯವೋ"

"ಸಾಧ್ಯ – ನಾನು ಇವತ್ತೇ ವೈರ್ ಮಾಡುತ್ತೇನೆ"

"ಕೂಡಲೇ ಪ್ಲೇನ್‌ನಲ್ಲಿ ಹೊರಟುಬರುವಂತೆ ತಿಳಿಸಿ. ಆ ಮನುಷ್ಯ ಬಂದಮೇಲೆ ನಮ್ಮ ಕೆಲಸ ಮುಂದುವರಿಯಬೇಕು. ಡೈರೆಕ್ಟರ್ ಜತೆ ಕಾಂಟ್ರ್ಯಾಕ್ಟ್ ಮಾಡಿಸಿಬಿಟ್ಟರೆ ಸಾಹುಕಾರರು ಹಿಂದಲೇಟು ಹಾಕುವುದಕ್ಕೆ ಸಾಧ್ಯವಾಗುವುದಿಲ್ಲ. ನನ್ನ ಬೈಸಿಕಲ್ ತೆಗೆದುಕೊಂಡು ನೀವೇ ಹೋಗಿ ಕೂಡಲೆ ವೈರ್ ಕೊಟ್ಟು ಬನ್ನಿ."

ಶಿವಾನಂದ ಅರೆಕ್ಷಣವೂ ತಡಮಾಡಲಿಲ್ಲ. ಪ್ರಧಾನ ಟೆಲಿಗ್ರಾಫ್ ಕಛೇರಿಗೇ ಹೋಗಿ ಭೂಪೆನ್ ಬಾಬುಗಳಿಗೆ 'ಪ್ರಿಪೇಯ್ಡ್ ಎಕ್ಸ್‌ಪ್ರೆಸ್ ಟೆಲಿಗ್ರಾಂ' ಮಾಡಿಬಂದು

"ಈ ವಿಳಾಸಕ್ಕೆ ಇವತ್ತು ಉತ್ತರ ಬರುತ್ತದೆ. ಭೂಪೆನ್ ತಡಮಾಡು ವುದಿಲ್ಲ. ಎರಡು ದಿವಸಗಳೊಳಗಾಗಿ ಇಲ್ಲಿರುತ್ತಾರೆ."

"ಕಥೆ ವಿಷಯ ನಿಮ್ಮ ಬಾಬು ಬಂದ ಮೇಲೆ ಯೋಚನೆ ಮಾಡೋಣ. ನೀವು ಇವತ್ತು ಮನೆಗೆ ಹೋಗಬೇಡಿ–ಇಲ್ಲೇ ಇದ್ದುಬಿಡಿ–ನಾನು ಊಟ ತರಿಸುತ್ತೇನೆ."

ಶಿವಾನಂದ, ಚಿನ್ನಪ್ಪ ಕುಳಿತುಕೊಂಡು. ಪೂರ್ವಭಾವಿಯಾಗಿ ಮಾಡ ಬೇಕಾದ ವ್ಯವಸ್ಥೆಗಳ ಬಗ್ಗೆ ಮಾತನಾಡಿದರು.

"ನನಗೂ ಈ ಕಸುಬು ಹೊಸದು. ನಿಮ್ಮ ಮಾತು ಕೇಳಿಕೊಂಡು ನಾನು ಹೊಳೆಗೆ ಇಳಿದಿದ್ದೇನೆ—ನಮ್ಮ ಸಾಹುಕಾರರನ್ನೂ ಇಳಿಸಿದ್ದೇನೆ. ನೀವು ಆಸಕ್ತಿ ವಹಿಸಿ ಕೆಲಸಮಾಡಬೇಕು. ಎಲ್ಲಿ ಶುರುಮಾಡಬೇಕು - ಹೇಗೆ ಶುರುಮಾಡಬೇಕು ನನಗೆ ವಿವರಿಸಿ ಹೇಳಿ."

"ಚಿತ್ರದ ಸೂತ್ರಧಾರ ಡೈರೆಕ್ಟರ್. ಅವರನ್ನು ಜತೆಯಲ್ಲಿಟ್ಟುಕೊಂಡೇ ನಾವು ಎಲ್ಲಾ ಕೆಲಸಮಾಡಬೇಕು. ಅವರು ಬರುವುದರೊಳಗಾಗಿ ಕೆಲವು ವಿಷಯಗಳನ್ನು ಕುರಿತು ಆಲೋಚಿಸಿರಬಹುದು. ಡೈರೆಕ್ಟರು, ಕಥಾಲೇಖಕ, ಸ್ಟೂಡಿಯೋ, ಸಂಗೀತ ನಿರ್ದೇಶಕ, ಪ್ರೊಡಕ್ಷನ್ ಮ್ಯಾನೇಜರ್, ನಟ ನಟಿಯರು ಇವರೇ ಚಿತ್ರದ ಅಂಗಾಂಗಗಳು. ಒಳ್ಳೆಯ ಕಥಾಲೇಖಕರನ್ನು ಗೊತ್ತುಮಾಡಿಕೊಳ್ಳುವುದು ದೊಡ್ಡ ಕೆಲಸ. ಅವರು ಕಥೆ, ಸಂಭಾಷಣೆ, ಹಾಡುಗಳನ್ನು ಬರೆದುಕೊಡಬೇಕಾಗುತ್ತದೆ. ಅಷ್ಟೇ ಮುಖ್ಯವಾದುದು ಸಂಗೀತ ನಿರ್ದೇಶಕರ ಆಯ್ಕೆ. ನೀವು ನೋಡಿದಿರೋ ಇಲ್ಲವೋ—ಖಜಾಂಚಿ ಚಿತ್ರ ಹೈದರ್ ಹುಸೇನರ 'ಲೂಟ್‌ಗಯೀ' ಹಾಡಿನ ಬಲದ ಮೇಲೆ ನಡೆದದ್ದು. ನಮ್ಮ ಚಿತ್ರದಲ್ಲಿ ಒಂದೆರಡು ಹಾಡುಗಳು ಹಿಡಿದರೆ ಸಾಕು—ಚಿತ್ರ ಬದುಕಿ ಹೋಗುತ್ತದೆ. ನಮಗೆ ಸರಿಯಾಗಿ ಸಹಕಾರ ಕೊಡುವ ಸ್ಟೂಡಿಯೋ ಗೊತ್ತು ಮಾಡಿಕೊಳ್ಳಬೇಕು. ಸ್ಟೂಡಿಯೋದವರು ಕಿತಾಪತಿ ಆರಂಭಿಸಿದರೆ ನಮ್ಮ ಗತಿ ಮುಗಿದ ಹಾಗೆಯೇ. ಇನ್ನು ಇದರ ವ್ಯವಸ್ಥೆ ನೋಡಿಕೊಳ್ಳುವುದಕ್ಕೆ ಪ್ರೊಡಕ್ಷನ್ ಮ್ಯಾನೇಜರು—ಅಭಿನಯಕ್ಕೆ ನಟನಟಿಯರು."

"ನಿಮಗೆ ಒಂದು ರಹಸ್ಯ ನಾನು ಹೇಳಬೇಕಾಗಿದೆ ಶಿವಾನಂದ್. ಮುಂದೆ ಚಿತ್ರದ ವಿಷಯ ಯೋಚನೆಮಾಡುವಾಗಲೆಲ್ಲಾ ಅದನ್ನು ನೀವು ಗಮನದಲ್ಲಿಟ್ಟುಕೊಂಡಿರಬೇಕು."

"ಯಾವದದು ರಹಸ್ಯ?"

"ನಮ್ಮ ಸಾಹುಕಾರರು ಚಿತ್ರನಿರ್ಮಾಣ ಮಾಡುವುದಕ್ಕೆ ಹೊರಟಿರುವುದು ಏತಕ್ಕೆ ಗೊತ್ತೋ?"

"ಇದೂ ಒಂದು ಒಳ್ಳೆಯ ವ್ಯಾಪಾರ, ಸಾಹುಕಾರರ ಅದೃಷ್ಟ ಚೆನ್ನಾಗಿದ್ದರೆ ಸಾವಿರಾರು ರೂಪಾಯಿ ಸಂಪಾದಿಸಬಹುದು."

"ಸಂಪಾದನೆ ದೃಷ್ಟಿಯೇನೋ ಇದೆ—ಆದರೆ ಅದೇ ಮುಖ್ಯವಾದುದಲ್ಲ. ಸಾಹುಕಾರರು ಸಾಕಷ್ಟು ಹಣ ಸಂಪಾದನೆ ಮಾಡಿಕೊಂಡು ಸುಖವಾಗಿದ್ದಾರೆ. ಫಿಲ್ಮ್ ತಯಾರಿಕೆಯ ಗೊಂದಲಕ್ಕೆ ಅವರು ಬೀಳಬೇಕಾಗಿಲ್ಲ. ಆದರೂ ಮನಸ್ಸು ಮಾಡಿ ಧೈರ್ಯವಾಗಿ ಹೊರಟಿದ್ದಾರೆ."

" ಏತಕ್ಕೆನ್ನುವುದನ್ನು ನೀವು ಹೇಳಲೇ ಇಲ್ಲವಲ್ಲಾ ! "

" ಅವರಿಗೆ ಒಬ್ಬರು ಅಮ್ಮಾವರು ಇದ್ದಾರೆ – ಅವರ ತೃಪ್ತ್ಯರ್ಥವಾಗಿ ಸಾಹುಕಾರರು ಚಿತ್ರ ನಿರ್ಮಾಪಕರಾಗಲು ಮನಸ್ಸು ಮಾಡಿದ್ದಾರೆ. ಆ ಅಮ್ಮಾವರ ತೃಪ್ತಿಯ ಮೇಲೆ ನಮ್ಮ ಸಕಲ ಭವಿಷ್ಯ ನಿಂತಿರುವುದು. ಅವರು ಒಲಿದರೆ ನಾವು ಗೆದ್ದೆವು, ಅವರು ಮುನಿದರೆ ನಾವು ಬಿದ್ದೆವು."

" ಇಷ್ಟು ದಿವಸ ಈ ವಿಷಯ ನೀವು ನನ್ನಲ್ಲಿ ಹೇಳೇ ಇರಲಿಲ್ಲವಲ್ರೀ. ನನಗೂ ಗಾಳಿಸುದ್ದಿ ಬಂದಿತ್ತು. ಅಮ್ಮಾವರು ಹೇಗೆ– ಒಳ್ಳೆಯವರೋ ? "

" ಅವಳೇನೋ ಚಿನ್ನದಂಥ ಹುಡುಗಿ. ದೊಡ್ಡ ಮನಸ್ಸು – ದೊಡ್ಡ ಸ್ವಭಾವ. ಕೇದಗೆ ಹೂವಿಗೆ ಮುಳ್ಳು ಅಂಟಿಕೊಂಡಿರುವ ಹಾಗೆ ಅವಳಿಗೆ ಒಬ್ಬಳು ಅಮ್ಮ ಅಂಟಿಕೊಡಿದ್ದಾಳೆ. ಆ ರಾಕ್ಷಸಿಯನ್ನು ಎದುರಿಸಬೇಕಾದರೆ ಸಾಕ್ಷಾತ್ ರಾಮಚಂದ್ರನೇ ಧನುರ್ಧಾರಿಯಾಗಿ ಬರಬೇಕಾಗುತ್ತದೆ. "

" ಆ ಕೇದಗೆ ಮುಳ್ಳಿಗೂ ಒಳ್ಳೆಯ ಮಾತು ಆಡಿಕೊಂಡು ಕಾಲಹಾಕಿದರೆ ಆಯಿತು."

" ನಾನು ಅದೇ ಹೇಳಬೇಕೆಂದಿದ್ದುದು. ನೀವಿನ್ನೂ ತರುಣರು – ಬಿಸಿ ರಕ್ತ. ಆ ಮುದುಕಿ ತಲೆಯಲ್ಲಾ ಮಾತಾಡತ್ತೆ. ಅವಳ ಮಾತಿಗೆ ಜೇಸತ್ತು ನೀವೋ ನಿಮ್ಮ ಡೈರೆಕ್ಟರೋ ಅವಳ ಮೇಲೆ ತಿರುಗಿಬಿದ್ದರೆ ನಿಮ್ಮ ಕಥೆ ಮುಗಿದೇ ಹೋಗುತ್ತದೆ. "

ಚಿನ್ನಪ್ಪ ಗಡಿಯಾರ ನೋಡಿದ. ಒಂದು ಗಂಟೆಯ ಸಮಯವಾಗಿತ್ತು. ಕೂಡಲೇ ಥಿಯೇಟರಿನ ಒಬ್ಬ ಆಳನ್ನು ಕೂಗಿ ಅವನ ಕೈಯಲ್ಲಿ ಹೋಟಲಿಂದ ಊಟ ತರಿಸಿದ. ಶಿವಾನಂದ, ಚಿನ್ನಪ್ಪ ಊಟಮಾಡಿ ಆಫೀಸಿನ ಮಹಡಿಯ ಮೇಲಿದ್ದ ಸೋಫಾಗಳ ಮೇಲೆ ವಿಶ್ರಾಂತಿಗಾಗಿ ಪವಡಿಸಿದರು. ಸುಮಾರು ನಾಲ್ಕು ಗಂಟೆಯ ವೇಳೆಗೆ ಟೆಲಿಗ್ರಾಫ್ ಆಳು ಬಂದು ಕೂಗಲು ಎಚ್ಚರವಾಯಿತು. ಶಿವಾನಂದ ಆತುರದಿಂದ ಎದ್ದು ಹೋಗಿ ಟೆಲಿಗ್ರಾಂ ಸ್ವೀಕರಿಸಿದ. ಭೂಪೆನ್ ಬಾಬುಗಳು ವೈರ್ ಮಾಡಿದ್ದರು.

" ನಾಡಿದ್ದು ಸೋಮವಾರ ಬೆಳಿಗ್ಗೆ ಇಲ್ಲಿಂದ ಹೊರಟು ಅಂದೇ ಸಂಜೆ ಬರುತ್ತೇನೆ. "

ತಾವು ಆರಂಭಿಸಿದ ಕೆಲಸ ಇಷ್ಟು ಸುಗಮವಾಗಿ ಸಾಗುತ್ತಿರುವುದನ್ನು ನೋಡಿ ಚಿನ್ನಪ್ಪ, ಶಿವಾನಂದ ಇಬ್ಬರೂ ಹರ್ಷಗೊಂಡರು. ಈ ಸಂತೋಷದ ಸುದ್ದಿಯನ್ನು ಭಾಗ್ಯಮ್ಮನಿಗೆ ತಿಳಿಸಲು ಆತುರಗೊಂಡ ಚಿನ್ನಪ್ಪ ಅವಳ

ಮನೆಯಕಡೆ ಹೊರಟ. ಶಿವಾನಂದ ಬೆಳಿಗ್ಗೆ ಕಾಣುವುದಾಗಿ ಹೇಳಿ ತನ್ನ ಮನೆಯ ಹಾದಿ ಹಿಡಿದ.

ಭಾಗ್ಯಮ್ಮ ಚಿನ್ನಪ್ಪನನ್ನು ಅತ್ಯಾದರದಿಂದ ಸ್ವಾಗತಿಸಿದಳು. ಸಾಹುಕಾರರ ಮನಸನ್ನು ಒಲಿಸಿಕೊಂಡು ಚಿತ್ರ ನಿರ್ಮಾಣವನ್ನು ನಿಶ್ಚಯಿಸಿದುದಕೆ ಚಿನ್ನಪ್ಪನಿಗೆ ಹೃತ್ಪೂರ್ವಕವಾದ ಕೃತಜ್ಞತೆ ಅರ್ಪಿಸಿದಳು.

ಚಿನ್ನಪ್ಪ ತನ್ನ ಕಿಸೆಯಿಂದ ಭೂಪೆನ್ ಬಾಬುಗಳ ತಂತೀ ವರ್ತಮಾನ ತೆಗೆದು ಅವರು ಬರುವ ಸುದ್ದಿಯನ್ನು ಭಾಗ್ಯಮ್ಮನಿಗೆ ತಿಳಿಸಿದ. ಭೂಪೆನ್ ಬಾಬುಗಳ ಬಗ್ಗೆ ಹೆಚ್ಚು ತಿಳಿಯಲು ಕುತೂಹಲಿಯಾದ ಭಾಗ್ಯಮ್ಮನಿಗೆ ತನಗೆ ತಿಳಿದಿದ್ದುದರ ಜತೆಗೆ ಮತ್ತಷ್ಟು ಸೇರಿಸಿ ಅವರನ್ನು ಬಹಳ ಪ್ರಶಂಸಿಸಿದ.

" ಒಂದೇ ಚಿತ್ರದಲ್ಲಿ ಭೂಪೆನ್‌ಬಾಬು ಸರೋಜನನ್ನು ಆಲ್ ಇಂಡಿಯಾ ಸ್ಟಾರ್ ಮಾಡಿಬಿಡುತ್ತಾರೆ ಭಾಗ್ಯಮ್ಮ. ನಿಮಗೆ ದಶಾಕಾಲ ಬಂದಾಗ ಬಡವನನ್ನ ಮರೆಯಬೇಡಿ. "

" ಏನು ಮಾತಾಡ್ತಿ ಬಿಡು ಚಿನ್ನಪ್ಪ. ನೀನು ಮಾಡಿರುವ ಉಪಕಾರ ನಾವು ಮರೆತರೆ ದೇವರು ಮೆಚ್ಚುತ್ತಾನೆಯೇ—ಚಿತ್ರದ ಕೆಲಸ ಯಾವಾಗ ಆರಂಭಿಸುವಿರಿ. "

" ಬಾಬುಗಳು ಬಂದಕೂಡಲೆ. ಕಾಲವಿಳಂಬ ಮಾಡುವ ಹಾಗಿಲ್ಲ. ಸರೋಜನ್ನ ಸ್ವಲ್ಪ ಸಂಗೀತ, ನಾಟ್ಯ ಅಭ್ಯಾಸ ಮಾಡಿಕೋ ಎಂದು ಹೇಳು. "

" ಹಾಗೇ ಆಗಲಿ. ಡೈರೆಕ್ಟರನ್ನು ನಮ್ಮ ಮನೆಗೆ ಕರೆದುಕೊಂಡು ಬರುವುದಿಲ್ಲವೇ ? "

" ಮೊದಲು ಕರಾರು ಪತ್ರವಾಗಲಿ. ಡೈರೆಕ್ಟರು ಸ್ಟಾರ್ ನೋಡದಿದ್ದರಾಗುತ್ತದೆಯೇ ? "

" ಒಂದು ದಿವಸ ಮೊದಲೇ ಬಂದು ಹೇಳಪ್ಪಾ. ಲಕ್ಷಣವಾಗಿ ಅಷ್ಟು ತಿಂಡಿ ತೀರ್ಥ ಮಾಡಿಸಿರುತ್ತೇನೆ. "

" ಇನ್ನೊಂದು ವಿಷಯ ಭಾಗ್ಯಮ್ಮ. ಚಿತ್ರಕ್ಕೆ ಸರೋಜ ಸ್ಟಾರ್, ಜತೆಗೆ ಹೆಸರುವಾಸಿಯಾದ ಒಬ್ಬ ನಟಿಯನ್ನು ಹೊರಗಿನಿಂದ ಬರಮಾಡಿಕೊಳ್ಳಬೇಕಾಗುತ್ತದೆ. ಇವರಲ್ಲದೆ ಇನ್ನೂ ಐದಾರು ಜನ ಹುಡುಗಿಯರು—ಲಕ್ಷಣವಾಗಿರುವವರು ಬೇಕಾಗುತ್ತಾರೆ. ನಿನಗೆ ತಿಳಿದವರು ಯಾರಾದರೂ ಇದ್ದರೆ ವಿಚಾರಮಾಡಿರು. ನಮ್ಮ ಹೆದ್ದುಬಸ್ತಿನಲ್ಲಿರುವ ಜನಗಳನ್ನು ಕಂಪೆನಿಗೆ ತೆಗೆದುಕೊಳ್ಳುವುದು ಕ್ಷೇಮ. "

" ಹುಡುಗಿಯರಿಗೇನು ಹೇಳು – ನೂರು ಜನಗಳನ್ನು ನಾನು ಕರೆದು ಕೊಂಡು ಬರುತ್ತೇನೆ. ತಿರುಮಕೂಡಲಿನವರ ಮನೆಯಲ್ಲಿಯೇ ಎಂಟು ಹತ್ತು ಜನರಿದ್ದಾರೆ. ನೀನು ಯಾವಾಗ ಕರೆಸು ಎಂದರೆ ಕರೆಸುತ್ತೇನೆ."

ಚಿನ್ನಪ್ಪ ಸುತ್ತಮುತ್ತ ಕಣ್ಣು ಹಾಯಿಸಿದುದನ್ನು ಕಂಡು ಭಾಗ್ಯಮ್ಮ

" ಕಾಫಿ ಬೇಕಾಗಿತ್ತೇನು ? "

" ಕಣಿ ಕೇಳು. ಮಾತಾಡಿ ಆಡಿ ನನ್ನ ಬಾಯಿ ಒಣಗಿಹೋಯಿತು. "

ಭಾಗ್ಯಮ್ಮ ಕುಳಿತಲ್ಲಿಂದಲೇ ಅಡಿಗೆಯ ರೇವಣ್ಣನನ್ನು ಕೂಗಿ ಕಾಫಿ ತೆಗೆದುಕೊಂಡು ಬಾರೆಂದಳು. ಚಿನ್ನಪ್ಪ ಬಹಳ ಸೂಕ್ಷ್ಮವಾಗಿ

ಚಿತ್ರದ ಕೆಲಸ ಮುಗಿಯಬೇಕಾದರೆ ಎಂಟು ಹತ್ತು ತಿಂಗಳಾಗುತ್ತವೆ. ನಾವೇಲ್ಲಾ ಮದರಾಸಿಗೊ, ಕೊಯಿಮತ್ತೂರಿಗೋ, ಬೊಂಬಾಯಿಗೋ ಹೋಗ ಬೇಕಾಗುತ್ತದೆ. "

" ಮೈಸೂರಿನಲ್ಲಿ ಫಿಲ್ಮ್ ಮಾಡ್ತಾ ಇದ್ದಾರೆ. "

" ನಾವು ಅಲ್ಲಿಯೂ ಮಾಡಬಹುದು. ನಮ್ಮೂರಿನಲ್ಲಿ ನಾವು ಪಿಕ್ಚರ್ ಮಾಡಿದರೆ ಗೌರವ ಇರುವುದಿಲ್ಲ ಭಾಗ್ಯಮ್ಮ. ಮ ದ ರಾ ಸಿ ನ ಲ್ಲೋ ಬೊಂಬಾಯಿಯಲ್ಲೊ ಚಿತ್ರ ಮಾಡಿದೆವೆಂದರೆ ಜನ ಮರುಳಾಗುತ್ತಾರೆ. ಪರ ವೂರಿನಲ್ಲಿರುವ ನನ್ನ ಯೋಗಕ್ಷೇಮ ನೋಡಿಕೊಳ್ಳಬೇಕಾದ್ದು ನಿನ್ನ ಭಾರ."

ಇಂಗಿತಜ್ಞಳಾದ ಭಾಗ್ಯಮ್ಮ ಚಿನ್ನಪ್ಪನ ಮನಸ್ಸಿನಲ್ಲಿದ್ದುದನ್ನು ಅರ್ಥ ಮಾಡಿಕೊಳ್ಳಲು ಬಹಳ ಕಾಲ ಹಿಡಿಯಲಿಲ್ಲ.

" ಸುತ್ತೀ ಸುತ್ತೀ ಏಕೆ ಮಾತಾಡುತ್ತೀ. ನಿನಗೆ ಜತೆ ಬೇಕು ಅನ್ನು."

ಚಿನ್ನಪ್ಪ ದೇಶಾವಾರದ ನಗೆ ಬೀರಿದ.

" ತಿರುಮಕೂಡಲಿನವರ ಮನೆಯಲ್ಲಿ ನಮ್ಮ ಪೈಕಿಯದೇ ಒಂದು ಹುಡುಗಿ ಇದೆ. ಸಣ್ಣ ವಯಸ್ಸು – ಹದಿನೇಳು ಹದಿನೆಂಟಿರಬಹುದು. ಪಾರ್ಟಿಗೂ ಲಾಯಖ್ಖಾಗಿದೆ. ಅದರ ಪರಿಚಯ ನಿನಗೆ ಮಾಡಿಕೊಟ್ಟರಾಯಿತು ತಾನೆ ? ಆ ವಿಷಯದಲ್ಲಿ ನೀನು ನಿಶ್ಚಿಂತನಾಗಿರು. "

" ಅವಳ ಹೆಸರು ? "

" ಪಾರ್ವತಿ."

ರೇವಣ್ಣ ಕಾಫಿ ತಂದು ಮುಂದಿಟ್ಟ. ಅಂದು ರೇವಣ್ಣನ ಕಾಫಿ ದೇವತೆ ಗಳ ಅಮೃತಕ್ಕಿಂತಲೂ ಮಧುರವಾಗಿತ್ತು ಚಿನ್ನಪ್ಪನಿಗೆ.

ಚಿನ್ನಪ್ಪ ಭಾಗ್ಯಮ್ಮನ ಮನೆಯಲ್ಲಿ ಹೆಚ್ಚುಕಾಲ ನಿಲ್ಲುವಂತಿರಲಿಲ್ಲ. ಗಂಟೆ ಎಂಟರ ಸಮೀಪಗತವಾಗಿತ್ತು. ಸಾಹುಕಾರರು ಬರುವ ಸಮಯ ವಾಯಿತೆಂದು ಭಾಗ್ಯಮ್ಮನೂ ಸೂಕ್ಷ್ಮವಾಗಿ ಎಚ್ಚರಿಕೆ ಕೊಟ್ಟಳು.

ಡೈರೆಕ್ಟರು ಬಂದಕೂಡಲೆ ಅವರೊಂದಿಗೆ ಮಾತನಾಡಿ ಎಲ್ಲ ವಿಷಯ ಗಳನ್ನೂ ಬಂದು ತಿಳಿಸುವುದಾಗಿ ಚಿನ್ನಪ್ಪ ಭಾಗ್ಯಮ್ಮನಿಗೆ ಹೇಳಿ ಅಲ್ಲಿಂದ ಹೊರಟ.

೬

ಸೋಮವಾರ ಸಂಜೆ ಶಿವಾನಂದ, ಚಿನ್ನಪ್ಪ ಏರಿಯೋಡ್ರೋಮಿಗೆ ಹೋಗಿ ಭೂಪೆನ್ ಬಾಬುಗಳನ್ನು ಸ್ವಾಗತಿಸಿದರು. ಮಾಡರ್ನ್ ಹಿಂದೂ ಹೋಟೆಲಿನಲ್ಲಿ ಅವರು ಇಳಿದುಕೊಳ್ಳಲು ವ್ಯವಸ್ಥೆ ಮಾಡಲಾಗಿತ್ತು. ಚಿನ್ನಪ್ಪ ನಿಗೂ ಬಾಬುಗಳಿಗೂ ಶಿವಾನಂದ ಪರಿಚಯ ಮಾಡಿಕೊಟ್ಟ.

" ನನ್ನ ವೈರ್ ತಲುಪಿದ ಕೂಡಲೆ ನೀವು ಹೊರಟುಬರುವ ವಿಷಯದಲ್ಲಿ ನನಗೆ ಅನುಮಾನವಿತ್ತು ಬಾಬು. ಸದ್ಯ ನೀವು ಬಂದಿರಲ್ಲ. "

" ನಮ್ಮ ಕರಾರನ್ನು ಮರೆಯಲು ಸಾಧ್ಯವೇ? ಪೂರ್ವಸಿದ್ಧತೆ ಎಲ್ಲಿಯ ವರೆಗೆ ಬಂದಿದೆ."

" ಎಲ್ಲಾ ಈಗ ಆರಂಭಿಸಬೇಕು. ನೀವು ಬರುವವರೆಗೆ ಏನೂ ಮಾಡ ಬಾರದೆಂದು ನಾವು ನಿಶ್ಚಯಿಸಿಕೊಂಡಿದ್ದೆವು."

" ಮಾಲಿಕರನ್ನು ಯಾವಾಗ ನೋಡುವುದು."

" ನಾಳೆ ಮಂಗಳವಾರ, ಬೇಡ. ನಾಡಿದ್ದು ಬೆಳಿಗ್ಗೆ ನೋಡುವಿರಂತೆ. ನಾಳೆ ನಾವು ಮೂವರೂ ಕುಳಿತುಕೊಂಡು ಎಲ್ಲಾ ವಿಷಯಗಳನ್ನೂ ಚರ್ಚೆ ಮಾಡಿ ಒಂದು ನಿರ್ಧಾರಕ್ಕೆ ಬರೋಣ."

ಎಂದು ಚಿನ್ನಪ್ಪ ಹೇಳಿದ.

ಭೂಪೆನ್ ಬಾಬು ಬಂದುಬಿಟ್ಟದ್ದು ಚಿನ್ನಪ್ಪನಿಗೂ ಶಿವಾನಂದನಿಗೂ ಹತ್ತು ಭುಜ ಬಂದಂತಾಗಿತ್ತು. ಬಾಬು ಊಟ ಮುಗಿಸುವವರೆಗೆ ಅವರಿಬ್ಬರೂ ಹೋಟೆಲಿನಲ್ಲಿಯೇ ಇದ್ದು ಬೆಳಿಗ್ಗೆ ಒಂಭತ್ತು ಗಂಟೆಗೆ ಹೋಟೆಲಿನಲ್ಲಿ ಮತ್ತೆ ಸೇರುವುದೆಂದು ಗೊತ್ತುಮಾಡಿಕೊಂಡು ಮನೆಯ ಕಡೆ ಹೊರಟರು.

ಬೆಳಿಗ್ಗೆ ಸ್ನಾನ, ಉಪಾಹಾರ ತೀರಿಸಿ ಭೂಪೆನ್ ಬಾಬು ಶಿವಾನಂದ, ಚಿನ್ನಪ್ಪನ ದಾರಿನೋಡುತ್ತ ಕುಳಿತಿದ್ದರು. ಅವರು ಬಂದ ಸ್ವಲ್ಪ ಹೊತ್ತಿನಲ್ಲಿ ಮಾತುಕತೆ ಆರಂಭವಾಯಿತು. ಬಾಬು ಕೇಳಿದರು

" ಚಿತ್ರದ ಅಂದಾಜೆಷ್ಟು ? "

" ಒಂದೂವರೆ ಲಕ್ಷ. "

" ಅದು ಯಾವ ಮೂಲೆಗೆ ಸಾಕು. "

" ನಮ್ಮ ಸಾಹುಕಾರರು ಬಹಳ ಜಿನುಗು ಆಸಾಮಿ. ಆತ ಮೊದಲಿಗೇ ಗಾಬರಿಯಾಗಬಾರದೆಂದು ನಾವು ಒಂದೂವರೆ ಲಕ್ಷ ಎಂದು ಹೇಳಿದ್ದೇವೆ. ಸ್ವಲ್ಪ ಹೆಚ್ಚೂಕಡಿಮೆಯಾದರೆ ಸುಧಾರಿಸಿಕೊಳ್ಳುವ ಚೈತನ್ಯ ಸಾಹುಕಾರರಿಗಿದೆ."

"ಕಥೆ ಯಾವದೆಂದು ನಿಶ್ಚಯಿಸಿದರೆ ಚಿತ್ರದ ಅಂದಾಜು ಮಾಡುವುದಕ್ಕೆ ಸಾಧ್ಯವಾಗುತ್ತದೆ."

" ಸಾಮಾಜಿಕ ಚಿತ್ರ ಮಾಡುವ ಎಂದು ಶಿವಾನಂದರು ಹೇಳುತ್ತಿದ್ದಾರೆ. ನಮ್ಮ ದೇಶದಲ್ಲಿ ಸಾಮಾಜಿಕ ನಾಟಕಗಳು ನಡೆಯುವುದು ಕಷ್ಟ. ಪೌರಾಣಿಕ ಚಿತ್ರ ಮಾಡಿದರೆ ಬಂಡವಾಳಕ್ಕೆ ಮೋಸವಿಲ್ಲ."

" ನಿಮ್ಮ ಸಾಹುಕಾರರು ಏನು ಅಭಿಪ್ರಾಯ ಪಡುತ್ತಾರೆಯೋ ? "

" ಸಾಮಾಜಿಕ ಚಿತ್ರ ಮಾಡುವುದಕ್ಕೆ ಅವರು ಒಪ್ಪಲಾರರು. "

" ವಿಷಯ ಯಾವದು ಮೊದಲು ನಿರ್ಧರಿಸಬೇಕು – ಒಳ್ಳೆಯ ಕಥಾಲೇಖಕರನ್ನು ನಾವು ಆರಿಸಿಕೊಳ್ಳಬೇಕು. ಯಾರನ್ನಾದರೂ ನೀವು ಯೋಚಿಸಿರುವಿರಾ ? "

ಚಿನ್ನಪ್ಪ ಶಿವಾನಂದನ ಮುಖ ನೋಡಿ,

" ನಮ್ಮ ನಾರಾಯಣ ಶಾಸ್ತ್ರಿಗಳಿಗೆ ಹೇಳಿದರೆ........"

" ಅವರದೆಲ್ಲಾ ಹಳೆಯ ತರಹೆ ಚಿನ್ನಪ್ಪನವರೇ. ಈ ಕಾಲಕ್ಕೆ ಹೊಂದುವ ಹಾಗೆ ಬರೆಯುವವರು ಬೇಕು. ಹಳೆಯ ವಸ್ತುವನ್ನೇ ತೆಗೆದು ಕೊಂಡರೂ ಹೊಸರೀತಿಯಲ್ಲಿ ಹೇಳದಿದ್ದರೆ ಇಂದಿನ ಜನರಿಗೆ ರುಚಿಸುವುದಿಲ್ಲ."

" ನೀವು ಹೇಳುವಂತೆ ಬರೆಯಬಲ್ಲವರು ಯಾರಿದ್ದಾರೆ ? "

" ಸುದರ್ಶನರ ಹೆಸರು ಕೇಳಿದ್ದೀರೋ ? "

" ಕೇಳಿದ್ದೇನೆ. "

" ಅವರು ಮನಸ್ಸು ಮಾಡಿದರೆ ಆಗಬಹುದು. ಅವರು ಒಪ್ಪುವುದು ಸ್ವಲ್ಪ ಕಷ್ಟ. ಸಿನೀಮಾದವರಿಗೆ ಬರೆದುಕೊಡುವುದಕ್ಕೆ ಅವರು ಉತ್ಸಾಹಿಗಳಾಗಿಲ್ಲ. "

" ಅವರ ಪರಿಚಯ ನಿಮಗಿದೆಯೇನು ? "

" ಇದೆ. ನಾನು ಕಾಲೇಜ್ ಯೂನಿಯನ್ ಸೆಕ್ರೆಟರಿ, ಪ್ರೆಸಿಡೆಂಟ್ ಆಗಿದ್ದಾಗ ಅವರನ್ನು ಬರಮಾಡಿಕೊಂಡಿದ್ದೆ. "

" ಸಾಮಾಜಿಕ ಚಿತ್ರ ನೀವು ಮಾಡುವುದಾದರೆ ಕಥೆ ನಾನು ಕೊಡುತ್ತೇನೆ. ನಿಮ್ಮ ಲೇಖಕರು ಸಂಭಾಷಣೆ, ಹಾಡು ಬರೆದುಕೊಟ್ಟರಾಯಿತು. "

ಎಂದು ಭೂಪೆನ್ ಬಾಬು ತಿಳಿಸಿದರು.

" ಸ್ಟುಡಿಯೋ ವಿಷಯ ಮೊದಲು ನಿರ್ಧಾರವಾಗಬೇಕು. ಅದೇ ದೊಡ್ಡದು."

ಎಂದು ಶಿವಾನಂದ ಸೂಚಿಸಿದ.

" ಮೈಸೂರಿನಲ್ಲಿ ಒಂದು ಸ್ಟುಡಿಯೋ ಇದೆ ಎಂದು ಕೇಳಿದ್ದೇನೆ. ಅದು ಹೇಗೆ ಕೆಲಸಮಾಡುತ್ತಿದೆ. "

" ತಕ್ಕಮಟ್ಟಿಗಿದೆ. ಆದರೆ ಮೈಸೂರಿನಲ್ಲಿ ಚಿತ್ರ ತೆಗೆಯಲು ನನಗೆ ಸ್ವಲ್ಪವೂ ಇಷ್ಟವಿಲ್ಲ. ಮದರಾಸಿನ ಯಾವದಾದರೂ ಸ್ಟುಡಿಯೋ ಗೊತ್ತು ಮಾಡುವುದು ಒಳ್ಳೆಯದು."

" ಮೈಸೂರು ಸ್ಟುಡಿಯೋ ನಾನೊಮ್ಮೆ ನೋಡಿಬರುತ್ತೇನೆ. ಅನಂತರ ನಿಶ್ಚಯಿಸೋಣ. ಮದರಾಸಿನಲ್ಲಿ ನನ್ನ ಗುರುತಿನ ಜೊಗೆನ್ ಬಾಬು ಒಂದು ಸ್ಟುಡಿಯೋದಲ್ಲಿ ಕ್ಯಾಮರಾಮನ್ ಆಗಿದ್ದಾರೆ. ಅವರ ಸಹಾಯ ತೆಗೆದುಕೊಂಡು ನಾವು ಮದರಾಸಿನಲ್ಲಿ ಸ್ಟುಡಿಯೋ ಗೊತ್ತುಮಾಡಿಕೊಳ್ಳಬಹುದು. "

ಭೂಪೆನ್ ಬಾಬುಗಳ ಸಲಹೆ ಯುಕ್ತವಾದುದೆಂದು ಚಿನ್ನಪ್ಪ, ಶಿವಾನಂದ ಒಪ್ಪಿಕೊಂಡರು. ಚಿನ್ನಪ್ಪ ಯೋಚಿಸುತ್ತಾ

" ಒಂದು ಕೆಲಸ ಮಾಡಿ ಶಿವಾನಂದರೇ. ನೀವೂ ಭೂಪೆನ್ ಬಾಬುಗಳೂ ಇವತ್ತು ರಾತ್ರಿ ಮದರಾಸಿಗೆ ಪ್ರಯಾಣಮಾಡಿ ನಮಗೆ ಅನುಕೂಲವಾಗುವ ಸ್ಟುಡಿಯೋ ಯಾವದಿದೆ ನೋಡಿಕೊಂಡು ಬನ್ನಿ. ಬುಧವಾರ, ಗುರುವಾರ ಮದರಾಸಿನ ಕೆಲಸ ಮುಗಿಸಿಕೊಂಡು ಶುಕ್ರವಾರ ಮಧ್ಯಾಹ್ನ ನೀವು ಮೈಸೂರು ತಲುಪಬಹುದು. ಮೈಸೂರು ಸ್ಟುಡಿಯೋ ಅಂದೇ ನೋಡಿಕೊಂಡು ರಾತ್ರಿ ರೈಲಿನಲ್ಲಿ ಹೊರಟು ಶನಿವಾರ ಬೆಳಿಗ್ಗೆ ಇಲ್ಲಿಗೆ ಬರಬಹುದು. ಶನಿವಾರ ದಿನವೂ ಚೆನ್ನಾಗಿದೆ. ಅಂದೇ ಸಾಹುಕಾರರ ಜತೆ ಮಾತನಾಡಿ ಒಂದು ಇತ್ಯರ್ಥಕ್ಕೆ ಬಂದುಬಿಡೋಣ."

ಚಿನ್ನಪ್ಪನ ಸಲಹೆಯನ್ನು ಭೂಪೆನ್ ಸಂತೋಷವಾಗಿ ಒಪ್ಪಿಕೊಂಡರು.

ಶಿವಾನಂದನ ಜತೆಯಲ್ಲಿ ಭೂಪೆನ್ ಬಾಬು ಮದರಾಸು ತಲುಪಿದ ಕೂಡಲೆ 'ವುಡ್‌ಲ್ಯಾಂಡ್ಸ್' ಹೋಟೆಲಿನಲ್ಲಿ ತಂಗಿ ಜೊಗೆನ್ ಬಾಬುಗಳ ಪತ್ತೆ ಹಚ್ಚಿದರು. ಜೊಗೆನ್ ತ್ಯಾಗರಾಜನಗರದಲ್ಲಿ ಮನೆ ಮಾಡಿಕೊಂಡಿರುವುದನ್ನು ತಿಳಿದು ಅಲ್ಲಿಗೆ ಟಾಕ್ಸಿ ಮಾಡಿಕೊಂಡು ಹೊರಟರು.

ಫಿಲ್ಮ್ ವ್ಯವಸಾಯದಲ್ಲಿದ್ದ ಬಹುಮಂದಿಗೆ ತ್ಯಾಗರಾಜನಗರ ಆವಾಸ ಸ್ಥಾನವಾಗಿತ್ತು. ಜೊಗೆನ್ ಬಾಬುಗಳ ಮನೆ ಪತ್ತೆ ಮಾಡುವುದು ಕಷ್ಟವಾಗಲಿಲ್ಲ.

ಜೊಗೆನ್ ಬಾಬುಗಳ ಆಳು ಅತಿಥಿಗಳನ್ನು ಮರ್ಯಾದೆಯಾಗಿ ಸ್ವಾಗತಿಸಿ,

"ರಾತ್ರಿ ಷೂಟಿಂಗ್ ಮುಗಿಸಿಕೊಂಡು ಬಾಬುಗಳು ಇದೇ ಬಂದು ಮಲಗಿದ್ದಾರೆ. ಎಬ್ಬಿಸುವುದಕ್ಕಾಗುವುದಿಲ್ಲ."

ಎಂದು ಹೇಳಿದ. ಭೂಪೆನ್ ಆಳಿನ ಸಂಗಡ ಬಂಗಾಳಿಯಲ್ಲಿ ಮಾತನಾಡಿ ತಮ್ಮ ಪರಿಚಯಮಾಡಿಕೊಟ್ಟರು. ಆಳು ಧೈರ್ಯಮಾಡಿಕೊಂಡು ಹೋಗಿ ತನ್ನ ಧಣಿಯನ್ನೆಬ್ಬಿಸಿದ.

ಜೊಗೆನ್ ಮುಖ ತೊಳೆದುಕೊಂಡು ಧಾವಿಸಿ ಬಂದರು. ಭೂಪೆನ್ ಬಾಬುಗಳನ್ನು ನೋಡಿ ಅವರಿಗೆ ವರ್ಣನಾತೀತ ಸಂತೋಷವಾಗಿತ್ತು. ಬಂದವರೇ ಭೂಪೆನ್ ಬಾಬುಗಳನ್ನಪ್ಪಿದರು. ಕುಶಲ ಪ್ರಶ್ನೆಗಳಾದವು. ಭೂಪೆನ್ ಶಿವಾನಂದನ ಪರಿಚಯಮಾಡಿಕೊಟ್ಟರು.

ನೀನು ಏನೇ ಆದರೂ ಕಲ್ಕತ್ತೆ ಬಿಡುವುದಿಲ್ಲವೆಂದು ನಂಬಿದ್ದೆ ಭೂಪೆನ್. ಮಧು ಭಾಬು ನಿನ್ನನ್ನು ಹೇಗೆಬಿಟ್ಟರು?"

ಶಿವಾನಂದ ಕಲ್ಕತ್ತೆಗೆ ಬಂದದ್ದು, ಅವನಿಗೂ ತನಗೂ ಆದ ಕರಾರನ್ನು ವಿವರಿಸಿ ಭೂಪೆನ್

"ನಿನ್ನ ಅದೃಷ್ಟ ನಕ್ಷತ್ರ ದಕ್ಷಿಣ ಹಿಂದೂಸ್ಥಾನದಲ್ಲಿರುವಂತೆ ನನ್ನ ಅದೃಷ್ಟವೂ ಇಲ್ಲಿಯೇ ಇರುವುದೆಂದು ನಾನು ಕನಸು ಮನಸಿನಲ್ಲಿಯೂ ಎಣಿಸಿರಲಿಲ್ಲ."

"ನನ್ನ ನಕ್ಷತ್ರ ಇಲ್ಲಿತ್ತು—ಆದರೆ ಅದು ಅದೃಷ್ಟ ನಕ್ಷತ್ರವಾಗಿರಲಿಲ್ಲ ಭೂಪೆನ್. ನಾನು ಕಲ್ಕತ್ತೆ ಬಿಟ್ಟುಬಂದು ಅವಿವೇಕಿಯಾದೆ."

"ಇದೇನು ಜೊಗೆನ್ ನೀನೇ ಹೀಗೆ ಹೇಳುವೆ. ನೀನು ಕೈತುಂಬ ಸಂಪಾದನೆ ಮಾಡುತ್ತಿರುವೆಯೆಂದು ನಾವೆಲ್ಲಾ ಸಂತೋಷಪಡುತ್ತಿದ್ದೆವು."

"ಸಂಪಾದನೆ ಮಾಡುತ್ತಿದ್ದೇನೆ. ತಡೀ. ಸ್ವಲ್ಪ ಚಹಾ ಆಗಲಿ–ಅನಂತರ ಮಾತನಾಡೋಣ."

ಅತಿಥಿಗಳನ್ನು ಕಂಡ ಕೂಡಲೆ ಚಹಾ ಸಿದ್ಧತೆ ಮಾಡಿದ್ದ ಜೊಗೆನ್‌ರವರ ಆಳು, ಅವರು ಕೂಗಿದೊಡನೆಯೇ ಚಹಾ, ಉಪಾಹಾರ ತಂದಿಟ್ಟ.

ಉಪಾಹಾರದ ಜತೆಯಲ್ಲಿದ್ದ 'ರಸಗುಲ್ಲಾ' ಕಂಡು ಭೂಪೆನ್ ಆಶ್ಚರ್ಯದಿಂದ

"ಮದರಾಸಿನಲ್ಲಿಯೂ ರಸಗುಲ್ಲಾ ಸಿಕ್ಕುತ್ತದೆಯೇ ಜೊಗೆನ್ ಬಾಬು" ಎಂದು ಕೇಳಿದ.

"ಇಲ್ಲ. ಪ್ರತಿವಾರ ಒಂದು ಡಬ್ಬ ರಸಗುಲ್ಲಾ ಕಲ್ಕತ್ತೆಯಿಂದ ಬರುತ್ತದೆ."

ಉಪಹಾರ ಮುಗಿಯುತ್ತಿರುವಂತೆ ಜೋಗೆನ್ ಹೇಳಿದರು.

"ಕಲ್ಕತ್ತೆಗೆ ಬಂದು 'ಸತೀ ಸುಲೋಚನಾ" ಚಿತ್ರ ತಮಿಳಿನಲ್ಲಿ ಮಾಡಿದರು ನೋಡು ಅವರೇ ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದರು. ತಿಂಗಳಿಗೆ ಒಂದೂವರೆ ಸಾವಿರ ರೂಪಾಯಿ ಸಂಬಳ–ಮೂರು ವರ್ಷ ಕಾಂಟ್ರ್ಯಾಕ್ಟ. ಮಾಲಿಕ ಒಳ್ಳೆಯ ಮನುಷ್ಯ–ಧಾರಾಳಿ ಆದರೆ ಶುದ್ಧ ಶುಂಭ. ತನ್ನ ಶುಂಭತನ ಮುಚ್ಚಿಕೊಳ್ಳುವುದಕ್ಕೆ ಬೃಹಸ್ಪತಿಯಂತೆ ನಟಿಸುತ್ತಾನೆ. ಸೆಟ್ಟಿನ ಮೇಲೆ ಬಂದು ಡೈರೆಕ್ಟರಿಗೆ ನಟನಟಿಯರಿಗೆ, ರಿಕಾರ್ಡಿಂಗೆ ಇಂಜನಿಯರಿಗೆ, ನನಗೆ ಪಾಠ ಹೇಳಿಕೊಡುತ್ತಾನೆ."

"ಅದರಿಂದ ನಿನಗೇನು ನಷ್ಟ. ಚಿತ್ರ ಕೆಟ್ಟುಹೋದರೆ ಅವನಿಗೆ ತಾನೆ ನಷ್ಟ."

"ಅದೇ ನನ್ನ ಧರ್ಮಸಂಕಟ. ಚಿತ್ರ ಹೇಗೆ ಇರಲಿ ಅವನಂತೂ ದುಡ್ಡು ಮಾಡಿಕೊಂಡು ಬಿಡುತ್ತಾನೆ. ಆದರೆ ನನ್ನ ಕೆಲಸ ನೋಡಿದವರು ತೆಗಳುತ್ತಾರೆ. ಇದೇ ರೀತಿ ನಾನು ಇನ್ನು ೨-೩ ಚಿತ್ರಗಳಲ್ಲಿ ಕೆಲಸ ಮಾಡಿದರೆ ಮುಂದೆ ಯಾವ ಸ್ಟೂಡಿಯೋದವರೂ ನನ್ನ ಟ್ರ್ಯಾಲಿ–ಬಾಯ್ (Trolley Boy) ಆಗಿಯೂ ಸೇರಿಸಿಕೊಳ್ಳುವುದಿಲ್ಲ."

"ಈ ಮಾಲಿಕನನ್ನು ಬಿಟ್ಟು ಬೇರೆ ಕಡೆ ಸೇರಿಕೊಂಡರಾಗುವುದಿಲ್ಲವೇ?"

"ಪ್ರಯತ್ನ ಮಾಡಿದ್ದೇನೆ. ಆದರೆ ಈ ಮೂರು ವರ್ಷದ ಕಾಂಟ್ರ್ಯಾಕ್ಟ ನನ್ನ ಗಂಟಲು ತಾಣವಾಗಿದೆ. ನನ್ನದಿರಲಿ. ನೀನು ಯಾವಾಗ ಬಂದೆ–ಏನು ಬಂದಿದ್ದೆ–ಎಲ್ಲಿದ್ದೀ–ಹೇಳು."

"ಇದೇ ಬೆಳಿಗ್ಗೆ ಬಂದೆ. ಈ ನನ್ನ ಸ್ನೇಹಿತರು ಒಂದು ಚಿತ್ರ ತೆಗೆಯುವುದರ ಸಲುವಾಗಿ ಕರೆಸಿದರು. ನಾವಿಬ್ಬರೂ ಬಂದವರೇ 'ವುಡ್ ಲ್ಯಾಂಡ್ಸ್'ಗೆ ಹೋಗಿ ಇಳಿದು, ಮುಖ ತೊಳೆದವರೇ ನಿನ್ನ ಹುಡುಕಿಕೊಂಡು ಬಂದೆವು.

"ಇಲ್ಲಿಗೇ ಬರಬೇಕಾಗಿತ್ತು, ಮನೆಯಲ್ಲಾ ಖಾಲಿಯೇ ಇದೆ."

"ಇರಲಿ. ನಾನು ಹೇಗೂ ಮದರಾಸಿಗೇ ಬರುತ್ತೇನಲ್ಲಾ. ಮೊದಲು ನಾನು ಬಂದಿರುವ ಕೆಲಸ ಮಾಡಿಕೊಡು."

"ಏನಾಗಬೇಕು ಹೇಳು."

"ಕನ್ನಡದಲ್ಲಿ ಚಿತ್ರ ತೆಗೆಯಬೇಕಾಗಿದೆ–ಇಲ್ಲಿ ಯಾವ ಸ್ಟೂಡಿಯೋ ಗೊತ್ತುಮಾಡಿಕೊಳ್ಳಬಹುದು. ನಿನ್ನ ಸ್ಟೂಡಿಯೋದಲ್ಲಿಯೇ ಮಾಡಿಸಿ ಕೊಡುತ್ತೀಯಾ?"

"ನನ್ನ ಸ್ಟೂಡಿಯೋ ವಿಷಯ ಆಗಲೇ ಹೇಳಿದೆನಲ್ಲ. ನೀನು ನಮ್ಮ ಸ್ಟೂಡಿಯೋಕ್ಕೆ ಬಂದರೂ ನಾನು ನಿನ್ನ ಕೆಲಸ ಮಾಡಿಕೊಡುವ ಹಾಗಿಲ್ಲ. ನನ್ನ ಸೇವೆ ಸ್ಟೂಡಿಯೋ ಚಿತ್ರಗಳಿಗೆ ಮೀಸಲಾಗಿರಬೇಕೆಂದು ಮಾಲೀಕರ ಅಪ್ಪಣೆ."

"ಹಾಗಾದರೆ ನಮ್ಮ ಗತಿ."

"ಕಾರ್ತಿಕೇಯ ಸ್ಟೂಡಿಯೋ ಚೆನ್ನಾಗಿದೆ. ಅಲ್ಲಿಯೂ ಒಳ್ಳೆಯ ತಂತ್ರವಿಶಾರದರು (Technicians) ಇದ್ದಾರೆ. ಮಾಲಿಕರು, ಮ್ಯಾನೇಜರು ಇಬ್ಬರೂ ನನಗೆ ಬೇಕಾದವರು. ಬಾ, ಕರೆದುಕೊಂಡು ಹೋಗಿ ಸ್ಟೂಡಿಯೋ ತೋರಿಸುತ್ತೇನೆ. ಮುಂದಿನ ಮಾತು ಆಮೇಲೆ ಆಡೋಣ."

"ಹಾಗೇ ಆಗಬಹುದು."

ಜೊಗೆನ್ ಎದ್ದು ಕೂಡಲೆ ಕಾರ್ತಿಕೇಯ ಸ್ಟೂಡಿಯೋ ಮ್ಯಾನೇಜರಿಗೆ ಫೋನ್ ಮಾಡಿದರು. ನಾಲ್ಕೈದು ನಿಮಿಷ ಬಿಟ್ಟುಬಂದು ಜೊಗೆನ್

"ರಾಮಾನುಜಂ ನಮಗೆ ಕಾದಿರುತ್ತಾರಂತೆ. ಹತ್ತು ನಿಮಿಷ ಅವಕಾಶ ಕೊಡು ಭೂಪೆನ್–ಸ್ನಾನ ಮಾಡಿ ಬಂದುಬಿಡುತ್ತೇನೆ. ರಾತ್ರಿ ಷೂಟಿಂಗ್ ಇತ್ತು–ನಿದ್ದೆ ಇಲ್ಲ"

ಎಂದು ಹೇಳಿ ಒಳಗೆ ಹೋದರು.

ಶಿವಾನಂದನ ಮುಖ ಪ್ರಫುಲ್ಲಿತವಾಗಿತ್ತು.

"ಬಾಬು, ನಾವು ಬಂದ ಹೊತ್ತು ಒಳ್ಳೆಯದು. ಕೆಲಸ ಸುಗಮವಾಗಿ ಆಗುತ್ತಿದೆ. ನಿಮ್ಮ ಸ್ನೇಹಿತರ ಸ್ಟೂಡಿಯೋ ಆಗಿದ್ದರೆ ಬಹಳ ಚೆನ್ನಾಗಿರುತ್ತಿತ್ತು."

" ಹೌದು. ಆದರೇನು ಮಾಡುವುದು? ಜೊಗೆನ್ ಪರಿಸ್ಥಿತಿ ನೋಡಿದಿರಲ್ಲಾ? ಅವನು ಶಿಫಾರಸ್ಸು ಮಾಡಿದ ಮೇಲೆ ಕಾರ್ತಿಕೇಯ ಸ್ಟೂಡಿಯೋ ಚೆನ್ನಾಗಿರಲೇಬೇಕು. ಜೊಗೆನ್ ಅಂಥಿಂಥವುಗಳನ್ನು ಒಪ್ಪಿಕೊಳ್ಳುವ ಮನುಷ್ಯನಲ್ಲ, ನೀತಿನ್ ಬೋಸರ ಶಿಷ್ಯ."

" ಜೊಗೆನ್‌ರವರ ಸಹಕಾರ ಗಟ್ಟಿಮಾಡಿಕೊಳ್ಳಿ."

" ಅದೇನೂ ಭಯವಿಲ್ಲ. ನನಗಾಗಿ ಜೊಗೆನ್ ಬೇಕಾದದ್ದು ಮಾಡುತ್ತಾನೆ."

" ಮೈಸೂರು ಸ್ಟೂಡಿಯೋ ಚೆನ್ನಾಗಿಲ್ಲವೇನು?"

" ಚೆನ್ನಾಗಿಲ್ಲವೆಂದು ಯಾರು ಹೇಳಿದರು?"

" ನಿಮ್ಮ ಮ್ಯಾನೇಜರ್ ಚಿನ್ನಪ್ಪನವರು ಮೈಸೂರಿನ ವಿಷಯದಲ್ಲಿ ಉತ್ಸುಕರಾಗಿಲ್ಲ."

" ನಾನೂ ಉತ್ಸುಕನಾಗಿಲ್ಲ. ಕಾರಣವಿಷ್ಟೇ. ಅಲ್ಲಿ ನಮಗೆ ಗುರುತಿನವರು ಬಹಳ. ನಾನಾ ಬಗೆಯ ದಾಕ್ಷಿಣ್ಯಕ್ಕೆ ಸಿಕ್ಕಿಕೊಳ್ಳಬೇಕಾಗುತ್ತದೆ. ಮೈಸೂರಿನ ತುಂಬ ನಮ್ಮ ಸಾಹುಕಾರರ ಸಂಬಂಧಿಗಳು. ಅವರು ಬೆಳಗಾಗೆದ್ದರೆ ಬಂದು ಒಕ್ಕರಿಸುತ್ತಾರೆ."

" ಬಾಬು—ಇನ್ನೊಂದು ವಿಷಯ. ನಾವು ಬೆಂಗಳೂರಿಗೆ ಹಿಂದಿರುಗಿದ ಕೂಡಲೆ ನೀವು ಪತ್ರಿಕಾಪ್ರತಿನಿಧಿಗಳನ್ನೆಲ್ಲಾ ಆಹ್ವಾನಿಸಿ ಒಂದು ದೊಡ್ಡ ಪಾರ್ಟಿ ಕೊಡಬೇಕು. ನಿಮ್ಮ ಸಾಹುಕಾರರನ್ನು ನಾನು ಕಾಣುವುದಕ್ಕೆ ಮುಂಚೆ ಈ ಪಾರ್ಟಿಯಾಗಿ, ಹತ್ತು ಪತ್ರಿಕೆಗಳಲ್ಲಿ ನನ್ನ ಹೆಸರು ಬಂದರೆ ನಮ್ಮ ಕೆಲಸ ಮತ್ತಷ್ಟು ಸಲೀಸಾಗುತ್ತದೆ. ಖರ್ಚಿಗೆ ಯೋಚನೆಮಾಡಬೇಡಿ—ನಾನು ಜತೆಯಲ್ಲಿ ಸ್ವಲ್ಪ ಹಣ ತಂದಿದ್ದೇನೆ."

" ಈಗ ಸ್ಟುಡಿಯೋ ನೋಡಿಕೊಂಡು ಬಂದ ಕೂಡಲೆ ನಾನು ಚಿನ್ನಪ್ಪನವರಿಗೆ ಕಾಗದ ಬರೆದು ತಿಳಿಸುತ್ತೇನೆ. ಭಾನುವಾರ ಸಮೀಪದಲ್ಲಿಯೇ ಇದೆ. ಅಂದೇ ಪಾರ್ಟಿ ವ್ಯವಸ್ಥೆ ಮಾಡಿದರೆ ಒಳ್ಳೆಯದು."

" ಪ್ರೆಸ್ ಫೋಟೋಗ್ರಾಫರ್ಸ್ ಬರುವಂತೆ ವ್ಯವಸ್ಥೆ ಮಾಡಬೇಕೆಂದು ತಿಳಿಸಿ."

" ಆಗಬಹುದು."

" ಆಹ್ವಾನಗಳನ್ನು ನಿಮ್ಮ ಹೆಸರಿನಲ್ಲಾಗಲಿ. ಚಿನ್ನಪ್ಪನವರ ಹೆಸರಿನಲ್ಲಾಗಲಿ ಕಳುಹಿಸುವುದು ಬೇಡ."

" ಏಕೆ—ಕಳುಹಿಸಿದರೆ ಏನು ತಪ್ಪು?"

" ಈ ಪಾರ್ಟಿಯನ್ನು ಉದ್ದೇಶಪೂರ್ವಕವಾಗಿ ನೀವು ವ್ಯವಸ್ಥೆ ಮಾಡಿದಿರೆಂದು ಸಾಹುಕಾರರಿಗೆ ಗೊತ್ತಾಗುವುದಿಲ್ಲವೇ ? ಫಿಲ್ಮ್ ವ್ಯವಸಾಯದಲ್ಲಿರುವ ನಿಮ್ಮ ಗುರಿತಿನವರು–ಪ್ರಭಾವಶಾಲಿಗಳು ಯಾರಾದರೂ ಇದ್ದರೆ ಅವರ ಹೆಸರಿನಲ್ಲಿ ಆಹ್ವಾನಪತ್ರಗಳು ಹೋಗಲಿ."

" ನಿಜ ಬಾಬು, ಆಹ್ವಾನಗಳನ್ನು ಸೇಠ್ ಮೂಲ್‌ಚಂದ್ ಧನರಾಜ್ ಹೆಸರಿನಲ್ಲಿ ಕಳಿಸಿದರೆ ಯಾರಿಗೂ ಅನುಮಾನಬರುವುದಿಲ್ಲ. ಸೇಠ್‌ಜೀ ಫಿಲ್ಮ್ ವ್ಯವಸಾಯದಲ್ಲಿರುವವರು ; ನೀವು ಅದರಲ್ಲಿಯೇ ಇರುವವರು."

" ಸೇಠ್‌ಜೀ ಯಾರು ? ಅವರು ಒಪ್ಪಬೇಕಲ್ಲ."

"ಅವರೇ ನಮ್ಮ ಸಾಹುಕಾರರ ಥಿಯೇಟರ್ ಬಾಡಿಗೆಗೆ ತೆಗೆದುಕೊಂಡಿರುವವರು. ಚಿನ್ನಪ್ಪನವರು ಹೇಳಿದರೆ ಇಲ್ಲವೆನ್ನಲು ಸೇಠ್‌ಜೀ ಧೈರ್ಯಮಾಡಲಾರರು. ಸೇಠ್‌ಜೀ ಒಪ್ಪಿಕೊಂಡರೆ ಥಿಯೇಟರಿನಲ್ಲಿಯೇ ಉತ್ಸವವನ್ನು ವಿಜೃಂಭಣೆಯಿಂದ ಏರ್ಪಡಿಸಬಹುದು."

" ಥಿಯೇಟರಿನಲ್ಲಿ ಏರ್ಪಡಿಸುವುದಕ್ಕೆ ಷೋಗಳು ಇರುತ್ತವಲ್ಲಾ."

"ಭಾನುವಾರ ಬೆಳಿಗ್ಗೆ ಇಟ್ಟುಕೊಳ್ಳಲಿ."

" ಆಗಬಹುದು. ನೀವು ಎಲ್ಲವನ್ನೂ ವಿವರವಾಗಿ ಚಿನ್ನಪ್ಪನವರಿಗೆ ಬರೆಯಿರಿ."

ಜೊಗೆನ್ ಬಾಬು ಸ್ನಾನಮುಗಿಸಿಕೊಂಡು, ಹೊಸವಸ್ತ್ರ ಧರಿಸಿ ಮತ್ತೆ ಚಹಾ ತೆಗೆಸಿಕೊಂಡು ಬಂದರು. ಚಹಾ ಸೇವನೆಯಾದ ಮೇಲೆ ಭೂಪೆನ್ ಬಾಬುಗಳನ್ನೂ ಶಿವಾನಂದನನ್ನೂ ಕರೆದುಕೊಂಡು ಕಾರ್ತಿಕೇಯ ಸ್ಟೂಡಿಯೋ ಬಳಿಗೆ ಹೊರಟರು.

ಸ್ಟೂಡಿಯೋ ಬಾಗಿಲಿನಲ್ಲಿಯೇ ಯಾರೊಂದಿಗೋ ಮಾತನಾಡುತ್ತಿದ್ದ ರಾಮಾನುಜಂ ಅವರನ್ನು ಸ್ವಾಗತಿಸಿ

" ಬನ್ನಿ, ಚೆಟ್ಟಿಯಾರರ ಮನೆಗೆ ಹೋಗಿ ಅವರನ್ನು ನೋಡಿಕೊಂಡು ಬರೋಣ, ಅವರೂ ನಮ್ಮ ಜತೆ ಸ್ಟೂಡಿಯೋಗೆ ಬರುತ್ತಾರಂತೆ. ನೀವು ಫೋನ್ ಮಾಡಲು ಅವರಿಗೆ ತಿಳಿಸಿದೆ. ನಿಮ್ಮನ್ನೂ ಕರೆದುಕೊಂಡು ಮನೆಗೆ ಬರುವಂತೆ ತಿಳಿಸಿದರು."

ರಾಮಾನುಜಂ ಅತಿಥಿಗಳು ಬಂದಿದ್ದ ಕಾರಿನಲ್ಲಿಯೇ ಕುಳಿತು ಅವರನ್ನು ಚೆಟ್ಟಿಯಾರರ ಮನೆಗೆ ಕರೆದುಕೊಂಡು ಬಂದರು.

ಚೆಟ್ಟಿಯಾರರ ಡ್ರಾಯಿಂಗ್ ರೂಮ್ ನೋಡಿ ಶಿವಾನಂದ ಬೆಕ್ಕಸ ಬೆರಗಾದ. ಭೂಪೆನ್ ಬಾಬು ಅದರಲ್ಲಿದ್ದ ಅಮೃತಶಿಲೆಯ ಮತ್ತು ಕಂಚಿನ

ವಿಗ್ರಹಗಳನ್ನೂ ದಿಟ್ಟಿಸಿ ನೋಡತೊಡಗಿದರು.

ರಾಮಾನುಜಂ ಒಳಗೆ ಹೇಳಿಕಳುಹಿಸಿದ ಸ್ವಲ್ಪ ಹೊತ್ತಿನೊಳಗಾಗಿ ಚೆಟ್ಟಿಯಾರರ ಸವಾರಿ ದಯೆಮಾಡಿಸಿತು. ರಾಮಾನುಜಂ ಎಲ್ಲರ ಪರಿಚಯ ಮಾಡಿಕೊಟ್ಟ ಮೇಲೆ ಚೆಟ್ಟಿಯಾರರು ಜೋಗೆನ್ ಬಾಬು ಕಡೆ ತಿರುಗಿ

" ಬಹಳ ಅಪರೂಪವಾಗಿಬಿಟ್ಟಿರಿ. ನಿಮ್ಮನ್ನು ನೋಡಿ ಎಷ್ಟೋ ದಿವಸಗಳಾದವು."

"ನಿಮಗೆ ಗೊತ್ತಿಲ್ಲದ ವಿಷಯ ಯಾವದಿದೆ ಚೆಟ್ಟಿಯಾರರೇ. ಸ್ಟುಡಿಯೋ ಕೆಲಸದಲ್ಲಿ ಬಿಡುವು ಎಲ್ಲಿ ಸಿಕ್ಕುತ್ತದೆ ಹೇಳಿ."

" ನಮ್ಮ ಕೋರಿಕೆ ನೆರವೇರಿಸಬಾರದೆಂದು ನೀವು ಮನಸ್ಸು ಮಾಡಿರುವ ಹಾಗೆ ಕಾಣುತ್ತದೆ."

" ಛೆ! ಛೆ! ಎಲ್ಲಿಯಾದರೂ ಉಂಟೇ? ಮೂರು ವರ್ಷದ ಕಾಂಟ್ರಾಕ್ಟು ಕಳೆದುಹೋಗಲಿ ಎಂದು ಸುಮ್ಮನಿದ್ದೇನೆ."

" ಆಗಾಗ್ಗೆ ಬಂದು ನಮಗೆ ಸಲಹೆ, ಸೂಚನೆ ಕೊಡುತ್ತಿರಿ."

" ಆಗಲಿ "

ಎಂದು ಜೋಗೆನ್ ಉಪಚಾರಕ್ಕೆ ಹೇಳಿ

" ಈ ಮಿತ್ರರು ನಿಮ್ಮ ಸ್ಟುಡಿಯೋದಲ್ಲಿ ಒಂದು ಕನ್ನಡ ಚಿತ್ರ ತೆಗೆಯಬೇಕೆಂದು ಬಂದಿದ್ದಾರೆ. ಅವರಿಗೆ ನೀವು ಎಲ್ಲಾ ಸಹಾಯಮಾಡಬೇಕು. "

" ಧಾರಾಳವಾಗಿ ಆಗಲಿ. ಮೊದಲು ಸ್ವಲ್ಪ ಉಪಾಹಾರ ತೆಗೆದುಕೊಳ್ಳಿ. ಸ್ಟುಡಿಯೋಗೆ ಹೋಗೋಣ "

ಎಂದೆದ್ದು ಎಲ್ಲರನ್ನೂ ತಮ್ಮ ಭೋಜನಗೃಹಕ್ಕೆ ಕರೆದೊಯ್ದರು.

ಚೆಟ್ಟಿಯಾರರ ಭೋಜನಗೃಹ ಅತ್ಯಾಧುನಿಕ ರೀತಿಯಲ್ಲಿ ಪಾಶ್ಚಾತ್ಯ ರೀತಿಯಲ್ಲಿ ಸಜ್ಜಾಗಿತ್ತು. ದೊಡ್ಡ ಊಟದ ಟೇಬಲ್. ಅದರ ಸುತ್ತಲೂ ಕುರ್ಚಿಗಳು. ಗೃಹದ ಅತ್ತಿತ್ತ ತಿಂಡಿ ತೀರ್ಥಗಳ ಕಪಾಟುಗಳು, ಮೇಜಿನ ಮೇಲೆ ಬಗೆಬಗೆಯ ಹಣ್ಣುಗಳು, ಬಿಸ್ಕತ್ತು, ಬ್ರೆಡ್, ಕೇಕ್ಸ್ ಜತೆಗೆ ಉಪ್ಪಿಟ್ಟು, ಕಾಫಿ ಇಡಲ್ಪಟ್ಟಿದ್ದವು.

ಉಪಹಾರ ಸ್ವೀಕರಿಸಲು ರಾಮಾನುಜಂ ಎಲ್ಲರಿಗೂ ನೆರವಾದರು. ಉಪಹಾರ ನಡೆದಿದ್ದಂತೆ ಚೆಟ್ಟಿಯಾರರ ಆಳು ಒಂದು ದೊಡ್ಡ ಟ್ರೇಯಲ್ಲಿ ಕೆಲವು ಗ್ಲಾಸುಗಳು, ಸೋಡಾಬಾಟಲುಗಳು, ನೀರಿನ ಸೈಫನ್, ವಿಸ್ಕಿ ಬಾಟಲುಗಳನ್ನು ತಂದಿಟ್ಟು, ಎಲ್ಲಾ ಗ್ಲಾಸುಗಳಿಗೂ ವಿಸ್ಕಿ ಬಗ್ಗಿಸಿದ.

ಚೆಟ್ಟಿಯಾರರು ಜೋಗೆನ್ ಬಾಬು ಕಡೆ ತಿರುಗಿ

" ನಿಮ್ಮ ಸ್ನೇಹಿತರಿಗೆ ಅಭ್ಯಂತರವಿಲ್ಲವಷ್ಟೇ. ? "

ಎಂದರು.

ಜೊಗೆನ್ ಬಾಬು ಕೈಯಲ್ಲಿ ಗ್ಲಾಸ್ ಹಿಡಿದು

" ತೆಗೆದುಕೊ ಭೂಪೆನ್ "

ಎಂದು ಹೇಳಿದರು. ಭೂಪೆನ್ ಶಿವಾನಂದನ ಮುಖ ನೋಡಿ

" ಒಲ್ಲೆ—ನನಗೆ ಅಭ್ಯಾಸವಿಲ್ಲ. ನಾನು ಕಾಫಿ ತೆಗೆದುಕೊಳ್ಳುತ್ತೇನೆ "

ಎಂದರು. ಶಿವಾನಂದನೂ ನಿರಾಕರಿಸಿದ.

ಜೊಗೆನ್ ಬಾಬು, ರಾಮಾನುಜಂ ತಮ್ಮ ತಮ್ಮ ಶಕ್ತ್ಯಾನುಸಾರ ಪಾನೀಯ ಸ್ವೀಕರಿಸಿದರು. ಆದರೆ ಅವರಿಬ್ಬರು ಚೆಟ್ಟಿಯಾರರ ಸಮಕ್ಕೆ ನಿಲ್ಲಲಾಗಲಿಲ್ಲ.

ಚೆಟ್ಟಿಯಾರರ ಬಂಗಲೆಯ ಪೋರ್ಟಿಕೋದಲ್ಲಿ ಅವರ ಕಾರು ನಿಂತಿತ್ತು. ಚೆಟ್ಟಿಯಾರರು ಜೊಗೆನ್ ಬಾಬು ಮತ್ತು ಭೂಪೆನ್ ಬಾಬು ಜತೆಯಲ್ಲಿ ತಮ್ಮ ಕಾರಿನಲ್ಲಿ ಕುಳಿತರು. ರಾಮಾನುಜಂ ಭೂಪೆನ್ ತಂದಿದ್ದ ಟ್ಯಾಕ್ಸಿಯಲ್ಲಿ ಶಿವಾನಂದನೊಂದಿಗೆ ಕುಳಿತರು.

ಎಲ್ಲರೂ ಸ್ಟುಡಿಯೋ ಆಫೀಸಿನಲ್ಲಿ ಕುಳಿತ ಮೇಲೆ ಚೆಟ್ಟಿಯಾರರು ರಾಮಾನುಜಂಗೆ

" ನೀವು ಸ್ಟೂಡಿಯೋ ತೋರಿಸಿಕೊಂಡು ಬನ್ನಿ—ನಾನು ಪ್ರೊಜೆಕ್ಷನ್ ರೂಮ್‌ನಲ್ಲಿರುತ್ತೇನೆ. "

ಎಂದು ಹೇಳಿದರು.

ಚೆಟ್ಟಿಯಾರರೆದ್ದು ಪ್ರೊಡಕ್ಷನ್ ಮ್ಯಾನೇಜರ್ ವಿಶ್ವನಾಥಂ ಜತೆಯಲ್ಲಿ ಪ್ರೊಜಕ್ಷನ್ ರೂಮಿನ ಕಡೆ ನಡೆಯಲು, ರಾಮಾನುಜಂ ಅತಿಥಿಗಳನ್ನು ಸ್ಟೂಡಿಯೋ ದರ್ಶನಕ್ಕೆ ಕರೆದೊಯ್ದರು.

ಸ್ಟುಡಿಯೋಗಿದ್ದ ವಿಶಾಲ ಆವರಣ, ಸ್ಟೂಡಿಯೋವನ್ನಿಟ್ಟಿದ್ದ ಅಚ್ಚುಗಟ್ಟು ಕಂಡು ಭೂಪೆನ್ ಬಾಬು ತಮ್ಮ ಮೆಚ್ಚುಗೆಯನ್ನು ವ್ಯಕ್ತಗೊಳಿಸುತ್ತಾ

" ಇಷ್ಟು ದೊಡ್ಡ ಸ್ಟೂಡಿಯೋ ಕಲ್ಕತ್ತೆಯಲ್ಲಿಯೂ ಇಲ್ಲ "

ಎಂದರು.

ಸ್ಟೂಡಿಯೋದಲ್ಲಿ ಮೂರು ಫ್ಲೋರ್‌ಗಳಿದ್ದವು. ಒಂದು ನೂರಿಪ್ಪತ್ತು ಅಡಿ ಉದ್ದ, ಎಂಭತ್ತು ಅಡಿ ಅಗಲವಿತ್ತು. ಉಳಿದೆರಡು ಆದರ ಅರ್ಧವಿದ್ದವು.

ಮೊದಲನೆಯ ಫ್ಲೋರಿಗೆ ಎಲ್ಲರೂ ಪ್ರವೇಶಿಸಿದರು. ಸ್ಟೂಡಿಯೋ ಕಲಾದಿಗ್ದರ್ಶಕ(Art Director)ರಾದ ಬಾಲಮೂರ್ತಿ ಒಂದು ಸೆಟ್ ಹಾಕಿ

ಸುತ್ತಿದ್ದರು. ಅವರ ಪರಿಚಯವನ್ನು ರಾಮಾನುಜಂ ಎಲ್ಲರಿಗೂ ಮಾಡಿ ಕೊಟ್ಟರು. ಭೂಪೆನ್ ಕುತೂಹಲದಿಂದ

" ಇದು ಯಾವ ಚಿತ್ರದ ಸೆಟ್."

" ಸ್ಟೂಡಿಯೋದ ಸ್ವಂತ ಚಿತ್ರ–' ವನವಿಲಾಸಿನಿ '–ಜಾನಪದ ಕಥೆ "

ಉಳಿದ ಎರಡು ಫ್ಲೋರ್‌ಗಳನ್ನೂ ತೋರಿಸಿಕೊಂಡು ಕ್ಯಾಮರಾ, ಆರ್ಟ್, ರಿಕಾರ್ಡಿಂಗ್. ಲ್ಯಾಬರೋಟರಿ, ಎಡಿಟಿಂಗ್ ಡಿಪಾರ್ಟ್ಮೆಂಟು ಗಳನ್ನು ತೋರಿಸಿಕೊಂಡು ಮೇಕಪ್ ಡಿಪಾರ್ಟ್ಮೆಂಟಿಗೆ ಬಂದರು. ಅಲ್ಲಿ ಸಂಗ್ರಹವಾಗಿದ್ದ ವಸ್ತ್ರಭೂಷಣಗಳು, ಕತ್ತಿ ಗುರಾಣಿಗಳು, ಕೃತಕ ಆಭರಣ ಗಳು, ಕಿರೀಟಗಳು ಇತ್ಯಾದಿ ಸಾಮಗ್ರಿಯಗಳನ್ನು ಕಂಡು ಭೂಪೆನ್, ಶಿವಾ ನಂದ ಇಬ್ಬರೂ ಆಶ್ಚರ್ಯಪಟ್ಟರು.

ಪ್ರೊಜೆಕ್ಷನ್ ರೂಮಿನ ಬಳಿಗೆ ಹೋಗುತ್ತಿದ್ದಂತೆ ಭೂಪೆನ್

" ಈಗ ಇಲ್ಲಿ ಎಷ್ಟು ಚಿತ್ರಗಳು ನಡೆಯುತ್ತಿವೆ ? "

ಎಂದು ಕೇಳಿದರು.

" ಎರಡೇ. ಒಂದು ಸ್ಟೂಡಿಯೋ ಚಿತ್ರ–ಇನ್ನೊಂದು ಕಾಂಟ್ರ್ಯಾಕ್ಟ ಚಿತ್ರ–ಸಾಮಾಜಿಕ."

" ನಾವು ಚಿತ್ರ ಆರಂಭಿಸಿದರೆ ತಡವಾಗುವುದಿಲ್ಲ ತಾನೇ."

" ನಮ್ಮಲ್ಲಿ ಮೂರು ಸೆಟ್ಟುಗಳಿರುವಂತೆ, ಮೂರು ಷಿಫ್ಟ್ (Shift) ಕೆಲಸಗಾರರಿದ್ದಾರೆ. ಹದಿನೈದು ಇಪ್ಪತ್ತು ದಿವಸಗಳಲ್ಲಿ ಒಂದು ಚಿತ್ರ ಮುಗಿಸಿ ನಮಗೆ ಅಭ್ಯಾಸವಿದೆ."

ಪ್ರೊಜೆಕ್ಷನ್ ರೂಮಿನಲ್ಲಿ ಚಿತ್ರಪ್ರದರ್ಶನ ನಡೆದಿತ್ತು. ಚೆಟ್ಟಿಯಾರ ರೊಬ್ಬರೇ ಕುಳಿತುಕೊಂಡು ನೋಡಿ ಸಂತೋಷಪಡುತ್ತಿದ್ದರು. ಅವರ ಮುಂದೆ ವಿಸ್ಕಿ ಶೀಷೆ, ಗ್ಲಾಸು, ಸೋಡಾ ಶೀಷೆಗಳಿದ್ದವು. ಚೆಟ್ಟಿಯಾರರು ಹೊತ್ತಿಸಿದ ಸಿಗಾರ್ ಕೈಯಲ್ಲಿ ಹಿಡಿದು ಬ್ರಹ್ಮಲೋಕದಲ್ಲಿ ವಿಹರಿಸುತ್ತಿದ್ದರು.

ಅತಿಥಿಗಳು ಪೀಠಸ್ಥರಾಗಲು ಚೆಟ್ಟಿಯಾರರೇ ಹೇಳಿ ತಮ್ಮ ಸ್ಟೂಡಿಯೋ ದಲ್ಲಿ ತಯಾರಾದ ಚಿತ್ರಗಳ ಕೆಲವು ಭಾಗ ತೋರಿಸಿ,

" ನಮ್ಮ ಮನೆಯ ಮದುವೆಯ ಚಿತ್ರ ತೋರಿಸಿ "

ಎಂದರು. ಆ ಚಿತ್ರ ಸುಮಾರು ನಾಲ್ಕು ಸಾವಿರ ಅಡಿಗಳಿರಬಹುದು. ಮದುವೆಯ ವೈಭವ, ಜನಸಂದಣಿ, ಸಂಗೀತ ಕಛೇರಿ, ವಧೂವರರಿಗೆ ಕೊಟ್ಟ ಉಡುಗೊರೆಗಳು ಎಲ್ಲವನ್ನೂ ನೋಡಿ ವಿಸ್ಮಯಗೊಂಡು ಶಿವಾನಂದ ಪಕ್ಕ ದಲ್ಲಿದ್ದ ರಾಮಾನುಜಂ ಅವರಿಗೆ

"ಮದುವೆಗೆ ಒಂದು ಲಕ್ಷ ಖರ್ಚಾಗಿರಬಹುದಲ್ಲವೇ?"

ಎಂದ. ರಾಮಾನುಜಂ ನಕ್ಕು

"ನಾಲ್ಕು ಲಕ್ಷ"

ಎಂದರು.

ಮದುವೆಯ ಮನೆಯ ಚಿತ್ರ ಮುಗಿಯಲು ಚೆಟ್ಟಿಯಾರರು ಹೊರಟು ನಿಂತರು. ಅವರು ಎಲ್ಲರ ಕೈ ಕುಲುಕುತ್ತ ಭೂಪೆನ್ ಬಾಬುಗಳ ಕೈ ಹಿಡಿದರು. ಬಾಬು ಅದೇ ಅವಕಾಶವೆಂದುಕೊಂಡು

"ನಿಮ್ಮ ಸ್ಟುಡಿಯೋ ನೋಡಿದ ಮೇಲೆ ಬೇರೆ ಕಡೆ ಹೋಗಲು ಸಾಧ್ಯವೇ ಇಲ್ಲ! ಈಗ ನಾವು ಊರಿಗೆ ಹೋಗಿ ಇನ್ನೊಂದು ವಾರದೊಳಗೆ ಬಂದು ಕಾಂಟ್ರ್ಯಾಕ್ಟ್ ಮಾಡಿಕೊಳ್ಳುತ್ತೇವೆ. ನಮಗೆ ಎಲ್ಲ ಸೌಲಭ್ಯ ತಾವು ಕೊಡಬೇಕು."

"ಜೊಗೆನ್ ಬಾಬುಗಳ ಸ್ನೇಹಿತರೆಂದ ಮೇಲೆ ನಮ್ಮ ಸ್ನೇಹಿತರು ಆದ ಹಾಗೇ ಆಯಿತು. ಬನ್ನಿ – ನಿಮಗೆ ಎಲ್ಲಾ ಅನುಕೂಲ ಮಾಡಿಕೊಡುತ್ತೇನೆ."

ಎಂದು ಆಶ್ವಾಸನವಿತ್ತರು.

ಚೆಟ್ಟಿಯಾರರನ್ನು ಕಾರಿನಲ್ಲಿ ಕಳುಹಿಸಿ ರಾಮಾನುಜಂ ಬಂದು ಎಲ್ಲರನ್ನೂ ತಮ್ಮ ಆಫೀಸಿಗೆ ಕರೆದುಕೊಂಡು ಹೋದರು.

ಆಫೀಸಿನ ಸಿಸ್ತು ಎಲ್ಲರ ಕಣ್ಣು ಸೆಳೆಯುವಂತಿತ್ತು. ಸ್ಟುಡಿಯೋ ನೌಕರರಿಗೆ ರಾಮಾನುಜಂ 'ಯಮಪ್ರಾಯ'ವಾಗಿದ್ದರೆಂದು ತಿಳಿಯಲು ಬಹಳ ವೇಳೆ ಬೇಕಾಗಿರಲಿಲ್ಲ.

ರಾಮಾನುಜಂ ತಮ್ಮ ಮೇಜಿನ ಮೇಲಿದ್ದ ೫೫೫ ಸಿಗರೇಟ್ ಡಬ್ಬವನ್ನು ಅತಿಥಿಗಳ ಮುಂದಿಟ್ಟು

"ನಮ್ಮಿಂದೇನಾಗಬೇಕು ನಿಸ್ಸಂಕೋಚವಾಗಿ ಹೇಳಿ ಭೂಪೆನ್ ಬಾಬು."

ಎಂದರು. ಭೂಪೆನ್

"ಕಾಂಟ್ರ್ಯಾಕ್ಟಿನ ಶರತ್ತು (Terms) ಹೇಗೆ?"

"ನಿಮಗೇನು ಸ್ಟುಡಿಯೋ ಶರತ್ತುಗಳು ಹೊಸದೇ? ನಲವತ್ತೈದು ಷೂಟಿಂಗ್ ದಿನಗಳು – ತೊಂಭತ್ತು ದಿನಗಳ ಅವಧಿ."

"ಸೆಟ್ಟುಗಳು."

"ಮೂರು ದೊಡ್ಡ ಸೆಟ್ಟುಗಳು–ಆರು ಚಿಕ್ಕ ಸೆಟ್ಟುಗಳು."

"ದಿನಕ್ಕೆ ಬಾಡಿಗೆ?"

" ಒಂದು ಸಾವಿರ."

" ಸಾವಿರ ಬಹಳ ಹೆಚ್ಚಾಯಿತು."

" ಕಾಂಟ್ರ್ಯಾಕ್ಟಿಗೆ ಸಹಿ ಮಾಡುವಾಗ ಸ್ವಲ್ಪ ಕಡಿಮೆಮಾಡಿದರಾಯಿತು. ಜೊಗೆನ್ ಬಾಬುಗಳನ್ನೇ ಕೇಳಿ ಇಲ್ಲಿ ದರಗಳನ್ನು ತಿಳಿದುಕೊಳ್ಳಿ."

" ನನ್ನ ಪಾರ್ಟಿ ಚಿತ್ರ ನಿರ್ಮಾಣಕ್ಕೆ ಹೊಸದಾಗಿ ಬರುತ್ತಿದ್ದಾರೆ. ಮೊದಲನೆಯ ಚಿತ್ರಕ್ಕೇ ಅವರು ಹೆದರಿಬಿಡಬಾರದು."

" ಚೆಟ್ಟಿಯಾರರು ಹೇಳಿದ್ದು ಕೇಳಿದಿರೋ ಇಲ್ಲವೊ ? ನಿಮಗೆ ಬೇಕಾದ ಸೌಕರ್ಯ ಮಾಡಿಕೊಡಲಾಗುತ್ತದೆ. ಯೋಚನೆ ಮಾಡಬೇಡಿ. ನಿಮ್ಮ ಚಿತ್ರ ಬೇರೆಯಲ್ಲ – ನಮ್ಮ ಚಿತ್ರ ಬೇರೆಯಲ್ಲ."

" ನಮಗೆ ವಾಸಕ್ಕೆ ಮನೆ ಬೇಕಾಗುತ್ತದಲ್ಲ. ಸ್ಟೂಡಿಯೋ ಸಮೀಪ ದಲ್ಲಿ ಮನೆಗಳು ಬಾಡಿಗೆಗೆ ಸಿಕ್ಕುತ್ತವೆಯೇ ? "

ಎಂದು ಶಿವಾನಂದ ಕೇಳಿದ.

" ಸ್ಟೂಡಿಯೋ ಕಾಂಪೌಂಡಿನಲ್ಲಿಯೇ ನಮ್ಮ ಕೆಲವು ಮನೆಗಳಿವೆ. ಅದರಲ್ಲಿ ಒಂದನ್ನು ನಿಮಗೆ ಬಿಡಿಸಿಕೊಡುತ್ತೇನೆ. ನಿಮ್ಮ ಪಾರ್ಟಿ ಎಷ್ಟಾಗ ಬಹುದು ? "

" ಸುಮಾರು ೭೦–೮೦ ಜನ."

" ಹಾಗಾದರೆ ಇದು ಸಾಲುವುದಿಲ್ಲ. ಇನ್ನೊಂದು ಕಟ್ಟಡ ಬೇಕಾಗುತ್ತದೆ. ಸಮೀಪದಲ್ಲಿಯೇ ನಾನು ಬಂಗಲೆ ಗೊತ್ತು ಮಾಡಿಕೊಡುತ್ತೇನೆ."

" ಕಚ್ಚಾ ಫಿಲ್ಮುಗಳು (Raw films) ! "

ಎಂದು ಭೂಪೆನ್ ಕೇಳಿದರು.

" ನೀವು ಇಲ್ಲಿಗೆ ಬನ್ನಿ. ನಿಮಗೆ ಎಷ್ಟು ಫಿಲ್ಮು–ನೆಗಟಿವ್, ಪಾಸಿಟಿವ್ ಬೇಕೋ ನಾನು ಕೊಡಿಸಿಕೊಡುತ್ತೇನೆ."

ಎಂದು ಜೊಗೆನ್ ಬಾಬು ಕಡೆ ತಿರುಗಿ ಮುಗುಳ್ನಗೆ ನಕ್ಕರು. ಜೊಗೆನ್ ಅವರ ಇಂಗ್ರಿತವನ್ನು ಗ್ರಹಿಸಿ

" ರಾಮಾನುಜಂ ಮದರಾಸಿನ ಅನಭಿಷಿಕ್ತ ಪ್ರಭುಗಳು ಭೂಪೆನ್. ಮನಸ್ಸು ಮಾಡಿದರೆ ಅವರು ಬೇಕಾದದ್ದು ಮಾಡಬಲ್ಲರು "

ಎಂದು ಹೇಳಿದರು.

ಭೂಪೆನ್ ಬಾಬು ಕೋರಿಕೆಯಂತೆ ರಾಮಾನುಜಂ, ಅಚ್ಚಾದ ಸ್ಟೂಡಿಯೋ ಕಾಂಟ್ರ್ಯಾಕ್ಟ್ ತರಸಿಕೊಟ್ಟರು.

ಎಲ್ಲರೂ ಹೊರಟು ನಿಲ್ಲಲು ರಾಮಾನುಜಂ ಅವರನ್ನು ಬೀಳ್ಕೊಡಲು

ಕಾರ್ ಬಳಿಗೆ ಬಂದರು.

"ನೀವು ಬರುವುದಿಲ್ಲವೇ?"

ಎಂದು ಜೊಗೆನ್ ಕೇಳಿದರು.

"ಇಲ್ಲ–ಸ್ಟೂಡಿಯೋದಲ್ಲಿ ಕೆಲಸವಿದೆ. ನಾನು ನಿಲ್ಲುತ್ತೇನೆ."

"ಮುಂದಿನ ವಾರ ಮತ್ತೆ ನಿಮ್ಮ ದರ್ಶನ ತೆಗೆದುಕೊಳ್ಳುತ್ತೇನೆ"

ಎಂದು ಭೂಪೆನ್ ಆಶ್ವಾಸನವಿತ್ತರು.

ಕಾರು ಮತ್ತೆ ಜೊಗೆನ್ ಬಾಬುಗಳ ಮನೆಯ ಬಳಿ ಬಂದು ನಿಂತಿತು. ಒಳಗೆ ಎಲ್ಲರೂ ಕುಳಿತ ಮೇಲೆ ಭೂಪೆನ್ ಬಾಬು

"ಇವರ ಸಮಾಚಾರ ಹೇಗೆ ಜೊಗೆನ್."

ಎಂದು ಕೇಳಿದರು.

"ಸಮಾಚಾರವಿಷ್ಟೆ. ಮಾಲಿಕರು ಚೆಟ್ಟಿಯಾರ್ ಕೋಟ್ಯಾಧೀಶ್ವರರು. ಕೇವಲ ತಮ್ಮ ವಿಲಾಸಕ್ಕೆ ಸ್ಟೂಡಿಯೋ ನಡೆಸುತ್ತಿದ್ದಾರೆ. ರಾಮಾನುಜಂ ಸ್ಟೂಡಿಯೋ ಸರ್ವಾಧಿಕಾರಿ. ಚೆಟ್ಟಿಯಾರರು ಯಾವಾಗಲೋ ಬಂದು ಹೋಗುತ್ತಾರೆ. ರಾಮಾನುಜಂ ಎಂದರೆ ಅವರಿಗೆ ಪಂಚಪ್ರಾಣ.

"ರಾಮಾನುಜಂ ಹೇಗೆ?"

"ದಕ್ಷತೆ ಅವರಿಂದ ಕಲಿಯಬೇಕು. ಸ್ಟೂಡಿಯೋ ಮ್ಯಾನೇಜ್‌ಮೆಂಟನ್ನು ಎಲ್ಲರೂ ಅವರಿಂದಲೇ ಕಲಿತುಕೊಳ್ಳಬೇಕು. ಮನುಷ್ಯ ಖಂಡಿತವಾದಿ–ಆದರೆ ಉದಾರಿ. ಸುಖಲೋಲುಪ – ಆದರೆ ಕರ್ತವ್ಯ, ಸುಖ ಬೇರೆ ಬೇರೆ ಎಂದು ತಿಳಿದಿದ್ದಾರೆ. ನನ್ನ ಅಭಿಪ್ರಾಯ ನೀವು ಕೇಳಿದರೆ ಈ ಸ್ಟೂಡಿಯೋಗೆ ಬರುವುದು ಒಳ್ಳೆಯದು. ಬೇಕಾದರೆ ಮದರಾಸಿನ ಇನ್ನೂ ಕೆಲವು ಸ್ಟೂಡಿಯೋಗಳನ್ನು ನೋಡಿ ಅನಂತರ ನಿರ್ಧರಿಸಿ. ನಿಮಗೆ ಇಷ್ಟು ಸೌಲಭ್ಯ ಬೇರೆ ಕಡೆ ಸಿಕ್ಕುವುದಿಲ್ಲ."

ಜೊಗೆನ್ ಬಾಬುಗಳ ಮಾತು ಭೂಪೆನ್, ಶಿವಾನಂದ ಇಬ್ಬರ ಮನಸ್ಸನ್ನೂ ಮುಟ್ಟಿತು. ಬೆಂಗಳೂರು ಮಾಲಿಕರ ಸಲುವಾಗಿ ಇನ್ನೂ ಕೆಲವು ಸ್ಟೂಡಿಯೋ ನೋಡಿ ಹೋಗಿ ಕಾರ್ತಿಕೇಯ ಪರವಾಗಿ ನಿರ್ಧರಿಸುವುದೆಂದು ಅವರು ನಿಶ್ಚಯಿಸಿದರು.

ಹೊಟೇಲಿಗೆ ಬಂದವನೇ ಶಿವಾನಂದ ಮೊದಲು ಚೆನ್ನಪ್ಪನಿಗೆ ಕಾಗದ ಬರೆದ. ತಾವು ಕಾರ್ತಿಕೇಯ ಸ್ಟೂಡಿಯೋ ನೋಡಿದ್ದು, ಅಲ್ಲಿ ಆದ ಮಾತುಕತೆಯನ್ನು ವಿವರವಾಗಿ ತಿಳಿಸಿ ಭೂಪೆನ್ ಬಾಬುಗಳಿಗೆ 'ಪಾರ್ಟಿ' ವ್ಯವಸ್ಥೆ ಮಾಡುವ ವಿಷಯ ತಿಳಿಸಿದ.

ಅಂದು ಮಧ್ಯಾಹ್ನ ಮತ್ತು ಮಾರನೆಯ ದಿನ ಮದರಾಸಿನ ನಾಲ್ಕು ಸ್ಟೂಡಿಯೋಗಳನ್ನು ನೋಡಿ ಬಂದು, ಜೊಗೇನ್ ಬಾಬು ಅಪ್ಪಣೆಪಡೆದು ಭೂಪೇನ್, ಶಿವಾನಂದ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

೭

ಶಿವಾನಂದನ ಸವಿಸ್ತಾರ ಕಾಗದ ನೋಡಿ ಚಿನ್ನಪ್ಪನಿಗೆ ನೆಮ್ಮದಿಯಾಯಿತು. ಭೂಪೇನ್ ಬಾಬುಗಳ ಪ್ರಭಾವದ ಬಗ್ಗೆ ಅವನಿಗೆ ಅಗಾಧ ಗೌರವ ಹುಟ್ಟಿತು. ಪಾರ್ಟಿಯ ವಿಷಯ ಕ್ಷಣಕಾಲ ಯೋಚಿಸಿದ. ಶಿವಾನಂದನ ಸಲಹೆ ಯೋಗ್ಯವಾದುದೆನಿಸಿತು. ಕೋಟು, ಟೋಪಿ ಧರಿಸಿಕೊಂಡು ಸೇಠ್ ಧನರಾಜನನ್ನು ಕಾಣಲು ಅವನ ಮನೆಯ ಕಡೆ ಹೊರಟ.

ಚಿನ್ನಪ್ಪನ ಮುಖ ನೋಡಿದ ಕೂಡಲೆ ಸೇಠ್ ಥಿಯೇಟರಿನಲ್ಲಿ ಆಗ ಬೇಕಾಗಿದ್ದ ಕೆಲವು ಸುಧಾರಣೆಗಳ ಬಗ್ಗೆ ಮಾತನಾಡಲಾರಂಭಿಸಿದ. ಹಿಂದೆ ಮುಂದೆ ನೋಡದೆ ಅವುಗಳೆಲ್ಲವನ್ನೂ ಮಾಡಿಸಿ ಕೊಡುವುದಾಗಿ ಚಿನ್ನಪ್ಪ ವಾಗ್ದಾನ ಮಾಡಿ ತಾನು ಬಂದಿದ್ದ ಕೆಲಸ ಹೇಳಿದ.

"ನಾವು ವ್ಯಾಪಾರಿಗಳು, ನಮಗೆ ಪಾರ್ಟಿ ಗೀರ್ಟಿ ಏತಕ್ಕೆ ಮ್ಯಾನೇಜರ್ ಸಾಬ್"

ಎಂದು ಸೇಠ್ ಗೊಣಗುಟ್ಟಿದ.

"ನಿಮಗೆ ಕಲ್ಕತ್ತೆಯ ಚಿತ್ರಗಳು ಇನ್ನೂ ಸಿಕ್ಕಿಲ್ಲ ಸೇಠ್‌ಜೀ—ಭೂಪೇನ್ ಬಾಬು ಸಹಾಯದಿಂದ ನೀವು ಎಲ್ಲಾ ಚಿತ್ರಗಳನ್ನು ಹೊಡೆದುಕೊಳ್ಳಬಹುದು. ಇಂಥ ಅವಕಾಶ ಮುಂದೆ ನಿಮಗೆ ಸಿಕ್ಕಲಾರದು. ಅದಲ್ಲದೆ ಭೂಪೇನ್‌ಬಾಬು ಸಹಾಯದಿಂದ ನಾವು ಒಂದು ಪಿಕ್ಚರ್ ಮಾಡುವ ಯೋಚನೆ ಮಾಡುತ್ತಿದ್ದೇವೆ. ಅದು ಕೈಗೂಡಿದರೆ ನಿಮ್ಮನ್ನೂ ಜತೆಗೆ ಕರೆದುಕೊಂಡೇ ಕರೆದು ಕೊಳ್ಳುತ್ತೇವೆ."

"ಭಾಳ ಖರ್ಚು ಆಗ್ತದಲ್ಲಾ ಮ್ಯಾನೇಜರ್ ಸಾಬ್."

"ಪಾರ್ಟಿ ನಿಮ್ಮ ಹೆಸರಿನಲ್ಲಿ ಆಗಬೇಕೆಂದು ನಮ್ಮ ಇಚ್ಛೆ. ಖರ್ಚು ಕೊಡುವುದಕ್ಕೆ ನಿಮಗೆ ಇಷ್ಟವಿಲ್ಲದಿದ್ದರೆ, ನಾನು ಕೊಡುತ್ತೇನೆ. ನಿಮ್ಮ ಹೆಸರು ಕೊಡಿ."

ಚಿನ್ನಪ್ಪ ಎಡಿಸಿ ಆಡಿದ ಮಾತು ಸೇಠ್‌ಜೀ ಹೃದಯಕ್ಕೆ ತಾಗಿತು. ಚಿನ್ನಪ್ಪನ ಅಸಮಾಧಾನ ಕಟ್ಟಿಕೊಳ್ಳುವುದೂ ಸೇಠ್‌ಜೀಗೆ ಬೇಕಿರಲಿಲ್ಲ.

"ಎಲ್ಲಾ ಗೊತ್ತು ಮಾಡಿಬಿಡಿ ಮ್ಯಾನೇಜರ್ ಸಾಬ್. ಖರ್ಚೆಷ್ಟಾದರೂ ನಾನು ಕೊಡುತ್ತೇನೆ–ಪಾರ್ಟಿ ಎಂದು ಇಟ್ಟುಕೊಂಡಿದ್ದೀರಿ ?"

"ಭಾನುವಾರ ಬೆಳಿಗ್ಗೆ. ಆಗ ನಿಮ್ಮ ಷೋನೂ ಇರುವುದಿಲ್ಲ. ಥಿಯೇಟರಿನಲ್ಲಿ ಮಾಡಿದರೆ ಒಳ್ಳೆಯ ಪ್ರಚಾರವೂ ಆಗುತ್ತದೆ."

"ಠೀಕ್–ಠೀಕ್–ಹಾಗೇ ಮಾಡಿ."

ಸೇಠರ ಆಶ್ವಾಸನ ಮುಂದಿನ ಕೆಲಸಕಾರ್ಯ ಕೈಗೊಳ್ಳುವುದಕ್ಕೆ ಚಿನ್ನಪ್ಪನಿಗೆ ಒಳ್ಳೆಯ ಹುರುಪುಕೊಟ್ಟಿತು.

ಕಾರ್ಯಕ್ರಮವನ್ನೆಲ್ಲಾ ಮನಸ್ಸಿನಲ್ಲಿಯೇ ನಿರ್ಧರಿಸಿಕೊಂಡು ಚಿನ್ನಪ್ಪ ಭಾಗ್ಯಮ್ಮನನ್ನು ಕಂಡು ಅವಳಿಗೆ ಎಲ್ಲ ವಿಷಯಗಳನ್ನೂ ವಿವರಿಸಿದ. ಚಿನ್ನಪ್ಪನ ವ್ಯವಹಾರನೈಪುಣ್ಯ ಕಂಡು ಭಾಗ್ಯಮ್ಮ ಬೆರಗಾದಳು.

"ಅಧ್ಯಕ್ಷತೆಗೆ ಯಾರನ್ನು ಕರೆಯುವುದು ಅದೇ ನನಗೆ ಬಗೆಹರಿದಿಲ್ಲ ಭಾಗ್ಯಮ್ಮ."

"ವೀರಭದ್ರಪ್ಪನವರನ್ನು ಕರೆದರೆ ಕೆಲಸ ಮುಗಿದುಹೋಗತ್ತಪ್ಪಾ."

"ಅದರಿಂದ ನಮಗಾಗುವ ಲಾಭವೇನು. ಬೆಂಗಳೂರಿನಲ್ಲಿ ಯಾವ ಸಭೆ, ಸಮಾರಂಭವಾದರೂ ವೀರಭದ್ರಪ್ಪನವರೇ ಅಧ್ಯಕ್ಷರು. ಅವರ ಭಾಷಣ ಕೇಳಿ ಜನ ಬೇಸತ್ತಿದ್ದಾರೆ."

"ನೋಡು–ಯಾರಾದರೂ ಮಂತ್ರಿಗಳು ಸಿಕ್ಕುತ್ತಾರೇನೋ ?"

"ಮಂತ್ರಿಗಳಿಂದ ನಮಗೇನೂ ಪ್ರಯೋಜನವಿಲ್ಲ. ನಾನು ಒಂದು ವಿಚಾರಮಾಡುತ್ತೇನೆ–ಅದಕ್ಕೇನು ಹೇಳುತ್ತೀ ?"

"ಏನು ಹೇಳು."

"ನಮ್ಮ ಸಾಹುಕಾರರನ್ನೆ ಅಧ್ಯಕ್ಷರನ್ನಾಗಿ ಮಾಡಿದರೆ ?"

ಭಾಗ್ಯಮ್ಮ ಗಹಗಹಿಸಿ ನಗುತ್ತಾ

"ಅವರಿಗೆ ಮಾತಾಡುವುದಕ್ಕೆ ಬರುವುದಿಲ್ಲವಲ್ಲೋ ಚಿನ್ನಪ್ಪ."

"ಅವರೇಕಮ್ಮ ಮಾತಾಡಬೇಕು–ಅವರ ದುಡ್ಡು ಮಾತಾಡುತ್ತೆ, ನಾನು ಶಿವಾನಂದನ ಕೈಯಲ್ಲಿ ಭಾಷಣ ಬರೆಸಿ ಸಾಹುಕಾರರಿಂದ ಓದಿಸಿದರಾಯಿತು."

ಚಿನ್ನಪ್ಪನ ಯೋಚನೆ ಭಾಗ್ಯಮ್ಮನ ಕಲ್ಪನೆಗೆ ನಿಲುಕುವುದೇ ದುಸ್ಸಾಧ್ಯವಾಯಿತು. ಅವಳು ನಗೆಯನ್ನು ತಡೆಯದಾದಳು. ಮಗಳನ್ನು ಕೂಗಿ ಅವಳಿಗೆ ಈ ಸಂತೋಷದ ಸುದ್ದಿ ತಿಳಿಸಿದಳು. ಸರೋಜ ಮುಗುಳ್ನಗೆ ನಕ್ಕು

" ಆಗಲಿ ಬಿಡಮ್ಮ. ಚಿನ್ನಪ್ಪಣ್ಣ ಎಲ್ಲಾ ಯೋಚಿಸಿಯೇ ಒಂದು ಕೆಲಸಕ್ಕೆ ಕೈಹಾಕುವುದು. "

ಎಂದಳು. ಭಾಗ್ಯಮ್ಮ ಸಂಶಯಚಿತ್ತಳಾಗಿ

" ಸಾಹುಕಾರರು ಒಪ್ಪುತ್ತಾರೇನೋ ಚಿನ್ನಪ್ಪ. "

" ಅದಕ್ಕೇ ನಾನು ಮೊದಲು ಇಲ್ಲೀಗೆ ಬಂದಿದ್ದು. ಅವರನ್ನು ಒಪ್ಪಿಸುವ ಭಾರ ನಿನ್ನದು. "

" ಸಂಜೆ ಇಲ್ಲಿಗೆ ಬರುತ್ತಾರೆ. ನೀನು ಇಲ್ಲೀಗೆ ಬಂದು ಆ ವಿಷಯ ಅನ್ನೆದುರಿಗೆ ಪ್ರಸ್ತಾಪಮಾಡು ಚಿನ್ನಪ್ಪ. ನಾನು ಒಪ್ಪಿಸುತ್ತೇನೆ. ಪಾರ್ಟಿಗೆ ಏನೇನು ಮಾಡ್ತಿಸುತ್ತೀ ? "

" ತಿಳಿದೇ ಇದೆಯಲ್ಲಾ. ತಿಂಡಿ ಕಾಫಿ, ಭಾಷಣಗಳು, ಸ್ವಲ್ಪ ಸಂಗೀತ. "

" ಸಂಗೀತ ಯಾರದು. ? "

ಭಾಗ್ಯಮ್ಮನ ಮನಸ್ಸಿನಲ್ಲಿದ್ದುದನ್ನು ಗ್ರಹಿಸಿ

" ಸರೋಜಮ್ಮನದು ಯಾಕಾಗಬಾರದು. ? "

" ಸಾಹುಕಾರರು ಒಪ್ಪಬೇಕಲ್ಲ ! "

" ಅವರನ್ನು ನಾನು ಒಪ್ಪಿಸುತ್ತೇನೆ."

" ಹಾಗಾದರೆ ಆಗಬಹುದು, ಸರಿಯಾದ ಪಕ್ಕವಾದ್ಯ ಗೊತ್ತುಮಾಡ ಬೇಕಪ್ಪಾ."

" ಅವಶ್ಯಕವಾಗಿ. ಸರೋಜ ಹೇಗೂ ಮುಂದೆ ಸ್ಟಾರ್ ಆಗುವವಳು. ಈ ಅವಕಾಶ ಉಪಯೋಗಿಸಿಕೊಂಡು ಅವಳ ಹೆಸರು ಪ್ರಸಾರಮಾಡಬಹುದು."

" ಏನು ಮಾಡುತ್ತೀಯೋ ಮಾಡಪ್ಪಾ. ಸಂಜೆಗೆ ಮಾತ್ರ ತಪ್ಪದೆ ಬಂದುಬಿಡು. "

" ಬರುತ್ತೇನೆ – ನಾನು ಹೇಳಿದ್ದು ಏನು ಮಾಡಿದೆ ? "

" ನಿನ್ನ ಕೆಲಸ ಮಾಡಿದ್ದೇನೆ. ನೀನು ಕರೆಸು ಎಂದು ಹೇಳಿದ ದಿನ ಕರೆಸುತ್ತೇನೆ. "

" ಈ ಪಾರ್ಟಿ ಗಲಾಟೆ ಮುಗಿದು ಹೋಗಲಿ ತಡಿ. ಸೋಮವಾರದ ದಿನ ಪಿಕ್ಚರ್ ಕೆಲಸ ಆರಂಭಿಸಿಬಿಡಬೇಕು. "

ಎಂದು ಹೇಳಿದ.

ಚಿತ್ರ ನಿಯೋಜನೆ ಒಂದು ಸ್ವರೂಪ ತೆಗೆದುಕೊಳ್ಳುತ್ತಿದ್ದ ಈ ಹೊತ್ತಿ

ನಲ್ಲಿ ಮುರಿಗೆಯ್ಯನನ್ನು ಉಪೇಕ್ಷೆಮಾಡುವುದು ಅಪಾಯಕರವೆಂದು ಚಿನ್ನಪ್ಪನಿಗೆ ತೋರಿತು.

ಅಂದೇ ಅವನನ್ನು ಕಂಡು ಪಾರ್ಟಿ ವಿಷಯವನ್ನು ಅವನಿಗೆ ನಿವೇದಿಸಿದ. ಮುರಿಗೆಯ್ಯ ಸಂತೋಷಪಡುತ್ತಾ

" ಅಣ್ಣಾವರು ಭೊ ಕುಸಿಯಾಗಿ ಬಿಡ್ತಾರೆ ಚಿನ್ನಪ್ಪ. "

" ಧಣಿಗಳು ಸಂತೋಷಪಟ್ಟರೇ ನಮಗೆ ಶ್ರೇಯಸ್ಸು. "

" ಪಿಕ್ಚರ್ ಮಾಡಿಸೋಕೆ ಹೊಂಟುಬಿಟ್ಟದ್ದೀಯಲ್ಲಾ – ಅಣಕ್ಕೇನುಡ್ತೀ ಚಿನ್ನಪ್ಪ. ಧನರಾಜ್ ಥೈಲಿ ಬಿಚ್ತಾನೋ? "

" ಅವನು ಸಿದ್ಧವಾಗಿದ್ದಾನೆ ಮುರಿಗೆಯ್ಯ. ಆದರೆ ನಾವು ದುಡಿದು ಕಂಡವರ ಬಾಯಿಗೆ ಏಕೆ ಹಾಕಬೇಕು ಹೇಳು. ಒಳ್ಳೆಯ ಕೆಲಸಕ್ಕೆ ಕೈಹಾಕಿದರೆ ದೈವಸಹಾಯ ಹೇಗೆ ಒದಗುತ್ತದೆ ನೋಡು. ಇದೇ ಸಮಯಕ್ಕೆ ಈ ಡೈರೆಕ್ಟರ್ ಭೂಪೆನ್ ಬಾಬುಗಳು ಇಲ್ಲಿಗೆ ಬರಬೇಕೇ?"

" ಆ ವಯ್ಯ ಎಂಗೆ?"

" ಭೋ ಗಟ್ಟಿಗರು ಮುರಿಗೆಯ್ಯ. ಕಲ್ಕತ್ತೆಯಲ್ಲಿ ನಾಲ್ಕೈದು ಕಾಂಟ್ರ್ಯಾಕ್ಟುಗಳು ಅವರಿಗೆ ಕಾದಿವೆ. ನಾನು ಉಪಾಯಮಾಡಿ ಅವರನ್ನು ಇಲ್ಲಿಯೇ ಉಳಿಸಿಕೊಂಡು ನಮ್ಮ ಪಿಕ್ಚರ್ ಮಾಡಿಕೊಡುವಂತೆ ಕೇಳಿಕೊಳ್ಳೋಣಾಂದಿದ್ದೇನೆ. ಶಿವಾನಂದರು ನನಗೆ ಗೊತ್ತಿಲ್ಲ......."

" ಊ! ನಾ ಕಾಣೆನೇ! ನಮ್ಮ ಈರಭದ್ರಪ್ನೋರ ಅಳಿಯಂದಿರು."

"ಅವರಿಗೂ ಭೂಪೆನ್ ಬಾಬುಗಳಿಗೂ ತುಂಬ ಸ್ನೇಹ. ಶಿವಾನಂದರನ್ನು ಭೂಬಿಟ್ಟು ಬಾಬುಗಳನ್ನು ಹಿಡಿಯೋಣ ಎಂದು ಮಾಡಿದ್ದೇನೆ."

"ನೀನು ಅಡಗು ನುಂಗೋ ಆಸಾಮಿ ಕಣ್ಲೇ ಚಿನ್ನಪ್ಪ."

" ಬಿಡಣ್ಣ ನಂದೇನು–ನಿನ್ನ ವಿಶ್ವಾಸ ಇರೋಹೊತ್ಗೆ ನಾನೂ ಎಗರ್ಲಾಡೋದು."

" ಲೇ ಚಿನ್ನಪ್ಪಾ, ಇದೇ ಸಮಯ ನೋಡಿ ನಮ್ಮ ಮಹದೇವಂಗೆ ಏನಾದರೂ ದಾರಿ ಮಾಡೋ. ಭೋ ಕಷ್ಟದಾಗವ್ನೆ."

" ಯಾವದೋ ನಾಟಕದ ಕಂಪೆನಿಯಲ್ಲಿ ಕವಿಯಾಗಿದ್ದ."

" ಅದೆಲ್ಲಾ ಆಗೋಯ್ತು, ಕಂಪೆನಿ ದಿವಾಳಿ ಎದ್ದೋಯ್ತು. ಮಹದೇವನೇ ಕಂಪೆನಿ ಕಟ್ಟಿಕೊಂಡು ಏಗಿದ. ಖರ್ಚೆಲ್ಲಾ ಮೈಮ್ಯಾಕೆ ಬಂದು–ಸಾಲಸೋಲ ಆಯ್ತು. ಈಗ ಕೈಕಟ್ಟಿಕೊಂಡು ಮನೇಲಿ ಕೂತವ್ನೆ. ಅವನ ಅಕ್ಕನ್ನ ಲಗ್ನ ಮಾಡ್ಕೊಂಡ ತಪ್ಪಿಗೆ ನಾನು ಅವನಿಗೂ ಅವನ ಎಂಡ್ರಿಗೂ

ಅನ್ನ ಕಾಣಿಸ್ಬೇಕಾಗಿವೆ. ”

“ಈ ಪಿಕ್ಚರ್ ವಿಷಯ ಸುಮುಖವಾಗಿ ಇತ್ಯರ್ಥವಾದರೆ ಮಹದೇವನಿಗೆ ಖಂಡಿತ ಸ್ಥಳ ಮಾಡಿಕೊಡುತ್ತೇನಪ್ಪಾ—ನೀನು ಒಂದು ಕೆಲಸ ಮಾಡಬೇಕು ನೋಡು.”

“ ನೀನು ಏನು ಹೇಳಿದರೆ ತಾನೆ ಮಾಡಲ್ಲಾಂತೀನ ಚಿನ್ನಣ್ಣ.”

“ ಪಿಕ್ಚರ್ ವಿಷಯ ನಾನು ಮೂರು ನಾಲ್ಕು ದಿವಸದಲ್ಲಿ ಸಾಹುಕಾರರ ಹತ್ತಿರ ಮಾತನಾಡುತ್ತೇನೆ. ಅವರು ನಿನ್ನ ಕೇಳಿಯೇ ಕೇಳ್ತಾರೆ. ನೀನು ಕೊಂಚ ಒತ್ತಾಸೆಕೊಟ್ಟರೆ ವ್ಯಾಪಾರ ಗಿಟ್ಟಿದ ಹಾಗೇ ! ”

“ ಇದರಲ್ಲಿ ನಂಗೆ ? ”

“ ಪಿಕ್ಚರ್ ಮದರಾಸಿನಲ್ಲೇ ಮಾಡೋದು. ಅಲ್ಲಿ ಸಾಹುಕಾರರ ಹಣ ಕಾಸು ನೋಡಿಕೊಳ್ಳೋಕೆ ನಿನ್ನೇ ಕರ್‍ಕೊಂಡು ಬರ್‍ಬೇಕೊಂತ ನಾನು ಹೇಳು ತ್ತೇನೆ. ಹಣಕ್ಕೆಲ್ಲಾ ನೀನೇ ಧಣಿ—ಇನ್ನೇನಣ್ಣಾ—ನಿನ್ನ ರೊಟ್ಟಿ ತುಪ್ಪದಲ್ಲೇ ನೆನೆಯುತ್ತೆ.”

“ಇರಲಿ ಓಗು—ಶಿವನಮ್ಯಾಕೆ ಭಾರ ಹಾಕಿ ಮುಂದಿನ ಕೆಲಸ ನೋಡ್ಕೋ—ಸಾವಕಾರ್‍ರ ವಿಷಯ ನಂಗೆ ಬುಟ್ಟುಬುಡು.”

ಎಂದ. ಮುರಿಗೆಯ್ಯನ ಆಶ್ವಾಸನ ಸಿಕ್ಕಿದುದು ಚಿನ್ನಪ್ಪನಿಗೆ ಒಂದು ಸಾಮ್ರಾಜ್ಯ ಸಿಕ್ಕಿದ ಹಾಗಾಯಿತು.

ಆಹ್ವಾನ ಪತ್ರಿಕೆಗಳ ಮುದ್ರಣ, ತಿಂಡಿ ವ್ಯವಸ್ಥೆ, ಸಂಗೀತಕ್ಕೆ ಪಕ್ಕ ವಾದ್ಯಗಾರರನ್ನು ಗೊತ್ತುಮಾಡುವುದು, ಪತ್ರಿಕಾಕರ್ತರನ್ನೂ,ಪ್ರೆಸ್‌ಫೋಟೋ ಗ್ರಾಪರನ್ನು ಭೆಟ್ಟಿಯಾಗಿ ಆಹ್ವಾನಿಸುವುದು ಮೊದಲಾದ ಕೆಲಸಕಾರ್ಯಗಳಲ್ಲಿ ಚಿನ್ನಪ್ಪನಿಗೆ ಊಟಕ್ಕೂ ಬಿಡುವಿಲ್ಲವಾಯಿತು.

ಸಂಜೆ ಅಚ್ಚಾದ ಆಹ್ವಾನ ಪತ್ರಿಕೆಗಳನ್ನು ಕೈಯಲ್ಲಿ ಹಿಡಿದು ಸಾಹು ಕಾರರ ಭೆಟ್ಟಿಗೆ ಹೊರಟ. ಸಾಹುಕಾರರು ತಮ್ಮ ಅಂಗಡಿ, ಮನೆ ಎರಡು ಕಡೆ ಇರುವುದಿಲ್ಲವೆಂದು ಚಿನ್ನಪ್ಪನಿಗೆ ಗೊತ್ತಿದ್ದರೂ ಅಲ್ಲಿ ಅವರನ್ನು ಹುಡು ಕುವ ಶಾಸ್ತ್ರಮಾಡಿ ಭಾಗ್ಯಮ್ಮನ ಮನೆಯ ಕಡೆ ಹೊರಟ.

ತೊಟ್ಟಿಯಲ್ಲಿ ಸರೋಜನ ಜತೆ ಪಗಡೆಯಾಡುತ್ತಿದ್ದ ಸಾಹುಕಾರರು ಚಿನ್ನಪ್ಪನನ್ನು ಕಂಡ ಕೂಡಲೆ ಆಶ್ಚರ್ಯ ವ್ಯಕ್ತಪಡಿಸಿ

“ ಇದೇನು ಚಿನ್ನಪ್ಪ—ಬಂದೆ ? ” ಎಂದರು.

“ಅರ್ಜೆಂಟಾಗಿ ನೋಡಬೇಕಾಗಿತ್ತು ಅಣ್ಣಾವರೇ. ಅಂಗಡಿಗೆ ಹೋಗಿದ್ದೆ, ಮನೆ ಹತ್ತಿರದಲ್ಲೂ ಹೋಗಿದ್ದೆ. ಥಿಯೇಟರ್ ಕಡೆ ನೀವೂ ಬರಲಿಲ್ಲ. ಇಲ್ಲಿ

ಸಿಕ್ಕಬಹುದು ಎಂದುಕೊಂಡು ಬಂದೆ."

"ಬಾ—ಕುಂತುಕೋ—ಏನು ಸಮಾಚಾರ."

"ನಮ್ಮ ಸೇಠು ಒಂದು ಕೆಲಸ ಅಂಟಿಸಿದ್ದಾನೆ. ಕಲ್ಕತ್ತೆಯಿಂದ ಯಾರೋ ದೊಡ್ಡ ಫಿಲ್ಮು ಡೈರೆಕ್ಟರು ಬಂದಿದ್ದಾರಂತೆ. ಅವರಿಗೆ ಭಾನುವಾರ ಬೆಳಿಗ್ಗೆ ಪಾರ್ಟಿ ಇಟ್ಟುಕೊಂಡಿದ್ದಾನೆ."

"ಸಂತೋಷ—ಮಾಡಗಿಕೊಳ್ಳಲಿ."

"ಆದಿನ ಅಧ್ಯಕ್ಷತೆಗೆ ನಿಮ್ಮನ್ನು ಒಪ್ಪಿಸಬೇಕೆಂದು ಸೇಠನ ಹಟ.

ಚಿನ್ನಪ್ಪ ಹೇಳಿದ್ದು ಕೇಳಿ ಸಾಹುಕಾರರು ಹೌಹಾರಿ

"ನಾನಾ ಅದ್ಯಕ್ಸತೇಗೆ! ನಂಗ್ಯಾಕೆ ಚಿನ್ನಪ್ಪ ಈ ಪೀಕಲಾಟ." ಸಬೇಲಿ ನಾನು ಯಾವತ್ತೂ ಮಾತಾಡ್ದೋನೇ ಅಲ್ಲ. ಈರಬದ್ರಪ್ಪನವರನ್ನ ಕೇಳು—ಅವರಾದರೆ ಸರಿ ಓಗತ್ತೈತೆ."

"ನೀವು ಹೀಗೇ ಹಿಂದಲೇಟು ಹೊಡೆಯುತ್ತಿದ್ದರೆ ಆಗುತ್ತದೆಯೇ ಅಣ್ಣಾ. ನಾಳೆ ದೊಡ್ಡ ಪ್ರೊಡ್ಯೂಸರ್ (Producer) ಆಗುವವರು ಹತ್ತು ಜನಗಳ ಎದುರಿಗೆ ಯಾವಾಗಲೂ ಇರಬೇಕು."

"ನನ್ ಜನ್ಮದಾಗೆ ಅದ್ಯಕ್ಸತೆ ಮಾಡಿ ಅಭ್ಯಾಸ ಇಲ್ವಲ್ಲೋ ಚಿನ್ನಪ್ಪ. ಸಭೆ ಅಂದ್ರೆ ನನ್ನ ಕೈಕಾಲು ನಡುಗೋಕೆ ಸುರು ಮಾಡ್ತವೆ."

"ಏನೂ ಕಷ್ಟ ಇಲ್ಲ ಸಾಹುಕಾರರೇ. ನಿಮ್ಮ ಭಾಷಣ ಬರೆಸಿಕೊಡುತ್ತೇನೆ. ಅದನ್ನು ಓದಿಬಿಟ್ಟರೆ ಆಯಿತು."

ಭಾಗ್ಯಮ್ಮ ಮೆಲ್ಲನೆ ಪ್ರವೇಶಿಸಿ

"ತಾನಾಗಿ ಬಂದಿರುವ ಅವಕಾಶ ಏಕೆ ಬಿಟ್ಟುಬಿಡುತ್ತೀರಿ ಸಾಹುಕಾರರೇ. ನಿಮ್ಮನ್ನು ತುಂಬ ದೊಡ್ಡವರನ್ನಾಗಿ ಮಾಡಬೇಕೆಂದು ಚಿನ್ನಣ್ಣ ಪ್ರಯತ್ನಿಸುತ್ತಿರುವಾಗ ನೀವು ಅಡ್ಡಗಾಲು ಹಾಕುತ್ತೀರಿ"

ಎಂದಳು. ಸರೋಜ ತಾಯಿಯ ಮಾತು ಮುಂದುವರಿಸುವಂತೆ ಮಂದಹಾಸ ಬೀರುತ್ತ

"ಸಭೆಯಲ್ಲಿ ನೀವು ಹಾರಹಾಕಿಸಿಕೊಂಡು, ಮರ್ಯಾದೆ ಮಾಡಿಸಿಕೊಂಡು, ಭಾಷಣ ಮಾಡುವುದನ್ನು ನಾನು ನೋಡಬೇಡವೇ?"

ಎಂದು ಕೇಳಿದಳು. ರುದ್ರಪ್ಪನವರ ಮನಸ್ಸು ಅರ್ಧ ಒಪ್ಪಿಗೆ ಇತ್ತಿತು. ಆದರೆ ಅಧೈರ್ಯ ಅವರನ್ನು ಒಳಗೇ ಕಾಡುತ್ತಿತ್ತು.

"ಶಿವನ ಮೇಲೆ ಭಾರ ಹಾಕಿ 'ಹೂ' ಅನ್ನಿ ಅಣ್ಣಾ. ಎಲ್ಲಾ ವೈನವಾಗಿ ನಡೆದುಹೋಗುತ್ತದೆ."

"ಒಪ್ಪಿಕೊಂಡಿದ್ದಾರೆ. ಅವರ ಹೆಸರು ಹಾಕಿಸು ಚಿನ್ನಣ್ಣ"

ಎಂದು ಸರೋಜ ಹೇಳಿದಳು. ಚಿನ್ನಪ್ಪ ಅವಳ ಮಾತಿನ ಸಮರ್ಥನೆಗಾಗಿ ಸಾಹುಕಾರರ ಮುಖ ನೋಡಿದ.

"ಬ್ರಾಹ್ಮಣ ಪಾಟ ಮಾಡಿಸೋದು ನಿನ್ನ ಬಾರ ಚಿನ್ನಪ್ಪ."

"ಆಗಲಿ ಸಾಹುಕಾರರೇ, ಆ ಬಗ್ಗೆ ನೀವು ಯಾವ ಅನುಮಾನವೂ ಇಟ್ಟುಕೊಳ್ಳಬೇಡಿ. ಇನ್ನೊಂದು ವಿಷಯ— ಅಂದು ನಮ್ಮ ಸರೋಜಮ್ಮ ನಾಲ್ಕು ಹಾಡು ಹೇಳಿದರೆ ಉತ್ಸವ ಕಳೆಗಟ್ಟುತ್ತದೆ."

"ಅಯ್ಯೋ! ಅವಳು ಬೇಡಪ್ಪ, ಬೇರೆ ಯಾರನ್ನಾದರೂ ಗೊತ್ತು ಮಾಡು"

ಎಂದು ಭಾಗ್ಯಮ್ಮ ಹೇಳಿದಳು.

"ನನಗೆ ಭಯವಾಗತ್ತಪ್ಪಾ—ನಾನು ಹಾಡುವುದಿಲ್ಲ"

ಎಂದು ಸರೋಜ ಹೇಳಿದಳು.

ಸಾಹುಕಾರರು ಸರೋಜನ ಕಡೆ ತಿರುಗಿ

"ನನ್ನ ಮಾತ್ರ ಒಪ್ಪಿಸಿ ನೀನು ಹಿಂದಲೇಟು ಹೊಡೀತೀಯಾ? ಇದ್ಯಾವ ನ್ಯಾಯ. ಸರೋಜನ ಎಸರು ಆಕ್ಸು ಚಿನ್ನಪ್ಪ, ಅವಳು ಆಡ್ತಾಳೆ."

ಸರೋಜ ಬಲವಂತಕ್ಕೆ ಒಪ್ಪಿಕೊಂಡಂತೆ ತೋರಿಸಿಕೊಂಡಳು.

ಸಾಹುಕಾರರು ಚಿನ್ನಪ್ಪನ ಕಡೆ ತಿರುಗಿ

"ಇವನು ಯಾರ್ಲ್ಲೀ—ಈ ಕಲ್ಕತ್ತಾ ಪಿಲಂ ಡೈರೆಕ್ಟರು."

ಅವರು ಬಹಳ ದೊಡ್ಡವರು ಸಾಹುಕಾರರೇ – ದೇವಕಿ ಬೋಸ್, ನಿತಿನ್‌ಬೋಸ್, ಹೇಮಚಂದ್ರ, ಮಧು ಬಾನರ್ಜಿ ಇವರ ಜತೆಯಲ್ಲಿ ಕೆಲಸ ಮಾಡಿದ್ದಾರೆ. ಫಿಲಂನೋರೆಲ್ಲಾ ಅವರಿಗೆ ಕೈಯೆತ್ತಿ ಮುಗೀತಾರೆ."

"ಅಂಗಾ! ಅಂಗಾಪ್ರೆ ಅವನನ್ನೇ ನಮ್ಮ ಪಿಕ್ಚರಿಗೆ ಎಳೆದರೆ!"

"ಅದನ್ನು ಮನಸ್ಸಿನಲ್ಲಿಟ್ಟುಕೊಂಡೇ ನಾನು ಸೇಠನ ಪಾರ್ಟಿಗೆ ದುಡಿಯೋಕೆ ಒಪ್ಪಿಕೊಂಡು, ನಿಮ್ಮನ್ನೇ ಅಧ್ಯಕ್ಷರನ್ನಾಗಿ ಮಾಡಬೇಕೆಂದು ಪ್ರಯತ್ನಪಟ್ಟಿದ್ದು."

ಸಾಹುಕಾರರು ಚಿನ್ನಪ್ಪನನ್ನು ಅಭಿಮಾನದಿಂದ ನೋಡಿ

"ನೀನು ಒಳ್ಳೆ ಕಿಲಾಡಿ ಕಣ್ಲೇ ಚಿನ್ನಪ್ಪ"

ಎಂದರು.

ಚಿನ್ನಪ್ಪ ತೃಪ್ತನಾಗಿ ಹೊರಟುಹೋದ ಮೇಲೆ ಸಾಹುಕಾರರು

"ಚಿನ್ನಪ್ಪ ಚಿನ್ನದಂತಾ ಆಸಾಮಿ. ದಣೀ ಕೆಲಸ ಮಾಡೋದ್ರಲ್ಲಿ ಹನುಮಪ್ಪನನ್ನೂ ಇಂದಕ್ಕೆ ಹಾಕ್ತಾನೆ"

ಎಂದರು. ಭಾಗ್ಯಮ್ಮ ಪಕ್ಕಕ್ಕೆ ತಿರುಗಿಕೊಂಡು ಮೂತಿ ಸೊಟ್ಟ ಮಾಡಿದುದನ್ನು ಸಾಹುಕಾರರು ನೋಡಲಿಲ್ಲ.

೮

ಶುಕ್ರವಾರ ಮಧ್ಯಾನ್ಹ ಮೈಸೂರಿನಲ್ಲಿ ಶಿವಾನಂದ, ಭೂಪೆನ್ ಬಾಬು ಇಳಿದೊಡನೆಯೇ 'ಮಾಡರ್ನ್ ಕೆಫೆ'ಗೆ ಹೋಗಿ ಅಲ್ಲಿ ಬೀಡುಬಿಟ್ಟರು. ಸ್ನಾನ, ಊಟ ಮುಗಿದ ಮೇಲೆ ಶಿವಾನಂದ ಸ್ಟೂಡಿಯೋಗೆ ಫೋನ್ ಮಾಡಿ ತಾವು ಎರಡು ಗಂಟೆಗೆ ಬರುವುದಾಗಿ ತಿಳಿಸಿದ. ಭೂಪೆನ್ ಕೇಳಿದರು

"ಸ್ಟೂಡಿಯೋ ಕೆಲಸ ಮುಗಿಸಿಕೊಂಡು ನಾವು ಕೃಷ್ಣರಾಜ ಸಾಗರಕ್ಕೆ ಹೋಗಿಬರುವುದಕ್ಕಾಗುತ್ತದೆಯೇ?"

"ಆಗುತ್ತದೆ. ಆದರೆ ರಾತ್ರಿ ರೈಲು ಸಿಕ್ಕಲಾರದು."

"ಇಲ್ಲಿಂದ ಬೆಳಿಗ್ಗೆ ಹೊರಡೋಣ."

"ಚಿನ್ನಪ್ಪ ನಮ್ಮ ದಾರಿ ನೋಡುತ್ತಿರುತ್ತಾರೆ."

"ಸಾಗರ ನೋಡಿಬಿಟ್ಟರೆ ನಮ್ಮ ಕೆಲಸಕ್ಕೂ ಅನುಕೂಲವಾಗುತ್ತದೆ. ನಿಮ್ಮ ಬೃಂದಾವನ ಗಾರ್ಡನ್ಸ್ ವಿಷಯ ಬಹಳ ಕೇಳಿದ್ದೇನೆ. ಔಟ್ ಡೋರ್ ಷೂಟಿಂಗ್ (Out-door Shooting) ಇಲ್ಲೇ ಏಕೆ ಮಾಡಬಾರದು ಎಂದು ಯೋಚಿಸುತ್ತಿದ್ದೇನೆ."

"ಹಾಗಾದರೆ ನೀವು ಬೃಂದಾವನ ನೋಡಿರುವುದು ಒಳ್ಳೆಯದು."

ಹೋಟೆಲಿನವರು ಒದಗಿಸಿದ ಟ್ಯಾಕ್ಸಿಯಲ್ಲಿ ಶಿವಾನಂದ, ಭೂಪೆನ್ ಬಾಬು ಸ್ಟೂಡಿಯೋಕ್ಕೆ ಬಂದರು. ಸ್ಟೂಡಿಯೋದ ಮ್ಯಾನೇಜಿಂಗ್ ಡೈರೆಕ್ಟರು ಅವರಿಗೆ ಎಲ್ಲಾ ವಿಭಾಗಗಳನ್ನೂ ತೋರಿಸಿ, ಸ್ಟೂಡಿಯೋದಲ್ಲಿ ತಯಾರಾದ ಚಿತ್ರಗಳನ್ನು ತೋರಿಸಲು ಪ್ರೊಜೆಕ್ಷನ್ ರೂಮಿಗೆ ಕರದೊಯ್ದರು.

ಪ್ರೊಜೆಕ್ಷನ್ ರೂಮಿಗೆ ಹೋಗುತ್ತಿರುವಂತೆ ಶಿವಾನಂದನಿಗೆ ಪದ್ಮರಾಜು ಭೆಟ್ಟಿಯಾದ. ಅವನೇ ಶಿವಾನಂದನ ಬಳಿಗೆ ಬಂದು ಕೈಮುಗಿದು

"ಇದೇನು ಸ್ವಾಮಿ ಇಲ್ಲಿ?"

ಎಂದು ಕೇಳಿದ.

ಶಿವಾನಂದನಿಗೆ ಪದ್ಮರಾಜು ಗುರುತು ಸಿಕ್ಕಲಿಲ್ಲ. ಅವನು ಕಕ್ಕಾಬಿಕ್ಕಿಯಾದುದನ್ನು ಕಂಡು ಪದ್ಮರಾಜು

" ನನ್ನ ಗುರುತು ನಿಮಗೆ ಮರೆತುಹೋಗಿದೆ. "

" ಹೂ ! ಆದರೆ ಎಲ್ಲಿಯೋ ನೋಡಿದ ನೆನಪು."

" ಬೆಂಗಳೂರಿನಲ್ಲಿ ನಿಮ್ಮ ಕಾಲೇಜು ನಾಟಕಗಳಿಗೆ ನಾನು ಮೇಕಪ್ (Make-up) ಮಾಡುವುದಕ್ಕೆ ಬರುತ್ತಿರಲಿಲ್ಲವೇ ಸ್ವಾಮಿ."

" ಪದ್ಮರಾಜು ಅಲ್ಲವೇ ನೀವು ! ಇದೇನು ಇಲ್ಲಿರುವಿರಿ ? "

" ಇಲ್ಲೇ ಚಿಲ್ಲರೆ ಪಾರ್ಟು ಮಾಡಿಕೊಂಡಿದ್ದೇನೆ. ಫಿಲ್ಮ್ ಪತ್ರಿಕೆಗಳಿಗೆ ಸ್ಟೂಡಿಯೋ ಸುದ್ದಿ ಕಳಿಸುತ್ತಿರುತ್ತೇನೆ. ನಿಮ್ಮ ಜತೆ ಬಂದಿರುವವರು ಯಾರು ಸ್ವಾಮಿ."

ಕಲ್ಕತ್ತೆಯಿಂದ ಬಂದಿದ್ದಾರೆ. ದೊಡ್ಡ ಡೈರೆಕ್ಟರು."

" ಹೆಸರು ? "

" ಭೂಪೆನ್ ಬಾನರ್ಜಿ."

" ನ್ಯೂ ಥಿಯೇಟರ್ಸಿನಲ್ಲಿ ಅಸಿಸ್ಟೆಂಟ್ ಡೈರೆಕ್ಟರಾಗಿದ್ದವರು."

" ಹೌದು."

" ಇಲ್ಲಿ ಪಿಕ್ಚರ್ ಮಾಡುವುದಕ್ಕೆ ಬಂದಿದ್ದಾರೇನು ? "

" ಹೂ ! ನಿಮ್ಮ ಅಭಿಪ್ರಾಯವೇನು ? "

" ಅದನ್ನು ಇಲ್ಲಿ ಹೇಗೆ ಹೇಳಲಿ ? ನೀವು ಎಲ್ಲಿ ಇಳಿದುಕೊಂಡಿದ್ದೀರಿ ತಿಳಿಸಿದರೆ ಬಂದು ಮಾತನಾಡುತ್ತೇನೆ."

" ಮಾಡರ್ನ್ ಕೆಫೆಯಲ್ಲಿದ್ದೇವೆ. ಆದರೆ ನಿಮಗೆ ನಾವು ಸಿಕ್ಕುವುದು ಹೇಗೆ ? ಈಗ ನಾವು ಬೃಂದಾವನಕ್ಕೆ ಹೋಗುತ್ತೇವೆ."

ಎಂದು ಹೇಳುತ್ತಿರುವಂತೆ ಪದ್ಮರಾಜು ಕರೆದುಕೊಂಡು ಹೋಗಿ ಸ್ಟೂಡಿಯೋ ನಿಜಸ್ಥಿತಿಯನ್ನರಿಯುವುದು ಒಳ್ಳೆಯದೆಂದು ಶಿವಾನಂದನಿಗನಿಸಿತು.

" ನಮ್ಮ ಜತೆ ಬೃಂದಾವನಕ್ಕೆ ಬರುತ್ತೀರೇನು ?"

" ಬರುತ್ತೇನೆ."

" ನೀವು ಇಲ್ಲಿಯೇ ಇರಿ. ಪ್ರೊಜೆಕ್ಷನ್ ಮುಗಿಸಿಕೊಂಡು ನಾವು ಬರುತ್ತೇವೆ."

" ಹಾಗೆ ಬೇಡಿ. ಇಲ್ಲಿಂದ ನಾವು ಜತೆಯಾಗಿ ಹೋಗುವುದು ಬೇಡ. ನಾನು ನಿಮಗೆ 'ಮಾಡರ್ನ್ ಕೆಫೆ' ಬಳಿ ಕಾದಿರುತ್ತೇನೆ. ಅಲ್ಲಿಗೆ ನೀವು ಬಂದು

ನನ್ನನ್ನು ಕರೆದುಕೊಂಡು ಹೋಗಿ."

ಪದ್ಮರಾಜು ಸಲಹೆ ಅಂಗೀಕರಿಸಿ, ಶಿವಾನಂದ ಪ್ರೊಜೆಕ್ಷನ್ ರೂಮ್ ಒಳಹೊಕ್ಕು ತನ್ನ ಗೆಳೆಯನ ಜತೆ ಕುಳಿತ.

ಪ್ರೊಜೆಕ್ಷನ್ ಮುಗಿದ ಮೇಲೆ ಮ್ಯಾನೇಜಿಂಗ್ ಡೈರೆಕ್ಟರು ಆಫೀಸಿಗೆ ಅತಿಥಿಗಳನ್ನು ಕರೆದುಕೊಂಡು ಬಂದು ಕಾಫಿ ಕೊಡಿಸಿದರು. ಭೂಪೆನ್ ಅವರನ್ನು ಕೇಳಿದರು

" ದಿವಸಕ್ಕೆ ನೀವು ಎಷ್ಟು ಚಾರ್ಜು (charge) ಮಾಡುತ್ತೀರಿ ? "

" ಏಳುನೂರೈವತ್ತು ರೂಪಾಯಿ. ನಿಮಗೆ ಇನ್ನೂ ರಿಯಾಯಿತಿ ತೋರಿಸುವುದಕ್ಕೆ ಸಿದ್ಧರಾಗಿದ್ದೇವೆ."

" ನಿಮ್ಮ ಫ್ಲೋರ್ (floor) ಚಹಳ ಸಣ್ಣದಾಗಿದೆಯಲ್ಲಾ. ದೊಡ್ಡ ದೃಶ್ಯಗಳನ್ನು ತೆಗೆದುಕೊಳ್ಳುವುದೇ ಸಾಧ್ಯವಿಲ್ಲ."

" ನೀವು ಇಲ್ಲಿ ಬಂದು ಪಿಕ್ಚರ್ ತೆಗೆಯುವುದು ನಿಶ್ಚಯವಾದರೆ ನಾನು ಫ್ಲೋರಿನ ಮುಂದಿನ ಗೋಡೆ ಒಡಸಿ ಇನ್ನೂ ಇಪ್ಪತ್ತಡಿ ವಿಸ್ತರಿಸಿ ಕೊಡುತ್ತೇನೆ. ನಿಮಗೆ ಇನ್ನೂ ಏನೇನು ಸೌಕರ್ಯ ಸೌಲಭ್ಯಗಳು ಬೇಕೋ ಒದಗಿಸಲು ಸಿದ್ಧನಾಗಿದ್ದೇನೆ. ನಿಮ್ಮಂಥ ದೊಡ್ಡವರು ನಮ್ಮ ಸ್ಟೂಡಿಯೋಕ್ಕೆ ಬರಬೇಕೆಂಬುದೇ ನಮ್ಮ ಮುಖ್ಯ ಉದ್ದೇಶ."

" ಆಗಲಿ—ವಿಚಾರ ಮಾಡಿ ತಿಳಿಸುತ್ತೇನೆ."

ಎಂದು ಹೇಳಿ ಅವರಿಂದ ಕಾಂಟ್ರ್ಯಾಕ್ಟ್ ಫಾರ್ಮ್ (contract form) ತೆಗೆದುಕೊಂಡರು.

ದಾರಿಯಲ್ಲಿ ಬರುವಾಗ ಶಿವಾನಂದ ಮೆಲ್ಲನೆ ಕೇಳಿದ

" ಸ್ಟೂಡಿಯೋ ಏನನ್ನಿಸುತ್ತದೆ. ಭೂಪೆನ್ ಬಾಬು ? "

" ಅಡ್ಡಿಯಿಲ್ಲ. ಸ್ವಲ್ಪ ಸುಧಾರಣೆ ಮಾಡಿಕೊಂಡರೆ ಚಿತ್ರ ತೆಗೆಯಬಹುದು. ಕೆಲಸಗಾರರು ಚೆನ್ನಾಗಿದ್ದರೆ ಸ್ಟೂಡಿಯೋ ಎಂಥದಾದರೇನು ? ಜನವೂ ತುಂಬ ಒಳ್ಳೆಯವರ ಹಾಗೆ ಕಾಣುತ್ತಾರೆ."

" ಸ್ಟೂಡಿಯೋ ನಿಜಸ್ಥಿತಿ ತಿಳಿಸುವುದಕ್ಕೆ ನಾನು ಒಬ್ಬರನ್ನು ಬರಮಾಡಿದ್ದೇನೆ ಅವರು ಹೇಳುವುದನ್ನು ಕೇಳಿ ನಿರ್ಧರಿಸಿ "

ಎಂದು ಶಿವಾನಂದ ಹೇಳಿದ.

ಟ್ಯಾಕ್ಸಿ 'ಮಾಡರ್ನ್ ಕೆಫೆ' ಬಳಿಗೆ ಹೋಗಿ, ಅಲ್ಲಿ ಕಾದಿದ್ದ ಪದ್ಮರಾಜುವನ್ನು ಕೂಡಿಸಿಕೊಂಡು ಮುಂದೆ ಕೃಷ್ಣರಾಜ ಸಾಗರದ ಕಡೆಗೆ ಹೊರಟಿತು.

" ನೀವು ಮೈಸೂರಿಗೆ ಬಂದು ಎಷ್ಟು ದಿವಸವಾಯ್ತು ಪದ್ಮರಾಜು."

" ಒಂದು ವರ್ಷದ ಮೇಲೆ ಆಯಿತು."

"ಯಾವದಾದರೂ ಫಿಲ್ಮ್ ಚಾನ್ಸ್ (film chance) ಸಿಕ್ಕಿತೇನು?"

" ಇಲ್ಲಿ ತಯಾರಾದ ಅನೇಕ ಚಿತ್ರಗಳಲ್ಲಿ ಚಾನ್ಸ್ ಸಿಕ್ಕಿತು – ದುಡ್ಡು ಮಾತ್ರ ಸಿಕ್ಕಲಿಲ್ಲ."

" ಹಾಗಂದರೇನ್ರೀ ?"

" ಇಲ್ಲಿಯ ಕಥೆ ಏನು ಹೇಳುತ್ತೀರಿ ಸ್ವಾಮಿ. ಕೈಯಲ್ಲಿ ಹತ್ತಿಪ್ಪತ್ತು ಸಾವಿರ ರೂಪಾಯಿ ಇಟ್ಟುಕೊಂಡಿರುವವರೆಲ್ಲಾ ಪ್ರೊಡ್ಯೂಸರ್ರೇ! (Producers) ಅವರ ಮಾತು, ಠೋರಣೆ ನೋಡಿಬಿಟ್ಟರೆ ಅವರೆಲ್ಲಾ ಹಾಲಿವುಡ್ಡಿನಿಂದ ನೇರವಾಗಿ ಬಂದಿದ್ದಾರೆಯೋ ಎಂದು ಭಾಸವಾಗುತ್ತದೆ. ಹ್ಯಾಗೂ ಹೀಗೂ ಪಿಕ್ಚರೂ ಮುಗಿಸಿಕೊಳ್ಳುತ್ತಾರೆ, ದುಡ್ಡೂ ಮಾಡಿಕೊಳ್ಳುತ್ತಾರೆ. ಇವರನ್ನು ನಂಬಿದ ನಾವು ಕೆಟ್ಟೆವು."

" ಪ್ರೊಡ್ಯೂಸರ್ಸ್ ವಿಷಯ ಹೋಗಲಿ–ಸ್ಟೂಡಿಯೋದಲ್ಲಿ ಸರಿಯಾಗಿ ಕೆಲಸವಾಗುತ್ತದೆಯೇ ?"

" ಕೆಲಸ ಮಾಡಿಸಿಕೊಳ್ಳುವವರ ಶಕ್ತಿಯ ಮೇಲೆ ಅವಲಂಬಿಸುತ್ತದೆ ಸ್ವಾಮಿ."

ಎಂದು ಪದ್ಮರಾಜು ಮೈಸೂರಿನ ಹಲವು ನಿರ್ಮಾಪಕರ, ನಟನಟಿಯರ, ದಿಗ್ದರ್ಶಕರ ಕಥೆಗಳನ್ನು ಕೂಲಂಕಷವಾಗಿ ನಿರೂಪಿಸಿದ.

ಪದ್ಮರಾಜು ವರ್ಣನೆಯಿಂದ ಗಾಬರಿಗೊಂಡ ಶಿವಾನಂದ

" ಮದರಾಸಿಗೆ ಹೋಗುವುದೇ ಒಳ್ಳೆಯದೆಂದು ಕಾಣುತ್ತದೆ ಭೂಪೇನ್ ಬಾಬು. ಇಲ್ಲಿಗೆ ನಾವು ಬಂದರೆ ಜನ ನಮ್ಮನ್ನು ಪೊಳ್ಳುಮಾಡಿ ಬಿಡುತ್ತಾರೆ."

ಎಂದ. ಪದ್ಮರಾಜು ಸಮಯ ನೋಡಿಕೊಂಡು

" ನಿಮ್ಮ ಪಿಕ್ಚರಿನಲ್ಲಿ ನನಗೂ ಒಂದು ಸ್ಥಳ ಕೊಡಿ ಸ್ವಾಮಿ." ಎಂದು ಕೇಳಿದ.

" ಆ ವಿಷಯವೆಲ್ಲಾ ನಮ್ಮ ಮ್ಯಾನೇಜರ್ ಚಿನ್ನಪ್ಪನವರ ಕೈಯಲ್ಲಿದೆ. ನೀವು ಅವರನ್ನು ಕಂಡು ಮಾತನಾಡಿ."

" ಮಾತನಾಡುತ್ತೇನೆ. ನೀವೂ ಒಂದು ಮಾತು ಹೇಳಿದರೆ ಉಪಕಾರ ವಾಗುತ್ತದೆ "

ಎಂದು ಪ್ರಾರ್ಥಿಸಿಕೊಂಡ.

ಬೃಂದಾವನದ ದಿವ್ಯ ಸೌಂದರ್ಯವನ್ನು ನೋಡಿ ಭೂಪೇನ್ ಬಾಬು ಅವಾಕ್ಕಾದರು. ತೋಟದ ನಿಯೋಜನೆ, ಕಾರಂಜಿಗಳ ರಚನೆ, ದೀಪಗಳನ್ನು

ಪಯೋಗಿಸಿಕೊಂಡಿರುವ ರೀತಿಯನ್ನು ಕಂಡು

"ಭಾರತವಲ್ಲಿಯೇ ಇಂಥ ತೋಟ ಇಲ್ಲ ಶಿವಾನಂದ್. ನಮ್ಮ ಔಟ್ ಡೋರ್ ದೃಶ್ಯಗಳನ್ನೆಲ್ಲಾ ಇಲ್ಲಿಯೇ ತೆಗೆಯಬೇಕು. ಈ ತೊಟವೊಂದರ ನೆರವಿನಿಂದಲೇ ನನ್ನ ಚಿತ್ರವನ್ನು ಅಂತರ–ರಾಷ್ಟ್ರೀಯ ಚಿತ್ರವನ್ನಾಗಿ ಮಾಡಬಲ್ಲೆ."

ಎಂದರು.

ಬಾಬುಗಳು ತೋಟದಲ್ಲಿ ತಲ್ಲೀನರಾದುವನ್ನು ಕಂಡು ಶಿವಾನಂದನಿಗೆ ಸಂತೋಷವಾಯಿತು. ಅವರನ್ನು ಸೌಂದರ್ಯ ಸಮಾಧಿಯಿಂದ ಬಹಿರ್ಮುಖ ರನ್ನಾಗಿ ಹೊಟೇಲಿಗೆ ಕರೆತರಬೇಕಾದರೆ ರಾತ್ರಿ ಹನ್ನೆರಡು ಹೊಡೆದಿತ್ತು.

ಮಾರನೆಯ ಬೆಳಿಗ್ಗೆ ಶಿವಾನಂದ, ಭೂಪೆನ್ ಬಾಬು ಬೆಂಗಳೂರಿಗೆ ಪ್ರಯಾಣ ಬೆಳೆಸಿದರು.

೯

ಚಿನ್ನಪ್ಪ ಶನಿವಾರ ಮಧ್ಯಾಹ್ನ ಮೈಸೂರು ರೈಲು ಬರುವವೇಳೆಗೆ ಸ್ಟೇಷನ್ನಿಗೆ ಹೋಗಿ ಶಿವಾನಂದನನ್ನೂ ಭೂಪೆನ್ ಬಾಬುಗಳನ್ನೂ ಎದುರು ಗೊಂಡು ತನ್ನ ಆಫೀಸಿಗೆ ನೇರವಾಗಿ ಕರೆದುಕೊಂಡು ಬಂದ.

ಆಫೀಸಿನಲ್ಲಿ ಚಿನ್ನಪ್ಪ ಅವರಿಬ್ಬರ ಕೈಗೂ ಒಂದೊಂದು ಆಹ್ವಾನ ಪತ್ರಕೊಟ್ಟು ಅವರ ಮುಖ ನೋಡುತ್ತ ಕುಳಿತ. ತಮ್ಮ ಹೆಸರಿಗೆ ಚಿನ್ನಪ್ಪ ಹಚ್ಚಿದ್ದ 'ಬಂಗಾಳದ ಶ್ರೇಷ್ಠ ಚಿತ್ರ ದಿಗ್ದರ್ಶಕರು' (Ace Film Director of Bengal) ವಿಶೇಷಣ ನೋಡಿ ಬಾಬುಗಳ ಮುಖದಲ್ಲಿ ತೃಪ್ತಿಯ ನಗೆ ತೇಲಿತು.

ಶಿವಾನಂದ ವಿವರವಾದ ಕಾರ್ಯಕ್ರಮ ನೋಡಿ

"ಎಷ್ಟು ಕೆಲಸ ಮಾಡಿದ್ದೀರಿ ಚಿನ್ನಪ್ಪನವರೇ. ನೀವು ಅಸಾಧ್ಯರಪ್ಪಾ. ಸಾಹುಕಾರರನ್ನು ಅಧ್ಯಕ್ಷರನ್ನಾಗಿ ಮಾಡಿದ್ದು ಇದೆಯಲ್ಲಾ ಇಂಗ್ಲೀಷಿನಲ್ಲಿ ಹೇಳುವ ಹಾಗೆ – a stroke of genius."

"ಅದಿರಲಿ ಸಂಗೀತ ಯಾರದು ನೋಡಿ ಸ್ವಾಮಿ.

"ನೋಡಿದೆ. ಸಾಹುಕಾರರು ಕಮಕ್ ಕಿಮಕ್ ಅನ್ನುವ ಹಾಗಿಲ್ಲ."

"ಸಾಹುಕಾರರ ವಿಷಯವೆಲ್ಲಾ ನಿಮಗೆ ಗೊತ್ತೇ ಇದೆಯಲ್ಲಾ. ಆ ರಾಣಿ ತೃಪ್ತ್ಯರ್ಥವಾಗಿಯೇ ಅವರು ಪಿಕ್ಚರ್ ಮಾಡುವುದಕ್ಕೆ ಸಮ್ಮತಿಸಿರುವುದು.

ನಿಮ್ಮ ಡೈರೆಕ್ಟರ್ ಸಾಹೇಬರಿಗೆ ಈ ವಿಷಯ ಸೂಕ್ಷ್ಮವಾಗಿ ತಿಳಿಸಿ. ನಾಳೆ ಪಾರ್ಟಿಯಲ್ಲಿ ಅವರು ಮಾತನಾಡುವಾಗ ಸಾಹುಕಾರರು, ಸರೋಜ ಇಬ್ಬರನ್ನು ಕುರಿತೂ ನಾಲ್ಕು ಒಳ್ಳೆಯ ಮಾತಾಡಿದರೆ ವ್ಯಾಪಾರ ಗಿಟ್ಟುತ್ತದೆ. ಇನ್ನೊಂದು ವಿಷಯ—ನೀವು ಸ್ನಾನ, ಊಟ ಮುಗಿಸಿಕೊಂಡು ಸಾಹುಕಾರರಿಗೆ ಒಂದು ಭಾಷಣ ಬರೆದುಕೊಡಿ. ಅವರು ಅದನ್ನು ನಾಲ್ಕಾರು ಸಾರಿ ಪಾಠ ಮಾಡಿ ಕೊಳ್ಳಬೇಕಾಗುತ್ತದೆ."

"ಆಗಬಹುದು."

"ನೀವು ಹೋದ ಕೆಲಸವೇನಾಯಿತು?"

"ಮದರಾಸಿನ ವಿಷಯವೆಲ್ಲಾ ಬರೆದು ತಿಳಿಸಿದ್ದೆನಲ್ಲಾ. ಮೈಸೂರಿನ ವಿಷಯ ನಿಮ್ಮ ನಿರ್ಧಾರಕ್ಕೇ ನಾವೂ ಬಂದೆವು. ಮದರಾಸಿನಲ್ಲಿ ಪಿಕ್ಚರ್ ತೆಗೆಯುವುದೇ ಸರಿಯೆಂದು ತೋರುತ್ತದೆ."

"ಆ ವಿಷಯ ನಾನು ಯಾವಾಗಲೋ ನಿರ್ಧರಿಸಿದ್ದೆ. ನಾಳೆ ಪಾರ್ಟಿ ಮುಗಿದುಹೋಗಲಿ—ಎಲ್ಲರೂ ಕುಳಿತುಕೊಂಡು ಮಾತನಾಡಿ ಒಂದು ನಿರ್ಧಾರಕ್ಕೆ ಬರೋಣ. ಆ ಮಧ್ಯೆ ನೀವೂ ಡೈರೆಕ್ಟರೂ ಕಥೆ ವಿಷಯ ಯೋಚನೆ ಮಾಡಿ.

ಎಂದು ಹೇಳಿದ.

ಭೂಪೇನ್ ಬಾಬುಗಳನ್ನು ಹೋಟೇಲಿಗೆ ಕಳುಹಿಸಿಕೊಟ್ಟು ಶಿವಾನಂದ ಮನೆಗೆ ಹೋದ. ಮಧ್ಯಾಹ್ನವೆಲ್ಲಾ ಅವನಿಗೆ ಸಾಹುಕಾರ ರುದ್ರಪ್ಪನವರ ಭಾಷಣ ಸಿದ್ಧಮಾಡುವುದೇ ಆಗಿಹೋಯಿತು. ಶಿವಾನಂದ ಆ ವಿಷಯದಲ್ಲಿ ತಜ್ಞನಲ್ಲದಿದ್ದರೂ ತಜ್ಞತೆಯನ್ನು ಈಗ ತೋರಿಸಿಕೊಳ್ಳಬೇಕಾಗಿತ್ತು.

ಅಂತೂ ಇಂತೂ ನಾಲ್ಕು ಗಂಟೆ ವೇಳೆಗೆ ಭಾಷಣ ಬರೆದು ಮುಗಿಸಿ ಅದನ್ನು ಕೂಡಲೆ ಒಯ್ದು ಚಿನ್ನಪ್ಪನ ಕೈಯಲ್ಲಿಟ್ಟು ತಾನು ಭೂಪೇನ್ ಬಾಬುಗಳ ದರ್ಶನಕ್ಕೆ ಹೋದ. ಬಾಬುಗಳೂ ಶಿವಾನಂದನ ನಿರೀಕ್ಷಣೆಯಲ್ಲಿಯೇ ಇದ್ದರು.

ಉಪಹಾರೋಪಚಾರ ಮುಗಿದ ಮೇಲೆ ಬಾಬುಗಳು

" ಈ ಪ್ರಯತ್ನ ಸಫಲವಾಗುತ್ತದೆಯೇ ಆನಂದ್ ಬಾಬು "

ಎಂದು ಕೇಳಿದರು. ಭೂಪೇನ್ ಬಾಬುಗಳ ಪ್ರಶ್ನೆ ಶಿವಾನಂದನಿಗೆ ವಿಚಿತ್ರವೆನಿಸಿತು. ಇನ್ನು ಮುವತ್ತೆರಡು ಗಂಟೆಗಳಲ್ಲಿ ಕಾಂಟ್ರ್ಯಾಕ್ಟ್ ಸಹಿಯಾಗುವಾಗ ಭೂಪೇನ್ ಬಾಬುಗಳು ಇದ್ದಕ್ಕಿದ್ದಂತೆ ಏಕೆ ಅಧೀರರಾದರೆಂಬುದು ಶಿವಾನಂದನಿಗೆ ಹೊಳೆಯಲಿಲ್ಲ.

"ಪ್ರಯತ್ನ ವಿಫಲವಾಗುವ ಯಾವ ಚಿಹ್ನೆಯಾದರೂ ನಿಮಗೆ ಕಂಡು ಬಂದಿದೆಯೇ? ನಾವು ಆರಂಭಿಸಿದ ಗಳಿಗೆಯಿಂದ ಈ ವರೆಗೆ ಕೆಲಸ ಕಾರ್ಯ ಗಳು ಎಷ್ಟು ಸುಸೂತ್ರವಾಗಿ ನಡೆದಿವೆ ನೋಡಿ. ನಾಳೆ ಪಾರ್ಟಿ ಮುಗಿದರೆ ಒಂದು ಘಟ್ಟ ಕಳೆಯಿತು."

"ಶ್ರೀಮಂತರ ಸಮಾಚಾರ. ಅದೂ ಅಲ್ಲದೆ ನಿಮ್ಮ ಸಾಹುಕಾರರು ಇದುವರೆಗೆ ಫಿಲ್ಮ್ ವ್ಯವಸಾಯಕ್ಕೆ ಕೈ ಹಾಕಿದವರಲ್ಲ. ಅವರು ಮನಸ್ಸು ಬದಲಾಯಿಸಿಯಾರೇನೋ ಎಂದು ಅನುಮಾನಪಡುತ್ತಿದ್ದೇನೆ."

"ಅದಕ್ಕೆ ಕಾರಣವೇ ಇಲ್ಲ ಬಾಬು. ಸಾಹುಕಾರರನ್ನು ಚಿತ್ರರಂಗಕ್ಕೆ ಇಳಿಸುತ್ತಿರುವ ಮಹಾಶಕ್ತಿಯೇ ಬೇರೆ ಇದೆ. ಅದನ್ನೇ ಸೂಚಿಸೆಂದು ಆಗಲೆ ಚಿನ್ನಪ್ಪನವರು ಹೇಳಿದ್ದು."

"ಅದೇನು – ನಾನು ಕೇಳಬಹುದೇ?"

"ನೀವು ತಿಳಿದುಕೊಂಡೇ ಇರಬೇಕು. ನಮ್ಮ ಸಾಹುಕಾರರಿಗೆ ದ್ವಿತೀಯ ಸಂಸಾರವೊಂದಿದೆ. ಅವರ ನಾಟಕದ ಕಂಪೆನಿ ಇದ್ದಾಗ ಆಕೆ ರಾಣಿ ಪಾರ್ಟು ಮಾಡುತ್ತಿದ್ದಳು. ಈಗ ನಿರುದ್ಯೋಗಿಯಾಗಿ ಮನೆಯಲ್ಲಿ ಕುಳಿತಿದ್ದಾಳೆ. ಅವಳಿಗೊಂದು ವೃತ್ತಿ ಕಲ್ಪಿಸಿಕೊಡಬೇಕೆಂದು ಸಾಹುಕಾರರು ಚಿತ್ರನಿರ್ಮಾ ಣಕ್ಕೆ ಹೊರಟಿದ್ದಾರೆ. ನಿಮ್ಮ ಮತ್ತು ನನ್ನ ಭವಿಷ್ಯವೆಲ್ಲಾ ಆಕೆಯ ಅಭ್ಯು ದಯವನ್ನವಲಂಬಿಸಿದೆ."

"ಈ ದಾರಿಯಲ್ಲಿ ಹೊರಟರೆ ನಮ್ಮ ಚಿತ್ರದ ಗತಿ! ಆಕೆಯ ರೂಪ ಹೇಗಿದೆಯೋ – ಧ್ವನಿ ಹೇಗಿದೆಯೋ? ನನ್ನ ಮೊದಲನೆಯ ಸ್ವತಂತ್ರ ಚಿತ್ರವೇ ಕೆಟ್ಟುಹೋದರೆ ನನ್ನ ಭವಿಷ್ಯವೇ ಹಾಳಾಗಿ ಹೋಗುತ್ತದೆ."

"ಆ ಬಗ್ಗೆ ನೀವು ಭಯಪಡಬೇಕಾಗಿಲ್ಲ. ನಮ್ಮ ಸಾಹುಕಾರರ ಕಂಪೆ ನಿಗೆ ಬರುವುದಕ್ಕೆ ಮೊದಲು ಆಕೆ ನಮ್ಮ ದೇಶದ ಪ್ರಸಿದ್ಧ ನಟರು ರಾಜಾ ಚಾರ್ಯರ ಕಂಪೆನಿಯಲ್ಲಿದ್ದಳು. ನಾಲ್ಕು ದಿವಸವಾದರೂ ಆಚಾರ್ಯರ ತರಬೇತು ಪಡೆದವರು ಇತರರಿಗಿಂತ ನೂರು ಪಾಲು ಮೇಲು."

"ರಾಜಾಚಾರ್ಯರ ವಿಷಯ ನಾನು ಬಹಳ ಕೇಳಿದ್ದೇನೆ. ಹಾಗಾದರೆ ಚಿಂತೆಯಿಲ್ಲ."

"ನೀವು ನಿಮ್ಮ ಭಾಷಣದಲ್ಲಿ ಆಕೆಯನ್ನು ಕುರಿತು ನಾಲ್ಕು ಮಾತು ಹೇಳಿದರೆ ಸಾಹುಕಾರರಿಗೆ ಆಪ್ಯಾಯಮಾನವಾಗುತ್ತದೆ."

"ಆಗಲಿ. ಈ ವೃತ್ತಿಗೆ ಬಂದ ಮೇಲೆ ಇನ್ನೂ ಏನೇನು ಮಾಡ ಬೇಕೋ? – ಮುಖ್ಯ ವಿಷಯವನ್ನೇ ಕುರಿತು ಯೋಚಿಸಿಲ್ಲವಲ್ಲ!"

" ಯಾವಪದು ? "

" ಕಥೆ ಯಾವದು ? ಕಥೆ ಬರೆಯುವವರು ಯಾರು ? "

" ಸಾಮಾಜಿಕ ಮಾಡಲಿ ಎಂದು ನಾನು ಸೂಚಿಸಿದ್ದೇನೆ. ಪೌರಾಣಿಕ ವಾದರೆ ಚೆನ್ನಾಗಿ ದುಡ್ಡಾಗುತ್ತದೆ ಎಂದು ಚಿನ್ನಪ್ಪನವರ ಅಭಿಪ್ರಾಯ. "

" ದಕ್ಷಿಣದ ಕಡೆ ಇನ್ನೂ ಸಾಮಾಜಿಕ ಚಿತ್ರಗಳು ಬೆಳೆದಿಲ್ಲ, ಇಲ್ಲಿಯ ಅಭಿರುಚಿಗೆ ತಕ್ಕಂತೆ ಪೌರಾಣಿಕ ಮಾಡುವುದೇ ಒಳ್ಳೆಯದು. ಮೊದಲನೆಯ ಚಿತ್ರ ಏಟು ತಿನ್ನಬಾರದು. ರಾಮಾಯಣದ ಯಾವದಾದರೂ ಭಾಗ ತೆಗೆದು ಕೊಳ್ಳುವುದು ಒಳ್ಳೆಯದು. "

" ನೋಡಿ – ನನಗೆ ಮುಖ್ಯ ನಾಯಕನ ಪಾತ್ರವಿರಬೇಕು. ಸರೋಜ ನಿಗೆ ಮುಖ್ಯ ನಾಯಿಕೆ ಪಾತ್ರವಿರಬೇಕು. ಸರೋಜನ ಪಾತ್ರಕ್ಕೆ ಸರಿಸಮ ವಾದ ಮತ್ತೊಂದು ಸ್ತ್ರೀ ಪಾತ್ರವಿರಬೇಕು. "

" ಮತ್ತೊಂದು ಸ್ತ್ರೀ ಪಾತ್ರವೇಕೆ ? "

" ಅದರಲ್ಲಿ ಒಂದು ರಹಸ್ಯವಿದೆ–ಆ ಪಾತ್ರಕ್ಕೆ ಅಖಿಲಭಾರತ ಖ್ಯಾತಿ ವೆತ್ತ ನಟಿಯನ್ನು ಕರೆಸಿಕೊಂಡು ಆಕೆಗಿಂತ ಸರೋಜ ಉತ್ತಮ ನಟಿಯೆಂದು ತೋರಿಸಬೇಕಾದ ಉದ್ದೇಶವೂ ಇದೆ."

"ಹಾಗೇನು ? ಈ ಚಿತ್ರದ ರಾಜಕೀಯ ಗಡಿಯಾರದ ಯಂತ್ರಕ್ಕಿಂತಲೂ ತೊಡಕಾಗಿದೆ."

ಅವರು ಮಾತನಾಡುತ್ತಿರುವಂತೆ ಚಿನ್ನಪ್ಪ ಅವರನ್ನು ಹುಡುಕಿಕೊಂಡು ಹೊಟೇಲಿಗೆ ಬಂದ. ಪಾರ್ಟಿಯ ಏರ್ಪಾಟು ಮಾಡುವುದಕ್ಕೆ ದುಡಿದು ಅವನಿಗೆ ಸಾಕಾಗಿ ಹೋಗಿತ್ತು. ಶಿವಾನಂದ ಹೊಟೇಲ್ ಮಾಣಿಗೆ ಹೇಳಿ ಚಿನ್ನಪ್ಪನಿಗೆ ಕಾಫಿ, ಉಪಾಹಾರ ತರಿಸಿಕೊಟ್ಟ.

ಉಪಾಹಾರ ಮುಗಿಸಿ, ಒಂದು ಸಿಗರೇಟ್ ಮುಗಿಸಿದ ಮೇಲೆ ಚಿನ್ನಪ್ಪ ನಿಗೆ ಸ್ವಲ್ಪ ಜೀವ ಬಂದಂತಾಯಿತು.

" ಪಾರ್ಟಿ ವ್ಯವಸ್ಥೆಯೆಲ್ಲಾ ಮುಗಿದ ಹಾಗೆ ಕಾಣುತ್ತದೆ."

" ಮುಗಿದಿದೆ. ನಿಮ್ಮ ಮಾವನವರು ತುಂಬ ಉಪಕಾರ ಮಾಡಿದರು ಸ್ವಾಮಿ. ಮಾರಾಯರು. ನಾನು ಯಾವಾಗ ಹೋಗಿ ಏನು ಕೇಳಿದರೂ ಇಲ್ಲವೆನ್ನುವುದಿಲ್ಲ. ಬೆಂಗಳೂರಿನಲ್ಲಿ ಇಂಥ ಪಾರ್ಟಿ ಆಗಿರಲಿಲ್ಲವೆನ್ನಿಸಿಬಿಡು ತ್ತೇನೆ – ನೋಡುತ್ತಿರಿ. "

" ಆ ವಿಷಯದಲ್ಲಿ ನನಗೆ ಅನುಮಾನವೇ ಇಲ್ಲ ಚಿನ್ನಪ್ಪನವರೇ. "

" ಡೈರೆಕ್ಟರಿಗೆ ಎಲ್ಲಾ ತಿಳಿಸಿದಿರಾ ? "

" ತಿಳಿಸಿದೆ. ಪಿಕ್ಚರಿನ ವಿಷಯವೇ ನಾವೂ ಮಾತಾಡುತ್ತಿದ್ದೆವು. ನೀವೂ ಒಳ್ಳೆಯ ಸಮಯಕ್ಕೆ ಬಂದಿರಿ. ಪೌರಾಣಿಕ ಚಿತ್ರ ಮಾಡುವುದೇ ಒಳ್ಳೆಯದೆಂದು ಡೈರೆಕ್ಟರೂ ಹೇಳುತ್ತಾರೆ. "

" ಅವರು ಹೇಳಿದ ಹಾಗೇ ಮಾಡೋಣ. ಈ ಪಿಕ್ಚರ್ ಚೆನ್ನಾಗಿ ನಡೆದರೆ ಮುಂದೆ ಸಾಮಾಜಿಕ ಚಿತ್ರ ಮಾಡಬಹುದು. ಪುರಾಣದಲ್ಲಿ ಯಾವ ಕಥೆ ಚುನಾಯಿಸಿದ್ದೀರಿ."

ರಾಮಾಯಣ, ಭಾರತಗಳಿಂದ ಕೆಲವು ಕಥೆಗಳನ್ನು ಆಯ್ದು ವಿವರಿಸಿ, ಅವುಗಳ ಚಿತ್ರೀಕರಣಕ್ಕಿದ್ದ ತೊಂದರೆಗಳನ್ನೂ ನಿರೂಪಿಸಿ ಭೂಪೆನ್ ಬಾಬು

"ಹೆಚ್ಚು ಪಾತ್ರಗಳು ಇರಬಾರದು, ತೊಡಕು ಇರಬಾರದು, ಖರ್ಚು ಬಹಳ ಆಗಬಾರದು ಅಂಥ ಕಥೆಯೆಂದರೆ 'ಶ್ರೀರಾಮ ಪಟ್ಟಾಭಿಷೇಕ.' ಕೈಕೇಯಿ, ಕೌಸಲ್ಯೆ ಎರಡು ಪಾತ್ರಗಳನ್ನೂ ಸೊಗಸಾಗಿ ಬೆಳಸಬಹುದು."

"ಅದರಲ್ಲಿ ಕಾಮಿಕ್ (comic) ಇಲ್ಲವಲ್ಲಾ ಸ್ವಾಮಿ. ಅದಕ್ಕೇನು ಮಾಡುತ್ತೀರಿ. ?"

"ಮಂಥರೆ ಪಾತ್ರದಲ್ಲಿ, ಗುಹನ ಪಾತ್ರದಲ್ಲಿ ಕಾಮಿಕ್ ತಂದುಕೊಳ್ಳಬಹುದು."

"ಸರಿ—ಅದು ನಿಮಗೆ ಸೇರಿದ ವಿಷಯ. ಕಾಮಿಕ್ ಮಾತ್ರ ನಿರ್ಲಕ್ಷಿಸಬೇಡಿ. ನಾವು ಚಿತ್ರ ಕನ್ನಡದಲ್ಲಿ ಮಾಡಿದರೂ ಅದು ತಮಿಳು ನಾಡಿನಲ್ಲಿ ನಡೆಯಬೇಕು. ಕಾಮಿಕ್ ಇಲ್ಲದಿದ್ದರೆ ಒಂದು ದಿನವೂ ತಮಿಳುನಾಡಿನಲ್ಲಿ ನಡೆಯುವುದಿಲ್ಲ. ಇನ್ನು ಆಲ್ ಇಂಡಿಯಾ ಸ್ಟಾರಿಗೇನು ಮಾಡುತ್ತೀರಿ."

"ಬೇಕಾದ ಸ್ಟಾರನ್ನು ಬುಕ್ ಮಾಡಬಹುದು. ಸಾಧನಾ ಬೋಸ್, ಲೀಲಾದೇಸಾಯ್, ಕಾನನ್ ಯಾರನ್ನು ಬೇಕಾದರೆ ನಾನು ಕರೆಸಬಲ್ಲೆ. ಆದರೆ ಭಾಷೆಯ ತೊಡಕು ಇದೆಯಲ್ಲಾ. ಕನ್ನಡ ಚೆನ್ನಾಗಿ ಬರುವವರು ಯಾರೂ ಆಲ್ ಇಂಡಿಯಾ ಸ್ಟಾರ್ ಆಗಿಲ್ಲವೇ ?"

ಚಿನ್ನಪ್ಪ ತಲೆ ಕೆರೆದುಕೊಂಡು ಯೋಚಿಸುತ್ತಾ

" ನಾನು ರಾಜಾಚಾರ್ಯರ ಕಂಪೆನಿಯಲ್ಲಿ ಬೆಳಗಾಂವಿಗೆ ಹೋಗಿದ್ದಾಗ ಒಬ್ಬ ಹುಡುಗಿಯನ್ನು ನಮ್ಮ ಕಂಪೆನಿಗೆ ಸೇರಿಸಬೇಕೆಂದು ಕರೆದುಕೊಂಡು ಬಂದಿದ್ದರು. ಹುಡುಗಿ ಲಕ್ಷಣವಾಗಿತ್ತು – ತಕ್ಕ ಮಟ್ಟಿಗೆ ಹಾಡುತ್ತಿತ್ತು. ನಮ್ಮಲ್ಲಿ ಆವೇಳೆಗಾಗಲೇ ಜನ ಬೇಕಾದಷ್ಟು ಇದ್ದುದರಿಂದ ಆ ಹುಡುಗಿಯನ್ನು ಕಂಪೆನಿ ಸೇರಿಸಿಕೊಳ್ಳಲಿಲ್ಲ. ಒಂದು ವರ್ಷದ ಮೇಲೆ ನಾನು ಬೊಂಬಾಯಿಯಲ್ಲಿ ಮೆಜೆಸ್ಟಿಕ್ ಸಿನೀಮಾದಲ್ಲಿ ಒಂದು ಮರಾಟಿ ಚಿತ್ರ

ನೋಡುವುದಕ್ಕೆ ಹೋದೆ. ನನ್ನ ಆಶ್ಚರ್ಯವೇನು ಹೇಳಲಿ! ಯಾವ ಹುಡುಗಿಯನ್ನು ನಾವು ನಿರಾಕರಿಸಿದ್ದೆವೋ ಆ ಹುಡುಗಿಯೇ ಆ ಮರಾಟಿ ಚಿತ್ರದಲ್ಲಿ ಪಾರ್ಟು ಮಾಡಿದ್ದಳು. ಚೆನ್ನಾಗಿಯೂ ಮಾಡಿದ್ದಳು. ತರುವಾಯ ಅವಳು ಪಾರ್ಟು ಮಾಡಿದ ಚಿತ್ರಗಳನ್ನೆಲ್ಲಾ ನೋಡುತ್ತ ಬಂದಿರುವೆ. ಅವಳ ಕೆಲವು ಚಿತ್ರಗಳು ನಮ್ಮ ಥಿಯೇಟರಿನಲ್ಲಿಯೂ ಪ್ರದರ್ಶಿತವಾದವು. ನನಗೆ ತಿಳಿದ ಮಟ್ಟಿಗೆ ಆಕೆಗೆ ಕನ್ನಡ ಬರುತ್ತದೆ ನೋಡಿ."

"ಆಕೆಯ ಹೆಸರು?"

"ಶಾಮಲಾಬಾಯಿ."

"ನಾನು ಬಲ್ಲೆ. ನಾನೂ ಆಕೆಯ ಎರಡು ಮೂರು ಚಿತ್ರಗಳನ್ನು ನೋಡಿದ್ದೇನೆ. ಒಳ್ಳೆಯ ಆರ್ಟಿಸ್ಟ್ (artist). ಆದರೆ ಈಗ ಆಕೆಗೆ ಒಂದೊಂದು ಚಿತ್ರಕ್ಕೆ ಎಷ್ಟು ಸಿಕ್ಕುತ್ತಿದೆ ಬಲ್ಲಿರಾ ಚಿನ್ನಪ್ಪನವರೇ?"

"ಎಷ್ಟು ಸಾರ್?"

"ಕಡಿಮೆಯೆಂದರೆ ಮೂವತ್ತು ಸಾವಿರ."

"ನಮ್ಮ ಸಾಹುಕಾರರ ಉದ್ದೇಶ ಕೇಳಿದಿರೋ ಇಲ್ಲವೋ?"

"ಕೇಳಿದೆ."

"ಅದು ಸಾರ್ಥಕವಾಗುವ ಹಾಗಿದ್ದರೆ ಇನ್ನೂ ಹತ್ತು ಸಾವಿರ ಹೆಚ್ಚಾದರೂ ಅವರು ಲಕ್ಷ್ಯಮಾಡುವುದಿಲ್ಲ."

"ನನ್ನ ಮೇಲೆ ಬಹಳ ದೊಡ್ಡ ಜವಾಬ್ದಾರಿ ಹೊರಿಸುತ್ತಿರುವಿರಿ ಚಿನ್ನಪ್ಪನವರೇ."

ಎಂದರು ಭೂಪೇನ್ ಬಾಬು.

"ನಿಮ್ಮ ಮೇಲೆ ಹೊರಿಸದೆ ಇನ್ನು ಯಾರಮೇಲೆ ಹೊರಿಸಬೇಕು ಡೈರೆಕ್ಟರ್ ಸಾಹೇಬರೇ."

"ಕಥೆ, ಸಂಭಾಷಣೆ ಬರೆದುಕೊಡುವುದಕ್ಕೆ ಯಾರನ್ನುಯೋಚಿಸಿರುವಿರಿ?"

"ಆ ವಿಷಯ ನೀವೂ ಶಿವಾನಂದರೂ ನಿರ್ಧರಿಸಬೇಕು. ಹಾಡುಗಳು ಬರೆಯುವುದಕ್ಕೆ ನಾನು ಒಬ್ಬರನ್ನು ಕೊಡಬಲ್ಲೆ."

"ಯಾರು ಚಿನ್ನಪ್ಪನವರೇ. ?"

ಎಂದು ಕುತೂಹಲದಿಂದ ಶಿವಾನಂದ ಕೇಳಿದ.

"ಮಹದೇವಪ್ಪ."

"ನಾಟಕದ ಮಹದೇವಪ್ಪ, ಅವನಿಗೇನು ಬರುತ್ತದೆ ಚಿನ್ನಪ್ಪನವರೇ."

"ಹಾಗನ್ನಬೇಡಿ ಸ್ವಾಮಿ. ಅವನು ನಮ್ಮ ಮುರಿಗೆಯ್ಯನ ಭಾವ ಮೈದುನ ಎನ್ನುವುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ. ನಾವು ಮುರಿಗೆಯ್ಯನ ಎದುರು ಹಾಕಿಕೊಳ್ಳುವ ಹಾಗಿಲ್ಲ. ನೀವೆಲ್ಲಾ ಇರುತ್ತೀರಲ್ಲಾ – ಮಹ ದೇವಪ್ಪನ ಕೈಯಲ್ಲಿ ಕೆಲಸ ತೂಗಿಸಿಕೊಂಡು ಹೋಗಿ."

"ಕಥೆ, ಸಂಭಾಷಣೆ ಬರೆಯುವುದಕ್ಕೆ ನನಗೆ ಒಳ್ಳೆಯ ಲೇಖಕ ಬೇಕು ಚಿನ್ನಪ್ಪನವರೇ. ಸಂಭಾಷಣೆಗಳಲ್ಲಿ ಜೀವವಿರದಿದ್ದರೆ ನಮ್ಮ ಪ್ರಯತ್ನ ನಿಸ್ವಾರ್ಥಕವಾಗುತ್ತದೆ."

ಎಂದು ಭೂಪೆನ್ ಬಾಬು ಖಂಡಿತವಾಗಿ ನುಡಿದರು.

"ಅಂಥವರು ಯಾರಿದ್ದಾರೆ ಶಿವಾನಂದರೇ?"

ಎಂದು ಚಿನ್ನಪ್ಪ ಕೇಳಿದ.

"ಸುದರ್ಶನ ಇದ್ದಾರೆ. ಅವರನ್ನು ನಾವು ಒಪ್ಪಿಸಬೇಕಾದರೆ ಕಷ್ಟ. ನಾನು ಕಾಲೇಜ್ ಯೂನಿಯನ್ ಸೆಕ್ರೆಟರಿಯಾಗಿದ್ದಾಗ ಅವರನ್ನು ಮುಖ್ಯ ಅತಿಥಿಗಳಾಗಿ ಕೆಲವು ಸಲ ಬರಮಾಡಿಕೊಂಡಿದ್ದೆ. ಅವರ ಪುಸ್ತಕಗಳನ್ನೋದಿ ಮರುಳಾಗದಿರುವವರೇ ಕನ್ನಡ ನಾಡಿನಲ್ಲಿಲ್ಲ. ಆದರೆ ಆಸಾಮಿ ಬಹು ಖಂಡಿತ ವಾದಿ ಹಟವಾದಿ."

"ನೀವು ಅವರ ಜತೆ ಮಾತನಾಡಿ. ಎರಡು ದಿವಸ ಬಿಟ್ಟು ಆಫೀಸಿಗೆ ಕರೆದುಕೊಂಡು ಬನ್ನಿ. ಬೆಳಿಗ್ಗೆ ಉತ್ಸವಕ್ಕೆ ಆಹ್ವಾನಪತ್ರ ಕೊಡುತ್ತೇನೆ. ನೀವೇ ಅವರಿಗೆ ಆಹ್ವಾನ ಕೊಟ್ಟು ಬೆಳಿಗ್ಗೆ ಬರುವಂತೆ ಮಾಡಿ."

ಎಂದು ಚಿನ್ನಪ್ಪ ಹೇಳಿದ. ಭೂಪೆನ್ ಬಾಬು ಅವನ ಮಾತು ಸಮರ್ಥಿ ಸಿದರು.

ಹೊತ್ತು ಬಹಳ ಆಗುತ್ತ ಬಂದಿತು. ಬೆಳಿಗ್ಗೆ ಶಿವಾನಂದ ಟ್ಯಾಕ್ಸಿ ತೆಗೆದುಕೊಂಡು ಬಂದು ಭೂಪೆನ್ ಬಾಬುಗಳನ್ನು ಥಿಯೇಟರಿಗೆ ಕರೆದುಕೊಂಡು ಹೋಗುವುದೆಂದು ಇತ್ಯರ್ಥವಾಯಿತು.

## ೧೦

ಭಾನುವಾರ ಬೆಳಿಗ್ಗೆ 'ಶ್ರೀಶೈಲ ಥಿಯೆಟರ್' ನಲ್ಲಿ 'ಭೂಪೆನ್ ಬಾಬು ಸತ್ಕಾರ ಸಮಿತಿ' ಯ ಆಹ್ವಾನವನ್ನಂಗೀಕರಿಸಿದ ಮಾನ್ಯ ಮಹನೀಯರು ಮಹಿಳೆಯರು ಬಂದು ಸೇರಿದರು. ಥಿಯೇಟರ್ ಹಸಿರುವಾಣಿ ಚಪ್ಪರದಿಂದಲೂ ವಸ್ತ್ರ ತೋರಣ ಬಾವುಟಗಳಿಂದಲೂ ಅಲಂಕೃತವಾಗಿತ್ತು. ನಾಗಸ್ವರದ ಮಂಜುಳ ನಿನದ ಕೇಳಿಬರುತ್ತಿತ್ತು.

ಅತಿಥಿಗಳಿಗೆ ಸ್ವಾಗತ ಬಯಸಿ ಚಿನ್ನಪ್ಪ, ಮುರಿಗೆಯ್ಯ, ಶಿವಾನಂದ ಅವರನ್ನು ಉಪಹಾರವಿದ್ದ ಬಾಲ್ಕನಿಗೆ ಕರೆದೊಯ್ಯುತ್ತಿದ್ದರು. ಸಾಹುಕಾರ ರುದ್ರಪ್ಪನವರು, ಪ್ರೆಸಿಡೆಂಟ್ ವೀರಭದ್ರಪ್ಪನವರು, ಸೇಠ್ ಧನರಾಜ್ ಮೂಲಚಂದ್ ಗುರುತಿನವರನ್ನು ಮಾತನಾಡಿಸುತ್ತಿದ್ದರು. ಪರಸ್ಪರ ಪರಿಚಯ ಮಾಡಿಕೊಡುವ ಕೆಲಸವನ್ನು ಅತಿಥಿಗಳು ತಾವೇ ಮಾಡಿಕೊಳ್ಳುತ್ತಿದ್ದರು.

ಚಿನ್ನಪ್ಪ ಡೈರೆಕ್ಟರ್ ಭೂಪೇನ್ ಬಾಬುಗಳನ್ನು ಮುಖ್ಯವಾಗಿ ಸಾಹುಕಾರರು, ವೀರಭದ್ರಪ್ಪನವರು, ಸೇಠ್ ಮತ್ತು ಕೆಲವು ಪ್ರಧಾನ ಅತಿಥಿಗಳಿಗೆ ಪರಿಚಯಮಾಡಿಕೊಟ್ಟ.

ಎಲ್ಲಿಯೋ ದೂರದಲ್ಲಿ ಕುಳಿತಿದ್ದ ಸುದರ್ಶನರನ್ನು ಶಿವಾನಂದ ಕರೆದುಕೊಂಡು ಬಂದು ಭೂಪೇನ್ ಬಾಬು, ಸಾಹುಕಾರರು, ಮುರಿಗೆಯ್ಯ ಇವರಿಗೆ ಚಿನ್ನಪ್ಪ ಪರಿಚಯ ಮಾಡಿಕೊಟ್ಟ.

ಉಪಹಾರ ವಿಧಿ ಸ್ವಲ್ಪ ಸಾವಕಾಶವೇ ಸಾಗಿತು. ಮಾವಳ್ಳಿ ಟಿಫಿನ್ ರೂಮ್ಸಿನವರ ಪರಿಚರ್ಯೆ ಎಂದು ಗೊತ್ತಾದ ಮೇಲಂತೂ ಅತಿಥಿಗಳು ಮತ್ತಷ್ಟು ಆರಾಮವಾಗಿ ಆತಿಥ್ಯ ಸುಖವನ್ನು ಅನುಭವಿಸತೊಡಗಿದರು.

ಉಪಾಹಾರ ಮುಗಿದ ಮೇಲೆ ಅತಿಥಿಗಳು ಕೆಳಗಿಳಿದು ಬಂದು ಸಭಾಭವನದಲ್ಲಿ ಪೀಠಸ್ಥರಾದರು. ಅಧ್ಯಕ್ಷರು, ಮುಖ್ಯ ಅತಿಥಿಗಳು, ಸೇಠ್ ಇವರ ಜತೆಗೆ ವೀರಭದ್ರಪ್ಪನವರನ್ನೂ ಕರೆದುಕೊಂಡು ಹೋಗಿ ಚಿನ್ನಪ್ಪ ವೇದಿಕೆಯ ಮೇಲೆ ಹಾಕಿದ್ದ ಗೌರವಾಸನಗಳಲ್ಲಿ ಕೂಡಿಸಿದ.

ಪಕ್ಕವಾದ್ಯಗಾರರು ಬಂದು ವೇದಿಕೆಯ ಒಂದು ಪಾರ್ಶ್ವದಲ್ಲಿ ಕುಳಿತು ತಮ್ಮ ವಾದ್ಯಗಳನ್ನು ಕೈಗೆತ್ತಿಕೊಂಡರು. ಸರೋಜ ಪ್ರವೇಶಿಸಿ ಎಲ್ಲರಿಗೂ ನಮಸ್ಕರಿಸಿ, ಕೈಗೆ ತಂಬೂರಿ ತೆಗೆದುಕೊಂಡು ಕುಳಿತಳು. ಸಾಹುಕಾರ ರುದ್ರಪ್ಪನವರ ವಿಷಯ ತಿಳಿದಿದ್ದವರು ಒಬ್ಬರ ಮುಖ ಒಬ್ಬರು ನೋಡಿಕೊಂಡು ಮುಗುಳ್ನಗೆ ನಕ್ಕರು.

ಸರೋಜ ಯಾವ ಬಗೆಯ ಅಂಗವಿನ್ಯಾಸವನ್ನೂ ಮಾಡದೆ ಗಂಭೀರವಾಗಿ ಹಾಡಿದಳು. ಅವಳ ಹಾಡಿಕೆಯಲ್ಲಿ ಮೈಮರೆತ ಶ್ರಾವಕರು ಅವಳನ್ನೇ ದಿಟ್ಟಿಸಿ ನೋಡುತ್ತ ಕುಳಿತರು. ಮುಕ್ಕಾಲು ಗಂಟೆ ಹಾಡಿದ ಮೇಲೆ ಸರೋಜ ತಂಬೂರಿಯನ್ನು ಮೃದುವಾಗಿ ಕೆಳಗಿಟ್ಟು ಎದ್ದು ನಿಂತು, ಎಲ್ಲರಿಗೂ ಮತ್ತೆ ಕೈಮುಗಿದು ನೇಪಥ್ಯದ ಕಡೆ ತೆರಳಿದಳು. ಶ್ರಾವಕರು ಬಹಳ ಹೊತ್ತು ಕರತಾಡನ ಮಾಡಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಮಾಡಿದರು.

ಚಿನ್ನಪ್ಪ ವೇದಿಕೆಯ ಮೇಲೆ ಬಂದು, ಸೇಠ್ ಧನರಾಜರ ಪರವಾಗಿ ಎಲ್ಲರಿಗೂ ಸ್ವಾಗತ ಬಯಸಿದ. ಸಾಹುಕಾರ ರುದ್ರಪ್ಪನವರ ಕಲಾಭಿಮಾನ, ಕಲೆಯ ಉತ್ಕರ್ಷಕ್ಕಾಗಿ ಅವರು ಮಾಡಿದ್ದ ಮಹತ್ಸೇವೆಗಳನ್ನು ಕುರಿತು ವಿಸ್ತಾರವಾಗಿ ಪ್ರಸ್ತಾಪಿಸಿ, ಅವರು ಅಧ್ಯಕ್ಷಸ್ಥಾನವನ್ನು ಅಲಂಕರಿಸಿ ಅಂದಿನ ಕಾರ್ಯಕಲಾಪಗಳನ್ನು ನಡೆಸಿಕೊಡಬೇಕೆಂದು ಪ್ರಾರ್ಥಿಸಿದ. ಭಾಷಣ ಮುಂದುವರಿಸಿ ಭೂಪೆನ್ ಬಾಬುಗಳ ಅನ್ಯಾದೃಶ ಕಲಾಕೌಶಲ್ಯ, ಸಿನೀಮಾ ಪ್ರಪಂಚದಲ್ಲಿ ಅವರು ಗಳಿಸಿಕೊಂಡಿದ್ದ ದಿವ್ಯಖ್ಯಾತಿಯನ್ನು ಕುರಿತು ಪ್ರಶಂಸೆ ಮಾಡಿದ. ಸೇಠ್ ಧನರಾಜರ ಔದಾರ್ಯವನ್ನು ಚಿನ್ನಪ್ಪ ಕಡೆಗಾಣಿಸಲಿಲ್ಲ. ಅಂದಿನ ಸಮಾರಂಭದ ಸಂತೋಷಕ್ಕೆ ಸೇಠರ ಉದಾರಹೃದಯವೇ ಕಾರಣ ವೆಂದು ತಿಳಿಸಿದ.

ಚಿನ್ನಪ್ಪನ ಭಾಷಣ ನಡೆದಿದ್ದಂತೆ ಸಾಹುಕಾರ ರುದ್ರಪ್ಪನವರ ಮುಖ, ಮೈಯಲ್ಲಿ ಧಾರಾಕಾರವಾಗಿ ಬೆವರುನೀರು ಸುರಿಯುತ್ತಿತ್ತು. ಸಭಾಸದರಿಗೂ ಕೇಳಿಬರುವಷ್ಟು ಗಟ್ಟಿಯಾಗಿ ಅವರ ಎದೆ ಹೊಡೆದುಕೊಳ್ಳುತ್ತಿತ್ತು. 'ಚಿನ್ನಪ್ಪನ ಮಾತು ಕೇಳಿ ಒಳ್ಳೆಯ ಪೀಕಲಾಟಕ್ಕೆ ಸಿಕ್ಕಿಹಾಕಿಕೊಂಡೆನಲ್ಲಾ' ಎಂದು ಸಾಹುಕಾರರ ಹೃದಯ ತಲ್ಲಣಿಸುತ್ತಿತ್ತು. ಇಂದಿನ ಗಂಡಾಂತರದಿಂದ ಪಾರಾದರೆ ಕಾಶಿ ವಿಶ್ವೇಶ್ವರಸ್ವಾಮಿಗೆ ರುದ್ರಾಭಿಷೇಕ ಮಾಡಿಸುವುದಾಗಿ ಹರಸಿಕೊಂಡರು.

ಚಿನ್ನಪ್ಪನ ಭಾಷಣ ಮುಗಿದ ಮೇಲೆ ಮಹದೇವಪ್ಪ ಬಂದು ತಾನು ಬರೆದಿದ್ದ ಅಭಿನಂದನ ಪದ್ಯಗಳನ್ನು ಓದಿದ. ಅವನ ಪದ್ಯಪಠನ ಮುಗಿದುದಕ್ಕೆ ಸಂತೋಷವ್ಯಕ್ತಪಡಿಸಲು ಸಭಾಸದರು ಕರತಾಡನ ಮಾಡಿದರು.

ತಮ್ಮ ಪಾಳಿ ಬಂದುದನ್ನು ಕಂಡು ಸಾಹುಕಾರರ ಎದೆ ಮತ್ತಷ್ಟು ಬಲವಾಗಿ ಬಡಿದುಕೊಳ್ಳಲಾರಂಭಿಸಿತು. ಚಿನ್ನಪ್ಪ ಸಾಹುಕಾರರ ಪಕ್ಕದಲ್ಲಿ ನಿಂತುಕೊಂಡು ಅವರಿಗೆ ಧೈರ್ಯಕೊಟ್ಟ.

ಸಾಹುಕಾರರು ಗಂಭೀರವಾಗಿ ಎದ್ದುನಿಂತು ತಮ್ಮ ದರ್ಬಾರ್ ಡ್ರೆಸ್ಸನ್ನು ಸರಿಪಡಿಸಿಕೊಂಡರು. ಗಂಟಲು ಸರಿಮಾಡಿಕೊಂಡು, ಕಿಸೆಯಿಂದ ಭಾಷಣವನ್ನು ತೆಗೆದು ಕೈಯಲ್ಲಿ ಹಿಡಿದರು. ಬಿರುಗಾಳಿಗೆ ಸಿಕ್ಕಿದ ಬಾವುಟದಂತೆ ಅವರ ಕೈಯಲ್ಲಿದ್ದ ಭಾಷಣದ ಹಾಳೆಗಳು ಅದರುತ್ತಿದ್ದವು. ಸಾಹುಕಾರರು ಧೈರ್ಯ ತಂದುಕೊಂಡು ಭಾಷಣ ಆರಂಭಿಸಿದರು.

"ಸೇಠ್ ಧನರಾಜರೇ, ಶ್ರೀಮಾನ್ ಭೂಪೆನ್ ಬಾನರ್ಜಿಯವರೇ, ಮಹನೀಯರೇ ಮಹಿಳೆಯರೇ,

ಕಲ್ಕತ್ತೆಯಿಂದ ಇಲ್ಲಿಗೆ ದಯೆಮಾಡಿಸಿರುವ ಪ್ರಸಿದ್ಧ ಫಿಲಂ ಡೈರೆಕ್ಟರಾದ ಶ್ರೀ ಭೂಪೆನ್ ಬಾನರ್ಜಿಯವರ ಗೌರವಾರ್ಥವಾಗಿ ನಮ್ಮ ಮಿತ್ರರಾದ ಶ್ರೀ ಸೇಠ್ ಧನರಾಜರು ಏರ್ಪಡಿಸಿರುವ ಈ ಸತ್ಕಾರಕೂಟಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಮಾಡಿ ಸೇಠರು ನನ್ನನ್ನು ಋಣಿಯನ್ನಾಗಿ ಮಾಡಿದ್ದಾರೆ. ಇಂಥ ದೊಡ್ಡ ಗೌರವಕ್ಕೆ ನಾನು ಅರ್ಹನಲ್ಲ

[ಸಭಾಸದರಲ್ಲಿ ಯಾರೋ ಕರತಾಡನ ಮಾಡಿದರು, ಅದರಿಂದ ಉತ್ತೇಜಿತರಾದ ಸಾಹುಕಾರರು ಧ್ವನಿಯನ್ನು ಸ್ವಲ್ಪ ಎತ್ತರಿಸಿ]

ಸೇಠ್‌ಜೀಯವರು ಚಿತ್ರ ವ್ಯವಸಾಯದಲ್ಲಿದ್ದಾರೆ. ಅದರ ಅಭ್ಯುದಯ ಕ್ಕಾಗಿ ಹಗಲಿರುಳೂ ದುಡಿಯುತ್ತಿದ್ದಾರೆ.

[ಸಭಾಸದರಲ್ಲಿ ಯಾರೋ 'ಹಿಯರ್-ಹಿಯರ್' ಎಂದರು]

ಚಿತ್ರ ವ್ಯವಸಾಯದಲ್ಲಿ ನಾನು ಅವರಷ್ಟು ಆಸಕ್ತಿ ವಹಿಸದಿದ್ದರೂ ಅದರಲ್ಲಿ ನಾನೂ ಇದ್ದೇನೆ. ಈ ಕಾರಣಕ್ಕಾಗಿ ಅವರು ನನ್ನನ್ನು ಅಧ್ಯಕ್ಷ ನನ್ನಾಗಿ ಮಾಡಿದ್ದಾರೆಂದು ಕಾಣುತ್ತದೆ.

ಕಲ್ಕತ್ತೆಯಿಂದ ದಯೆಮಾಡಿಸಿರುವ ನಮ್ಮ ಮುಖ್ಯ ಅತಿಥಿಗಳು ಬಹಳ ದೊಡ್ಡ ದಿಗ್ದರ್ಶಕರಾಗಿದ್ದಾರೆ. ದೇವಕಿ ಬೋಸ್, ನಿತಿನ್ ಬೋಸ್, ಮಧು ಬಾನರ್ಜಿ ಮೊದಲಾದ ಘಟಾನುಘಟಿಗಳಿಂದ ತರಬೇಯತ್ತು ಪಡೆದಿದ್ದಾರೆ. ಅವರ ಚಿತ್ರಗಳು ನಮ್ಮ ದೇಶದ ಅನೇಕ ಊರುಗಳಲ್ಲಿ ತಿಂಗಳುಗಟ್ಟಳೆ-ವರ್ಷಗಟ್ಟಳೆ ನಡೆದು ಅಪಾರ ಕೀರ್ತಿ, ಸಂಪತ್ತನ್ನು ಗಳಿಸಿವೆ. ಇಂಥ ಮಹನೀಯರು ನಮ್ಮ ಊರಿಗೆ ಬಂದು ಈ ಸತ್ಕಾರ ಸ್ವೀಕರಿಸಿರುವುದು ನಮ್ಮ ಪುಣ್ಯ. ಅವರು ಇಲ್ಲಿಯೇ ಕೆಲವು ಕಾಲ ನಿಂತು ನಮ್ಮ ಚಿತ್ರ ವ್ಯವಸಾಯ ಮುಂದಕ್ಕೆ ಬರಲು ಸಹಾಯ ಮಾಡಬೇಕೆಂದು ಕೋರುತ್ತೇನೆ.

[ದೀರ್ಘವಾದ ಕರತಾಡನ.]

ನಮ್ಮ ಸೇಠ್‌ಜೀಯವರು, ನೀವೆಲ್ಲರೂ ನನ್ನ ಮೇಲೆ ತುಂಬಾ ವಿಶ್ವಾಸ ತೋರಿಸಿದ್ದೀರಿ. ಅದಕ್ಕಾಗಿ ನಾನು ಶರಣು ಹೇಳಿ ನನ್ನ ಭಾಷಣ ಮುಗಿ ಸುತ್ತೇನೆ."

ಸಭಾಸದರು ಕರತಾಡನ ಮಾಡುತ್ತಿರುವಂತೆ ಸಾಹುಕಾರರು ವಿರಮಿಸಿ ಮುಖದ ಮೇಲಣ ಬೆವರುಹನಿಗಳನ್ನು ಒರಸಿಕೊಂಡರು. ಸುದರ್ಶನ ಸಾಹುಕಾರರ ಭಾಷಣದ ಭಾಷಾವೈಖರಿಯನ್ನು ಸ್ಮರಿಸಿಕೊಳ್ಳುತ್ತಾ ನಸುನಗುತ್ತಿದ್ದ. ಸಾಹುಕಾರರು ಒಮ್ಮೆ ನೇಪಥ್ಯದ ಕಡೆ ತಮ್ಮ ದೃಷ್ಟಿ ಬೀರಿದರು. ಅಲ್ಲಿಂದ ಹೊರಟ ಮಂದಹಾಸ ಸಾಹುಕಾರರ ಮನಸ್ಸನ್ನು ಪ್ರಫುಲ್ಲಗೊಳಿಸಿತು.

ಮುಖ್ಯ ಅತಿಥಿಗಳಾದ ಭೂಪೇನ್ ಬ್ಯಾನರ್ಜಿಯವರು ಎದ್ದು ನಿಲ್ಲಲು ಸಭಾಸದರು ಪ್ರಶಾಂತರಾಗಿ ಅವರ ಭಾಷಣವನ್ನು ಕುತೂಹಲದಿಂದ ಕೇಳ ತೊಡಗಿದರು.

"ಮಾನ್ಯ ಸಾಹುಕಾರ ರುದ್ರಪ್ಪನವರೇ, ಸೇಠ್ ಧನರಾಜರೇ, ಕಲಾಭಿಮಾನಿಗಳಾದ ಮಹನೀಯರೇ. ಮಹಿಳೆಯರೇ,

ನಾನು ಬೆಂಗಳೂರಿಗೆ ಬರುವಾಗ್ಗೆ ಈ ಸಂತೋಷ, ಗೌರವ ನನ್ನ ಪಾಲಿಗೆ ಬರುತ್ತದೆಂದು ನಿರೀಕ್ಷಿಸಿರಲಿಲ್ಲ. ನಿಮ್ಮ ಸಂಸ್ಥಾನದ ನಿಸರ್ಗ ರಮಣೀಯ ದೃಶ್ಯಗಳನ್ನು ನೋಡಿಕೊಂಡು, ಕೆಲವು ದಿವಸ ವಿಶ್ರಾಂತಿ ಪಡೆದು ಹೋಗುವುದಕ್ಕೆ ಬಂದವನಿಗೆ ಸೇಠ್ ಧನರಾಜ್ ಮೂಲಚಂದರು ಈ ಸಮಾರಂಭ ಏರ್ಪಡಿಸಿ, ನಿಮ್ಮೆಲ್ಲರನ್ನು ಕಾಣುವ ಸುಯೋಗ ಕಲ್ಪಿಸಿ ಉಪಕಾರಮಾಡಿದ್ದಾರೆ.

ಇಂದಿನ ಮಾನ್ಯ ಅಧ್ಯಕ್ಷರು ನನ್ನ ವಿಚಾರ ಪ್ರಶಂಸಿಸಿ ಬಹಳ ವಿಶ್ವಾಸದ ಮಾತುಗಳನ್ನಾಡಿದ್ದಾರೆ. ನಾನು ಈ ಊರಿಗೆ ಬಂದ ಒಂದೆರಡು ದಿನಗಳಲ್ಲಿಯೇ ಹಲವು ಕಡೆಗಳಿಂದ ಸಾಹುಕಾರ ರುದ್ರಪ್ಪನವರ ಕಲಾಭಿಮಾನ, ಅವರು ಕಲಾವಿದರಿಗೆ ಕೊಡುತ್ತಿರುವ ಪ್ರೋತ್ಸಾಹ, ಅವರ ಸರಸ ಸಜ್ಜನಿಕೆಯ ವಿಷಯ ನನಗೆ ಕೇಳಿಬಂತು. ಇಷ್ಟು ಸೊಗಸಾಗಿ ಕಟ್ಟಲ್ಪಟ್ಟಿರುವ ಥಿಯೇಟರೂ ಅವರದೇ ಎಂದು ಕೇಳಿ ನನಗೆ ಪರಮ ಸಂತೋಷವಾಯಿತು. ಅವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ನನ್ನ ಪರವಾಗಿ—ಹಿಂದೂಸ್ಥಾನದ ಎಲ್ಲ ಕಲಾವಿದರ ಪರವಾಗಿ ಅರ್ಪಿಸಬೇಕಾದುದು ನನ್ನ ಕರ್ತವ್ಯ.

ದಕ್ಷಿಣ ಭಾರತದ ವಿಷಯ ನಾನು ಕೇಳಿ ಬಲ್ಲೆ. ಸಾಹಿತ್ಯ, ಸಂಗೀತ, ಶಿಲ್ಪ, ವಾಸ್ತು ಶಿಲ್ಪ, ಚಿತ್ರಕಲೆಗಳಿಗೆ ದಕ್ಷಿಣ ಭಾರತ ಆವಾಸಸ್ಥಾನವೆಂದು ಗ್ರಂಥಗಳನ್ನೋದಿ ತಿಳಿದುಕೊಂಡಿದ್ದೇನೆ. ಈ ದಿವಸ ಹಾಡಿ ನಮ್ಮೆಲ್ಲರ ಮನಸ್ಸಂತೋಷಗೊಳಿಸಿದ ಕಲಾವಿದೆಯರ ಸಂಗೀತ ಕೇಳಿದ ಮೇಲಂತೂ ಆ ಮಾತು ಅಕ್ಷರಶಃ ನಿಜವೆನಿಸುತ್ತದೆ

[ಸಭಾಸದರು ಸಂತೋಷಭರಿತರಾಗಿ ಕರತಾಡನ ಮಾಡುವರು]

ಅವರ ರಾಗವೈಖರಿ, ಸ್ವರಸಂಧಾನ, ಸುಶ್ರಾವ್ಯವಾದ ಕಂಠ ಸಾಕ್ಷಾತ್ ಸರಸ್ವತಿಯ ನೆನಪು ತರುತ್ತಿದ್ದಿತು.

[ಸಭಾಸದರು ಮತ್ತಷ್ಟು ಉತ್ಸಾಹದಿಂದ ಕರತಾಡನ ಮಾಡುವರು]

ಇವರು ಇನ್ನೂ ಚಿತ್ರಗಳಲ್ಲಿ ಅಭಿನಯಿಸಿಲ್ಲವೆಂದು ಕೇಳಿ ನನಗೆ ಪರಮಾಶ್ಚರ್ಯವಾಯಿತು. ಇವರು ಕಲ್ಕತ್ತೆಯಲ್ಲಿಯೋ, ಮುಂಬಯಿ

ಯಲ್ಲಿಯೋ ಇದ್ದಿದ್ದರೆ ಈ ವೇಳೆಗೆ ಆಲ್ ಇಂಡಿಯಾ ಸ್ಟಾರ್ ಆಗುತ್ತಿದ್ದರು.

[ಸಭಾಸದರು ಮತ್ತೆ ಕರತಾಡನ ಮಾಡುವರು]

ಶ್ರೀಮತಿಯವರ ಕಲಾನೈಪುಣ್ಯ ದಿನದಿನಕ್ಕೆ ಅಭಿವೃದ್ಧಿಗೊಂಡು, ಅವರ ಕೀರ್ತಿ ಎಲ್ಲಕಡೆಗೂ ಪಸರಿಸಲೆಂದು ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ಚಿತ್ರ ಪ್ರಪಂಚದಲ್ಲಿರುವ ನನ್ನಿಂದ ಈ ಕಲೆಯ ಬಗ್ಗೆ ನಾಲ್ಕು ಮಾತುಗಳನ್ನು ಕೇಳಬೇಕೆಂದು ನೀವು ಕುತೂಹಲಿಗಳಾಗಿರಬಹುದು. ಭಾರತದ ವ್ಯವಸಾಯಗಳಲ್ಲಿ ಚಿತ್ರಕಲೆ ತೀರ ಇತ್ತೀಚಿನದು. ಇಷ್ಟು ಅಲ್ಪಕಾಲದಲ್ಲಿ ಅದು ದೊರಕಿಸಿಕೊಂಡಿರುವ ಕೀರ್ತಿ ಸ್ತುತ್ಯವಾದರೂ ಅದು ಇನ್ನೂ ಪೂರ್ಣ ವಿಕಾಸ ಹೊಂದಿಲ್ಲವೆಂದರೆ ತಪ್ಪಾಗಲಾರದು. ಭಾರತೀಯ ಚಲನ ಚಿತ್ರ ಕಲೆಯನ್ನು ಮೇಲ್ಮಟ್ಟದಲ್ಲಿಡುವುದಕ್ಕೆ ನನ್ನ ಗುರುಗಳಾದ ದೇವಕಿ ಬೋಸರೂ, ನಿತಿನ್ ಬೋಸರೂ, ಮಧುಬಾನರ್ಜಿಯವರೂ ಮಾಡುತ್ತಿರುವ ಸೇವೆ ತಮಗೆಲ್ಲ ವೇದ್ಯವಾಗಿದೆ. ದೇವಕಿ ಬೋಸ್, ನಿತಿನ್ ಬೋಸರಂತಹ ಪ್ರತಿಭಾಶಾಲಿಗಳಿದ್ದೂ ನಮ್ಮ ದೇಶದ ಕಲೆ ಯಾವ ಸ್ಥಿತಿಯಲ್ಲಿರಬೇಕೋ ಆ ಸ್ಥಿತಿಯಲ್ಲಿಲ್ಲದಿರುವುದಕ್ಕೆ ಕಾರಣವೇನೆಂದು ನಾವು ವಿಚಾರ ಮಾಡಬೇಕು, ನನಗೆ ತಿಳಿದ ಮಟ್ಟಿಗೆ ಸರಿಯಾದ ಬಂಡವಾಳಗಾರರು ಈ ರಂಗಕ್ಕೆ ಬರದಿರುವುದೇ ಕಾರಣ. ಸಾಹುಕಾರ, ರುದ್ರಪ್ಪನವರಂಥ ಕಲಾಭಿಮಾನಿಗಳಾದ ಶ್ರೀಮಂತರು ಈ ಕಡೆಗೆ ಲಕ್ಷ್ಯ ಹಾಕಿದರೆ ನಾವು ನಮ್ಮ ಚಿತ್ರಗಳನ್ನು ಯೂರೋಪ್, ಅಮೇರಿಕಾಗಳಿಗೂ ಕಳಿಸಲು ಸಾಧ್ಯವಾಗುತ್ತದೆ.

[ಸಭಾಸದರ ಪ್ರಚಂಡ ಕರತಾಡನವಾಗುತ್ತದೆ]

ಅಂಥ ಸುದಿನಗಳು ಬಹಳ ದೂರದಲ್ಲಿಲ್ಲವೆಂದು ನಾನು ನಂಬುತ್ತೇನೆ.

ನನ್ನನ್ನು ಬರಮಾಡಿಕೊಂಡು ಇಷ್ಟು ಗೌರವ ತೋರಿಸಿದ ಸೇಠ್ ಧನರಾಜರಿಗೂ, ಬಹಳ ಪ್ರಿಯವಾದ ಮಾತುಗಳನ್ನಾಡಿದ ಮಾನ್ಯ ಅಧ್ಯಕ್ಷರಾದ ಸಾಹುಕಾರ ರುದ್ರಪ್ಪನವರಿಗೂ, ತಮ್ಮೆಲ್ಲರಿಗೂ ನನ್ನ ಪ್ರಣಾಮ ಅರ್ಪಿಸಿ ವಿರಮಿಸುತ್ತೇನೆ."

ಸಭಾಸದರು ಭೂಪೇನ್ ಬಾಬುಗಳ ಭಾಷಣವನ್ನು ಮೆಚ್ಚಿಕೊಂಡುದಕ್ಕೆ ಅವರ ಕರತಾಡನವೇ ಸಾಕ್ಷಿಯಾಯಿತು.

ಚಿನ್ನಪ್ಪ ಸೇಠರ ಪರವಾಗಿ ವಂದನಾರ್ಪಣೆ ಮಾಡಿದ ಮೇಲೆ ಸೇಠರು ಮಾನ್ಯ ಅತಿಥಿಗಳಿಗೂ ಅಧ್ಯಕ್ಷರಿಗೂ ಹಾರ ತುರಾಯಿಗಳನ್ನರ್ಪಿಸಿದರು. ಆಮಂತ್ರಿತರು ಹೊರಡುವ ಮುನ್ನ ಚಿನ್ನಪ್ಪನಿಗೆ ತಮ್ಮ ಕೃತಜ್ಞತೆಯನ್ನರ್ಪಿಸಿದರು.

ಅಧ್ಯಕ್ಷರ, ಮುಖ್ಯ ಅತಿಥಿಗಳ, ಸೇಠರ ಚಿತ್ರಗಳನ್ನು ಪ್ರೆಸ್ ಫೋಟೋಗ್ರಾಫರುಗಳು ತೆಗೆದುಕೊಂಡರು. ಚಿನ್ನಪ್ಪ, ಶಿವಾನಂದ ಎಲ್ಲಾ ಚಿತ್ರಗಳಲ್ಲಿಯೂ ಮೆಲ್ಲನೆ ನುಸುಳಿಕೊಂಡರು. ಚಿನ್ನಪ್ಪ ಫೋಟೋಗ್ರಾಫರುಗಳನ್ನು ಕರೆದುಕೊಂಡು ಹೋಗಿ ಸರೋಜನ ಕೆಲವು ಚಿತ್ರಗಳನ್ನು ತೆಗೆಸಿದ.

ಗುಂಪು ಚೆದುರುತ್ತಿದ್ದಂತೆ ಭೂಪೆನ್ ಬಾಬುಗಳನ್ನು ಆಫೀಸಿಗೆ ಕರೆದುಕೊಂಡು ಹೋಗುವಂತೆ ಚಿನ್ನಪ್ಪ ಶಿವಾನಂದನಿಗೆ ಸೂಚಿಸಿದ

ಅವರಿಬ್ಬರಿಗೂ ಆಫೀಸಿನಲ್ಲಿ ಕುಳಿತ ಸ್ವಲ್ಪ ಹೊತ್ತಿನಲ್ಲಿಯೇ ಚಿನ್ನಪ್ಪ ಸಾಹುಕಾರರನ್ನು ಕರೆದುಕೊಂಡು ಅಲ್ಲಿಗೆ ಬಂದ.

ಸಾಹುಕಾರರು ಭೂಪೆನ್ ಬಾಬು ಕೈಹಿಡಿದುಕೊಂಡು ತಮಗೆ ಬರುತ್ತಿದ್ದ ಹರಕು ಮುರಕು ಹಿಂದಿಯಲ್ಲಿ

" ಭಾಳ ಸೊಗಸಾಗಿ ಮಾತಾಡಿದಿರಿ ಸಾರ್. ನಾನೊಬ್ಬ ಸಾಧಾರಣ ವರ್ತಕ. ನನ್ನ ಭೋ ಹೊಗಳಿಬಿಟ್ರಿ "

" ಹಾಗಲ್ಲ ಸಾಹುಕಾರರೇ. ನಮ್ಮ ದೇಶದ ಕಲೆಗಳು ಬದುಕಿರುವುದೇ ನಿಮ್ಮಂಥ ಸುಸಂಸ್ಕೃತ ಸಾಹುಕಾರರಿಂದ. ನೀವು ಛತ್ತದ ಕಣಜ ಇದ್ದ ಹಾಗೆ; ನಾವು ಹಕ್ಕಿಗಳು ಇದ್ದ ಹಾಗೆ! "

ಎಂದರು. ಸಾಹುಕಾರರು ಹಿಗ್ಗಿ ಹೋದರು.

" ಇನ್ನೂ ನಾಲ್ಕು ದಿವಸ ಇಲ್ಲೇ ಇರೋದುಂಟೋ? "

" ಇಲ್ಲ – ನಾನೀಗಾಗಲೇ ಹಿಂದಿರುಗಬೇಕಾಗಿತ್ತು. 'ಪೂರ್ಣಿಮಾ ಪಿಕ್ಚರ್ಸ್' ಕಂಪೆನಿಗೆ ಒಂದು ಹಿಂದೀ ಚಿತ್ರ ಮಾಡಿಕೊಡಲು ಒಪ್ಪಿಕೊಂಡಿದ್ದೇನೆ. "

ಸಾಹುಕಾರರ ಮುಖ ಸ್ವಲ್ಪ ಇಳಿದುಹೋಯಿತು. ಅವರು ಚಿನ್ನಪ್ಪನ ಕಡೆ ತಿರುಗಿ

" ಏನು ಚಿನ್ನಪ್ಪ – ಡೈರೆಕ್ಟರು ಹೊಂಟುಬಿಡ್ತಾರಂತೆ. "

ನಂಗೂ ಹಾಗೇ ಹೇಳಿದರು ಅಣ್ಣ. "

" ಇಲ್ಲೇ ಉಳಿಸಿಕೊಳ್ಳಾಕೆ ಆಗಾಕಿಲ್ವಾ. "

" ಕೇಳಿ ನೋಡಬೇಕು. "

" ಕೇಳಿ ಮಾತಾಡಿಬಿಡು. ಇಂಥಾವರ್ನ ಎಲ್ಲಾದ್ರೂ ಬಿಡೋದುಂಟಾ? "

ಚಿನ್ನಪ್ಪ ಭೂಪೆನ್ ಬಾಬುಗಳ ಸಮೀಪಕ್ಕೆ ಬಂದು

" ನೀವು ಇನ್ನೂ ಸ್ವಲ್ಪ ದಿವಸ ಇಲ್ಲೇ ಇರಬೇಕೆಂದು ನಮ್ಮ ಸಾಹುಕಾರರು ಸೂಚಿಸುತ್ತಾರೆ. "

" ಎಷ್ಟು ದಿವಸ ? "

" ಅದನ್ನು ನೀವೇ ಹೇಳಬೇಕು. ನಿಮ್ಮ ಸಹಾಯ ತೆಗೆದುಕೊಂಡು ಅವರು ಒಂದು ಚಿತ್ರ ಮಾಡಬೇಕೆಂದಿದ್ದಾರೆ."

ಭೂಪೇನ್ ಬಾಬು ಸಾಹುಕಾರರ ಕಡೆ ತಿರುಗಿ

" ನಿಮ್ಮ ವಿಶ್ವಾಸಕ್ಕೆ ನಾನು ತುಂಬಾ ಖುಶಿಯಾಗಿದ್ದೇನೆ. ನಾನು ಚಿತ್ರಮಾಡುವ ಯೋಚನೆ ಇಟ್ಟುಕೊಂಡು ಇಲ್ಲಿಗೆ ಬರಲಿಲ್ಲ, ಕೈಮೇಲೆ ಬಹಳ ಕೆಲಸವಿದೆ. ಏನು ಮಾಡಲಿ? "

" ಅಲ್ಲಾ ಸಾರ್. ನಮ್ಮ ಕಲೆ – ವ್ಯವಸಾಯ ಚೆನ್ನಾಗಬೇಕೂಂತ ಏಳಿದಿರಿ. ನೀವೇ ಅದಕ್ಕೆ ಸಅಯ ಮಾಡದಿದ್ರೆ ನಾವು ಅದನ್ನ ಮುಂದಕ್ಕೆ ತರೋದ್ಹೆಂಗೆ? "

"ಆಗಲಿ–ನಾಳೆಯ ತನಕ ಅವಕಾಶ ಕೊಡಿ–ನಾನು ಯೋಚನೆ ಮಾಡಿ ಹೇಳುತ್ತೇನೆ."

"ಯೋಚ್ನೆ ಮಾಡಿ ನಾನು ಬೇಡಾ ಅನ್ನಾಕಿಲ್ಲ – ಆದರೆ ನಾನು ಏಳಿದ್ದು ಒಪ್ಪಿಕೊಳ್ಳೋ ಅಂಗೆ ಯೋಚನೆ ಮಾಡಿ. ನಾಳೆ ದಿನ ಚೆನ್ನಾಗೈತೆ. ನೀವು 'ಹೂ' ಎಂದರೆ ಎಲ್ಲಾ ಮಾತಾಡ್ಬುಟ್ಟು ಇತ್ಯರ್ಥ ಮಾಡಿಬಿಡೋವ."

"ಆಗಬಹುದು"

ಎಂದು ಭೂಪೇನ್ ಹೇಳಿದರು.

ಸಾಹುಕಾರರನ್ನು ಕಾರಿಗೆ ಕಳಿಸಿಬರಲು ಚಿನ್ನಪ್ಪ ಹೋದ. ಅವನಿಗೆ ಸಾಹುಕಾರರು

"ಎಂಗಾದ್ರೂ ಮಾಡಿ ಅವರನ್ನ ಉಳಿಸ್ಕೋ ಚಿನ್ನಪ್ಪ. ಸರೋಜನ್ನ ಏನ್ರ ಅವರು ಏಳಿದ್ದು ? ಕೇಳ್ಡ್ಯಾ ನಮ್ಮ ತಾವೇ ಟಾರ್ (star) ಇದ್ರೂ ನಮ್ಗೆ ಗೊತ್ತಿಲ್ಲವಲ್ಲೋ ?"

"ಹಾಗೆ ಸಾಹುಕಾರರೇ – ಹಿತ್ತಲ ಗಿಡ ಮದ್ದಲ್ಲ."

"ಅದೇನೋ ನೋಡು. ಅವರನ್ನ ಬಿಡಬೇಡ. ಎಲ್ಲಾ ಮಾತಾಡಿ ಬಂದು ನಂಗೆ ತಿಳಿಸು. ನಾನು ಹೊತ್ತೀನೆ ಇಲ್ಲಿಗೆ ಬತ್ತೀನಿ – ಅದಿರಲಿ, ನನ್ನ ಉಪನ್ಯಾಸ ಎಂಗಾಯಿತ್ಲೇ ? "

" ನಾನೇನೋಂತಿದ್ದೆ ಸಾಹುಕಾರರೇ. ನಿಮ್ಮನ್ನ ನಂಬೋಂದೇ ಕಷ್ಟ."

" ಯಾಕ್ಲೇ ? "

" ಒಳ್ಳೆ ಖದೀಮರ ಹಾಗೆ ಕುಟ್ಟೆ ಬಜಾಯಿಸಿಬಿಟ್ಟರಿ. ನೀವು ಮಾತಾಡೋವಾಗ ಎಷ್ಟು ಸಲ ಚಪ್ಪಾಳೆ ಬಡಿದರು ನೋಡಿದಿರಾ ? "

ಸಾಹುಕಾರರು ಕಾರು ಹತ್ತಿ ಕುಳಿತು
" ಎಷ್ಟು ಗಂಟೇಗೆ ಬತ್ತೀ ? "
" ಐದು ಗಂಟೆ ಸುಮಾರಿಗೆ ಬರುತ್ತೇನೆ. ಎಲ್ಲೀಗೆ ಬರಲಿ ? "
" ನಾನೀಗ ಸರೋಜನ ಮನೇಗೆ ಊಟಕ್ಕೋಗ್ತೀನಿ–ಅಲ್ಲಿಗೇ ಬಾ. "
ಎಂದು ಹೇಳಿದರು.

ಚಿನ್ನಪ್ಪ ಆಫೀಸಿಗೆ ಹಿಂದಿರುಗಿದವನೇ ಸಂತೋಷದಿಂದ ಭೂಪೆನ್ ಬಾಬುಗಳ ಕೈಹಿಡಿದು ಕುಲಕಿ

" ಅಂತೂ ಕಾರ್ಯ ಸಾಧಿಸಿಬಿಟ್ಟಿರಿ. ಸಾಹುಕಾರರು ಹಿಗ್ಗಿಹೋಗಿದ್ದಾರೆ. ನಾಳೆ ಬೆಳಿಗ್ಗೆ ಎಲ್ಲಾ ಮಾತುಕತೆ ಮುಗಿಸಿಬಿಡೋಣ. "

" ನನ್ನದೇನು ಮ್ಯಾನೇಜರೇ – ಎಲ್ಲಾ ನಿಮ್ಮ ಸಾಹಸದ ಫಲ. "

" ಹಾಗಲ್ಲ ಸಾರ್. ನೀವು ಭಾಷಣದಲ್ಲಿ ಸರೋಜನನ್ನು ಪ್ರಶಂಸಿಸಿದಿರಿ ನೋಡಿ, ಅದರಿಂದ ಕಾರ್ಯ ಸಾಧನೆಯಾಯಿತು. ನಮ್ಮ ಸಾಹುಕಾರರು ಸುಲಭವಾಗಿ ಒಪ್ಪಿಕೊಳ್ಳೋ ಆಸಾಮಿ ಎಂದು ತಿಳಿದುಕೊಂಡಿದ್ದೀರೇನು ? "

ಭೂಪೆನ್ ಬಾಬು ಶಿವಾನಂದನಿಗೆ ತಮ್ಮ ಕೃತಜ್ಞತೆ ಅರ್ಪಿಸಲು ಮರೆಯಲಿಲ್ಲ. ಚಿನ್ನಪ್ಪ ತಾನು ಐದು ಗಂಟೆಗೆ ಸಾಹುಕಾರರನ್ನು ಕಾಣಬೇಕಾಗಿರುವ ವಿಷಯ ತಿಳಿಸಿ

" ಭೂಪೆನ್ ಬಾಬು. ನಾಳೆ ಕಾಂಟ್ರ್ಯಾಕ್ಟು ಆಗಿಬಿಡಬೇಕು. ಈಗ ಸ್ವಲ್ಪ ತಡವಾದರೂ ಕೆಲಸ ಕೆಟ್ಟು ಹೋಗುತ್ತದೆ. ಯಾರಾದರೂ ಬಂದು ಸಾಹುಕಾರರ ಮನಸ್ಸು ತಿರುಗಿಸಿಬಿಟ್ಟರೆ ನಾವು ಮಾಡಿದ ಕೆಲಸವೆಲ್ಲಾ ಹಾಳಾಗಿ ಹೋಗಿಬಿಡುತ್ತದೆ. "

" ನಾವೇನು ಮಾಡಬೇಕು ಹೇಳಿ."

" ನಡೆಯಿರಿ. ನಾನೂ ನಿಮ್ಮ ಜತೆ ಹೊಟೇಲಿಗೆ ಬರುತ್ತೇನೆ. ಶಿವಾನಂದರೂ ಬರುತ್ತಾರೆ. ವಿವರಗಳನ್ನು ಮಾತನಾಡಿ ನಿಮ್ಮ ಕಾಂಟ್ರ್ಯಾಕ್ಟ್ ಸಿದ್ಧ ಮಾಡೋಣ. ನಾನು ಲಾಯರನ್ನು ಕಂಡು ಅದನ್ನು ಸರಿಯಾಗಿ ಬರೆಯಿಸಿ ಬೆಳಿಗ್ಗೆ ಪ್ರತಿಗಳು ನಮ್ಮ ಕೈಗೆ ಬರುವ ಹಾಗೆ ಮಾಡುತ್ತೇನೆ. "

ಎಂದು ಹೇಳಿದ. ಭೂಪೆನ್ ಒಪ್ಪಿಕೊಂಡು ಚಿನ್ನಪ್ಪ, ಶಿವಾನಂದರೊಂದಿಗೆ ಹೊಟೇಲಿಗೆ ಹೋದರು.

ಊಟ ಮುಗಿಸಿ ತಾಂಬೂಲ ಸವಿಯುತ್ತ ಕುಳಿತಕೂಡಲೆ ಚಿನ್ನಪ್ಪ
" ವ್ಯವಹಾರದ ಭಾಗ ಮೊದಲು ಮುಗಿಸಿಬಿಡೋಣ. "
" ಆಗಬಹುದು. "

ಚಿತ್ರದ ಸಮಸ್ತ ಜವಾಬ್ದಾರಿಯೂ ನಿಮ್ಮದು. ನೀವು ಹೇಗೆ ಹೇಳಿದರೆ ಹಾಗೆ ನಾವು ಮಾಡುತ್ತೇವೆ. ಚಿತ್ರ ಚೆನ್ನಾಗಬೇಕಾದುದು ಮುಖ್ಯ. ನೀವು ಏನು ನಿರೀಕ್ಷಿಸುತ್ತೀರಿ ?"

"ನೋಡಿ ಚಿನ್ನಪ್ಪನವರೇ – ಕಥೆ, ಸಂಭಾಷಣೆ, ಸಿನಾರಿಯೋ ಸಿದ್ಧವಾಗಬೇಕಾದರೆ ಎರಡು ತಿಂಗಳಾಗುತ್ತದೆ. ಅದು ಸಿದ್ಧವಾಗುತ್ತಿರುವಂತೆ ನಾವು ರಿಹರ್ಸಲ್ ಆರಂಭಿಸಬೇಕು. ಎಲ್ಲಾ ಮೂರು ತಿಂಗಳು ಕೆಲಸ ವೆಂದಿಟ್ಟುಕೊಳ್ಳಿ. ಚಿತ್ರ ತಯಾರಿಕೆಗೆ ಸುಮಾರು ಒಭತ್ತು ತಿಂಗಳಾಗ ಬಹುದು ಆಮೇಲೆ ಎಡಿಟಿಂಗ್ ಮತ್ತು ಸೆನ್ಸಾರ್. ನಾನು ಒಟ್ಟು ಹದಿನೈದು ತಿಂಗಳು ಇದಕ್ಕೆ ವಿನಿಯೋಗಿಸಬೇಕಾಗುತ್ತದೆ."

"ಹೌದು – ಕೊನೆಯವರೆಗೂ ನೀವಿದ್ದು, ಚಿತ್ರಪ್ರದರ್ಶನ ಆರಂಭಿಸಬೇಕು. ಆಮೇಲೂ ನೀವು ಹೋಗುವ ಹಾಗೇ ಇಲ್ಲ. ಚಿತ್ರ ಎರಡು ತಿಂಗಳು ನಡೆದ ಕೂಡಲೆ ಮತ್ತೊಂದು ಚಿತ್ರ ಆರಂಭಿಸಬೇಕು. ನಮ್ಮ ನಿಮ್ಮ ಸಂಬಂಧ ಒಂದೇ ಚಿತ್ರಕ್ಕೆ ಮುಗಿಯಕೂಡದು."

"ಖಂಡಿತವಾಗಿ ಮುಗಿಯಕೂಡದು. ಇಲ್ಲಿಯೇ ನಿಂತು ನಾಲ್ಕಾರು ಒಳ್ಳೆಯ ಚಿತ್ರಗಳನ್ನು ಮಾಡಬೇಕೆಂದು ನನಗೂ ಆಸೆಯಿದೆ."

"ನಿಮಗೆ ಏನು ಕೊಡಬೇಕಾಗುತ್ತದೆ ?"

"ಅದೆನ್ನು ನಾನು ಹೇಗೆ ಹೇಳಲಿ. ನೀವೇ ನಿಶ್ಚಯಿಸಿ ಹೇಳಿ."

"ನಮಗೇನು ಗೊತ್ತು ಸ್ವಾಮಿ. ನಾವು ಚಿತ್ರ ಮಾಡುವುದಕ್ಕೆ ಹೊರಟಿರವುದು ಇದೇ ಮೊದಲು."

"ಚಿತ್ರ ಮಾಡುತ್ತಿರುವುದು ಇದೇ ಮೊದಲಾದರೂ ಆ ಬಗ್ಗೆ ನಿಮಗೆ ಬೇಕಾದಷ್ಟು ವಿಷಯ ಗೊತ್ತಿದೆ. ಯಾವ ಯಾವ ಚಿತ್ರಕ್ಕೆ ಯಾರು ಯಾರು ಎಷ್ಟು ಕೊಟ್ಟರು ಎನ್ನುವುದು ನಿಮಗೆ ತಿಳಿಯದ ವಿಷಯವಲ್ಲ."

"ಸ್ವಾಮಿ–ಅವರೆಲ್ಲಾ ದೊಡ್ಡ ಪ್ರೊಡ್ಯೂಸರುಗಳು. ಅನೇಕ ಚಿತ್ರಗಳು ಮಾಡಿ ಅವರಿಗೆ ಅನುಭವವಿರುತ್ತದೆ. ನಾವು ಇದೇ ಈ ರಂಗಕ್ಕೆ ಪ್ರವೇಶಿಸುತ್ತಿರುವವರು. ಇನ್ನೊಂದು ವಿಷಯ ನೀವು ಗಮನಿಸಬೇಕು. ಹಿಂದೀ, ತಮಿಳು ರಂಗ ಬಹಳ ವಿಶಾಲವಾದುದು. ಕನ್ನಡ ರಂಗ ಅವುಗಳಷ್ಟು ದೊಡ್ಡದಲ್ಲ. ಆ ಪ್ರಮಾಣದಲ್ಲಿ ಇಲ್ಲಿಯೂ ಖರ್ಚು ಮಾಡುವುದಕ್ಕೆ ಹೇ ಸಾಧ್ಯವಾಗುತ್ತದೆ–ನಮ್ಮ ಇತಿಮಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಹೇಳಿ."

ಭೂಪತಿನ್ ತಾವಾಗಿಯೇ ಹೇಳಲೊಲ್ಲರು; ಚಿನ್ನಪ್ಪ ಬಿಡಲಿಲ್ಲ. ಹೀಗೆ ಸ್ವಲ್ಪಕಾಲ ಇಬ್ಬರಿಗೂ ಜಗ್ಗಾಟವಾಯಿತು. ಶಿವಾನಂದ ಮಧ್ಯ ಮಾತ

ನಾಡುವುದು ಅನಿವಾರ್ಯವಾಯಿತು.

"ಭೂಪೆನ್ ಬಾಬು, ನಿಮ್ಮ ಕರಾರು ಹೇಳಿ. ಅವರ ಮೇಲೆ ಸ್ವಲ್ಪ ಹೆಚ್ಚು ಕಡಿಮೆ ಮಾಡಿ ನಿರ್ಣಯಿಸುವುದಕ್ಕೆ ಚಿನ್ನಪ್ಪನವರಿಗೆ ಅನುಕೂಲ ವಾಗುತ್ತದೆ."

ಭೂಪೆನ್ ಬಾಬು ಯೋಚಿಸಿ ಕೊನೆಗೆ ತಮ್ಮ ಕರಾರುಗಳನ್ನು ತಿಳಿಸಿದರು.

"ನನಗೆ ತಿಂಗಳಿಗೆ ಎರಡೂವರೆ ಸಾವಿರವಂತೆ ಕೊಡಬೇಕು. ಚಿತ್ರದ ಕೆಲಸಕ್ಕೆ ಓಡಿಯಾಡಿದರ ಟ್ರಾವಲಿಂಗ್ ಅಲೋಯನ್ಸ್, ದಿನಕ್ಕೆ ಇಪ್ಪತ್ತೈದು ರೂಪಾಯಿ ಬಾಟಾ, ಕೊಡಬೇಕು. ನನ್ನ ಮನೆಯ ಖರ್ಚಿಗೆ ತಿಂಗಳಿಗೆ ಮುನ್ನೂರು ರೂಪಾಯಿ ಕೊಡಬೇಕು."

"ಒಂದು ವರ್ಷದ ಲೆಕ್ಕ ಹಿಡಿದರೂ ಒಟ್ಟು ಮೂವತ್ತು ಮೂರು ಸಾವಿರದ.ಆರು ನೂರು ರೂಪಾಯಿ ಆಯಿತು. ಇನ್ನು ಸ್ಟಾರ್ ಎಷ್ಟು ಕೇಳು ತ್ತಾರೋ? ನಿಮಗೆ ಇಷ್ಟು ಹಣ ಕೊಡಬೇಕೆಂದು ನಾನು ಸಾಹುಕಾರರಿಗೆ ಹೇಳಿದರೆ ಅವರ ಎದೆ ಬಿಚ್ಚಿ ಹೋಗುತ್ತದೆ."

ಮುಂದಕ್ಕೆ ಮಾತು ನಿಂತೇ ಹೋಗುತ್ತದೆಂದು ಶಿವಾನಂದನಿಗೆ ಭಯ ವಾಯಿತು.

"ಭೂಪೆನ್ ಬಾಬು ನಿಮಗೆಷ್ಟು ರಿಯಾಯಿತಿ ಸಾಧ್ಯವೋ ತೋರಿಸಿ ಈ ಚಿತ್ರ ನೀವು ಕೈಗೆ ತೆಗೆದುಕೊಳ್ಳಬೇಕು. ಇದರಲ್ಲಿ ವಿಷಯ ಮುಖ್ಯ ಮಾಡಬಾರದಾಗಿ ನಾನು ಪ್ರಾರ್ಥಿಸಿಕೊಳ್ಳುತ್ತೇನೆ."

"ಮ್ಯಾನೇಜರೇ ಹೇಳಿಬಿಡಲಿ"

"ನಾನು ಹೇಳುವುದು ಇಷ್ಟೇ ಸ್ವಾಮಿ. ನೀವು ಕೇಳುತ್ತಿರುವುದು ಹೆಚ್ಚು ಎಂದು ನಾನು ಖಂಡಿತವಾಗಿ ಹೇಳುವುದಿಲ್ಲ ತಮಿಳು ಪ್ರೊಡ್ಯೂಸರ್ಸ್ ೫೦–೬೦ ಸಾವಿರ ಕೊಡುತ್ತಿರುವುದನ್ನೂ ನಾನು ಬಲ್ಲೆ. ಆದರೆ ನಮ್ಮ ಚೈತನ್ಯ ಅಷ್ಟು ದೂರ ಎಟಕುವುದಿಲ್ಲ ಎಂದು ಮಾತ್ರ ಹೇಳ ಬಯಸುತ್ತೇನೆ. ನನ್ನ ಸೂಚನೆಗೆ ನೀವು ಒಪ್ಪಿಕೊಂಡು ಈ ಕೆಲಸ ಆಗುಮಾಡಿ ಕೊಡಬೇಕು. ಟಿ. ಎ. ಎರಡನೆಯ ಕ್ಲಾಸು; ಮನೆಯ ಖರ್ಚು ನೀವು ಹೇಳಿದಂತೆ ಮುನ್ನೂರೇ ಆಗಬಹುದು; ತಿಂಗಳಿಗೆ ಸಾವಿರ ರೂಪಾಯಿನಂತೆ ಒಪ್ಪಿಕೊಂಡು ಸಂತೋಷವಾಗಿ ಕೆಲಸ ಆರಂಭಿಸಿ."

"ನನ್ನ ನಿರೀಕ್ಷಣೆಯ ಅರ್ಥವಾಯಿತಲ್ಲ ಚಿನ್ನಪ್ಪನವರೇ."

" ನೀವು ಒಪ್ಪಿಕೊಳ್ಳಿ ಸ್ವಾಮಿ – ಇದರಲ್ಲಿ ನಿಮಗಾಗುವ ನಷ್ಟವನ್ನು ನಾನು ಮುಂದಿನ ಚಿತ್ರದಲ್ಲಿ ಕಟ್ಟಿಕೊಡುತ್ತೇನೆ. "

ಭೂಪೆನ್ ಮಾತನಾಡದೆ ಕುಳಿತುಬಿಟ್ಟರು. ಚಿನ್ನಪ್ಪನ ಸಲಹೆಯನ್ನು ಅವರು ಒಪ್ಪುವುದಿಲ್ಲವೆಂದು ಶಿವಾನಂದನ ಮನಸ್ಸಿಗೆ ಭಾಸವಾಯಿತು. ಅವನು ಸ್ವಾತಂತ್ರ್ಯವಹಿಸಿ

" ನಾನು ಒಂದು ಮಾತು ಹೇಳಬಹುದೇ ಚಿನ್ನಪ್ಪನವರೇ."

" ಹೇಳಿ ಸ್ವಾಮಿ. "

" ಭೂಪೆನ್ ಬಾಬು – ನೀವು ನನ್ನ ಮಾತಿಗೆ ಬೆಲೆ ಕೊಡುವಿರಷ್ಟೇ ? "

" ಇದೇಕೆ ಹೀಗೆ ಹೇಳಿರುವಿರಿ. ನಾನು ಬಂದಿರುವುದೇ ನಿಮಗಾಗಿ ಯಲ್ಲವೇ ? "

" ನಾನು ಹೇಳುವ ಮೊತ್ತಕ್ಕೆ ಇಬ್ಬರೂ ಒಪ್ಪಿಕೊಂಡು ಬಿಡಬೇಕು. "

" ಹೇಳಿ "

ಎಂದು ಚಿನ್ನಪ್ಪ, ಭೂಪೆನ್ ಬಾಬು ಇಬ್ಬರೂ ಹೇಳಿದರು.

" ಟಿ. ಎ., ಮನೆಯ ಖರ್ಚು ಒಪ್ಪಿಕೊಂಡಂತೆ ಆಗಿದೆಯಲ್ಲವೇ ? "

" ಆಗಿದೆ. "

" ಚಿನ್ನಪ್ಪನವರ ಸಾವಿರವೂ ಬೇಡ ; ಭೂಪೆನ್ ಬಾಬುಗಳ ಎರಡು ಸಾವಿರದೈನೂರು ಬೇಡ–ಸಾವಿರದ ಇನ್ನೂರೈವತ್ತಕ್ಕೆ ಇಬ್ಬರೂ ಒಪ್ಪಿಕೊಂಡು ಬಿಡಿ. "

ಸ್ವಲ್ಪ ಕಾಲ ಸ್ಮಶಾನಮೌನ ಆವರಿಸಿತು. ಯಾರೂ ಮಾತನಾಡಲಿಲ್ಲ.

ಚಿನ್ನಪ್ಪ ಕತ್ತೆತ್ತಿ ನೋಡಿ

" ಏನು ಬಾಬುಜೀ "

ಎಂದ. ಭೂಪೆನ್ ಬಾಬು

" ಆಗಬಹುದು "

ಎಂದರು.

ಮೂವರ ಮನಸ್ಸೂ ಹಗುರವಾಯಿತು.

ಚಿನ್ನಪ್ಪ ಕೂಡಲೆ ಎದ್ದು

" ನಾನು ಹೋಗಿ ಬರುತ್ತೇನೆ. ಲಾಯರ್ ನೋಡಿಕೊಂಡು ಸಾಹುಕಾರರನ್ನು ಕಾಣಬೇಕಾಗಿದೆ. ಬೆಳಿಗ್ಗೆ ಶಿವಾನಂದರೇ, ಬಾಬುಗಳನ್ನು ಕರೆದುಕೊಂಡು ಆಫೀಸಿಗೆ ಬಂದುಬಿಡಿ. "

" ಎಷ್ಟು ಹೊತ್ತಿಗೆ? "

" ಹತ್ತೂವರೆ ಮೇಲೆ ಬನ್ನಿ. ಒಂಭತ್ತರಿಂದ ಹತ್ತೂವರೆ ವರೆಗೆ ರಾಹು ಕಾಲವಿದೆ. "

ಎಂದು ಹೇಳಿ ಹೊರಟ.

೧೧

ಸೋಮವಾರ ಬೆಳಿಗ್ಗೆ ರಾಹುಕಾಲಾನಂತರ ಎಲ್ಲರೂ ಚಿನ್ನಪ್ಪನ ಆಫೀಸಿನಲ್ಲಿ ಸೇರಿದರು.

ಸಾಹುಕಾರರು ಚಿನ್ನಪ್ಪನಿಗೆ

" ಈಗ ಏನೇನು ಆಗಬೇಕು ಚಿನ್ನಪ್ಪ " ಎಂದರು.

" ಮೊದಲು ಡೈರೆಕ್ಟರವರ ಕಾಂಟ್ರ್ಯಾಕ್ಟು."

" ಕೊನೆಗೆ ಕಥೆಯಾವದೂಂತೆ ಆಯ್ತು."

" ಶ್ರೀರಾಮ ಪಟ್ಟಾಭಿಷೇಕ."

" ಯಾವದಾದ್ರೂ ಶಿವಕಥೆ ಮಾಡಿದರೆ!"

" ರಾಮಾಯಣ ಜನಗಳಿಗೆ ಹಿಡಿದ ಹಾಗೆ ಇನ್ನು ಯಾವದೂ ಹಿಡಿಯಲ್ಲ ಸಾಹುಕಾರರೇ "

" ಹಾಕಿದ ಬಂಡ್ವಾಳಕ್ಕೆ ಮೋಸವಿಲ್ಲವಲ್ಲ."

" ಬಂಡ್ವಾಳಕ್ಕೆ ಮೋಸವಿಲ್ಲ—ಲಾಭ ನಮ್ಮ ಅದೃಷ್ಟ ಅವಲಂಬಿಸುತ್ತೆ."

ಸಾಹುಕಾರರು ಡೈರೆಕ್ಟರ್ ಕಡೆ ತಿರುಗಿ

" ನಂಗೆ ಇದು ಹೊಸ ಯಾಪಾರ. ನಿಮ್ಮನೆಲ್ಲಾ ನಂಬ್ಕೊಂಡು ಇದಕ್ಕೆ ಕೈಹಾಕ್ತೀನಿ. ನೀಯತ್ತಾಗಿ ಕೆಲಸ ಮಾಡೋದು ನಿಮ್ಮ ಬಾರ."

" ನಾವು ಚೆನ್ನಾಗಿ ಕೆಲಸ ಮಾಡಿ ಈ ಚಿತ್ರ ಯಶಸ್ವಿಯಾಗುವಂತೆ ಮಾಡಬೇಕಾದುದು ನಿಮ್ಮ ಸಲುವಾಗಿ ಮಾತ್ರವೇ ಅಲ್ಲ—ನಮ್ಮ ಸಲುವಾಗಿಯೂ ಹೌದು ಸಾಹುಕಾರರೇ. ನಾನು ದಕ್ಷಿಣ ಭಾರತದಲ್ಲಿ ಮಾಡುತ್ತಿರುವುದು ಇದೇ ಮೊದಲನೆಯ ಚಿತ್ರ. ಇದು ಕೆಟ್ಟುಹೋದರೆ ನನ್ನ ಭವಿಷ್ಯವೇ ಹಾಳಾಗಿಹೋಗುತ್ತದೆ."

ಭೂಪೆನ್ ಹೇಳಿದ ಮಾತು ಸಾಹುಕಾರರ ಮನಸ್ಸಿನ ಮೇಲೆ ಪರಿಣಾಮವನ್ನುಂಟುಮಾಡಿತು.

ಚಿನ್ನಪ್ಪ ಟೈಪಾಗಿ ಬಂದಿದ್ದ ಕಾಂಟ್ರ್ಯಾಕ್ಟಿನ ಫಾರ್ಮ್‌ಗಳನ್ನು ಸಾಹುಕಾರರ ಮೇಜಿನ ಮೇಲಿಟ್ಟ. ಅದರ ಒಂದು ಪ್ರತಿ ತೆಗೆದುಕೊಂಡು ಭೂಪೆನ್ ಬಾಬು ಕೂಲಂಕಷವಾಗಿ ಓದಿನೋಡಿ

" ಅಡ್ವಾನ್ಸ್ ವಿಷಯ ಕಾಣಿಸಿಲ್ಲ ಚಿನ್ನಪ್ಪನವರೇ."

" ಎಷ್ಟು ಕೊಡಬೇಕು ಸಾರ್."

" ಐದು ಸಾವಿರ ಕೊಡುವುದು ವಾಡಿಕೆ."

ಸಾಹುಕಾರರು ಚಿನ್ನಪ್ಪ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡು ಅಡ್ವಾನ್ಸ್ ಹಣವನ್ನು ಎರಡು ಸಾವಿರದೈನೂರಕ್ಕೆ ಇಳಿಸಿದರು. ಭೂಪೆನ್ ಬಾಬು ಒಪ್ಪಿಕೊಳ್ಳದೆ ವಿಧಿಯಿರಲಿಲ್ಲ.

ಕಾಂಟ್ರ್ಯಾಕ್ಟಿಗೆ ಸಾಹುಕಾರರೂ, ಭೂಪೆನ್ ಬಾಬು ಸಹಿ ಹಾಕಿದರು. ಶಿವಾನಂದ ಸಾಕ್ಷಿ ಹಾಕಿದ. ಸಾಹುಕಾರರು ಮೆಲ್ಲನೆ ಚೆಕ್ ಪುಸ್ತಕ ತೆಗೆದು ಚಿನ್ನಪ್ಪನ ಕೈಯಲ್ಲಿಟ್ಟರು. ಚಿನ್ನಪ್ಪ ಚೆಕ್ ಬರೆದು ಸಾಹುಕಾರರ ಸಹಿ ಹಾಕಿಸಿದ. ಸಾಹುಕಾರರು ಚೆಕ್ಕನ್ನು ಭೂಪೆನ್ ಬಾಬು ಕೈಯಲ್ಲಿಡುತ್ತಾ

"ನಾಳ್ನಿಂದ್ಲೇ ಕೆಲಸ ಆರಂಭಿಸ್ತೀರಿ ತಾನೆ."

" ನಾಳೆ ಮಂಗಳವಾರ ಸಾಹುಕಾರರೇ–ಗುರುವಾರದಿಂದ ಆರಂಭಿಸಲಿ"

ಎಂದು ಚಿನ್ನಪ್ಪ ಸೂಚಿಸಿದ. ಸಾಹುಕಾರರು ಆಗಬಹುದೆಂದರು.

" ಸ್ಟೂಡಿಯೋ ಕಾಂಟ್ರ್ಯಾಕ್ಟ್ ಮಾಡಿಕೊಂಡುಬಿಟ್ಟರೆ, ಅಲ್ಲಿ ಅವರು ಸಿದ್ಧವಾಗುವುದರೊಳಗೆ ನಾವೂ ಇಲ್ಲಿ ಸಿದ್ಧನಾಗಬಹುದು"

ಎಂದು ಚಿನ್ನಪ್ಪ ಹೇಳಿದ.

" ನೀನೂ ಡೈರೆಕ್ಟ್ರೂ ಹೋಗಿ ಸ್ಟೂಡಿಯೋ ಕರಾರು ಮಾಡಿಕೊಂಡು ಬನ್ನಿ."

" ಅದಕ್ಕೆ ನೀವೂ ಬರಬೇಕು ಅಣ್ಣಾ."

" ಬತ್ತೀನಿ. ಬುಧವಾರ ಹೋಗಿ ಬರೋಣ. ನೀನು ಅವರಿಗೆ ಕಾಗದ ಬರೆದು ತಿಳಿಸಿಬಿಡು."

" ಹೊರಗಿನಿಂದ ಸ್ಟಾರ್ ಕರೆದುಕೊಂಡು ಬರುವ ವಿಷಯ ಏನು ಮಾಡೋಣ ?"

" ಸರಿಯಾದವರು ಯಾರವ್ರೆ ?"

" ನಿಪ್ಪಾಣಿ ಶಾಮಲಾಬಾಯ್ ಒಳ್ಳೆಯ ಹೆಸರು ಗಳಿಸಿಕೊಂಡಿದ್ದಾಳೆ. ಅವಳಿಗೆ ಕನ್ನಡವೂ ಬರುತ್ತದೆ. ಅವಳನ್ನು ಕರೆಯಬಹುದು ಎಂದು ಡೈರೆಕ್ಟರ್ ಹೇಳುತ್ತಾರೆ. ಆದರೆ ಅವೆಲ್ಲಾ ಬಿಳೀ ಕುದುರೆಗಳು ಅಣ್ಣಾವ್ರೆ."

" ಅವಳು ಎಷ್ಟು ಕೇಳ್ತಾರೆ ಸ್ವಾಮಿ "

ಎಂದು ಡೈರೆಕ್ಟರನ್ನು ಕೇಳಿದರು.

" ಮೂವತ್ತು ಸಾವಿರಕ್ಕೆ ಕಡಿಮೆ ಆಕೆ ಒಪ್ಪುವ ಹಾಗಿಲ್ಲ."

ಆ ಮೊತ್ತವನ್ನು ಕೇಳಿ ಚಿನ್ನಪ್ಪ ಬೆಚ್ಚಿ

"ಇದು ಯಾವ ದೇವರಿಗೆ ಪ್ರೀತಿ ಅಣ್ಣಾವರೇ. ಅವಳು ಬಂದು ಹಾಕುವುದೇನು ನಮಗೆ ಚಿನ್ನದ ಕಳಶ–ಸರೋಜಮ್ಮನಿಗಿಂತಲೂ ಇನ್ನು ಸ್ಟಾರ್ ಬೇಕೇ? ಸುಮ್ಮನೆ ಹೊರಗಿನವರಿಗೆ ಋಣ ತೆರುವುದು ನನ್ನ ಮನಸ್ಸಿಗೆ ಬರುವುದಿಲ್ಲ ಅಣ್ಣಾ."

ಸಾಹುಕಾರರು ತಲೆಯ ಮೇಲಿದ್ದ ರುಮಾಲನ್ನು ಮೇಜಿನ ಮೇಲಿಟ್ಟು, ತಲೆಯ ಮೇಲೆ ಕೈಯಾಡಿಸುತ್ತಾ

"ಹಂಗಲ್ಲ ಚಿನ್ನಪ್ಪ. ನನ್ನ ಧ್ಯೇಯ ಒಂದೈತೆ ನೋಡು. ಈಗ ಕಾಸಿನ ಮಕ ನೋಡ್ತಾ ಕುಂತ್ರೆ ಆಗ್ತೈತೇನೋ?—ನಾವು ಯೋಸ್ನೆ ಮಾಡಿದ್ದ ವಿಷಯ ಮರ್ತುಬಿಟ್ಯಾ? ನಿಮಗೆ ಆ ಶಾಮೀಬಾಯ್ ಗೊತ್ತೇನು ಡೈರೆಕ್ಟರೇ?"

"ನನಗೆ ಆಕೆಯ ಪರಿಚಯವಿಲ್ಲ. ಆದರೆ ನನ್ನ ಸ್ನೇಹಿತರು 'ಯೂನಿವರ್ಸಲ್ ಪಿಕ್ಚರ್ ಸರ್‌ಕ್ಯೂಟ್'ನ ಮ್ಯಾನೇಜಿಂಗ್ ಡೈರೆಕ್ಟರ್ ಮಾಣಿಕ್ ದಾದರ್‌ಕರ್ ಅವರಿಗೆ ಚೆನ್ನಾಗಿ ಪರಿಚಯವಿದೆ. ಅವರ ಮೂಲಕ ನಾವು ಶಾಮಲಾಬಾಯಿಯನ್ನು ಬುಕ್ (Book) ಮಾಡಬಹುದು."

"ಆಕೆ ಎಲ್ಲವಳೆ?"

"ಬೊಂಬಾಯಿಯಲ್ಲಿ."

"ನೀವು ಚಿನ್ನಪ್ಪ ಹೋಗಿ ಆ ಕೆಲಸ ಮುಗಿಸಿಕೊಂಡು ಬಂದು ಬಿಡಿ."

ಭೂಪೆನ್ ಬಾಬು ತಲೆಯಳ್ಳಾಡಿಸುತ್ತ

"ಅದೊಂದು ಕೆಲಸ ನನಗೊಪ್ಪಿಸಬೇಡಿ ಸಾಹುಕಾರರೇ. ನೀವೂ ಚಿನ್ನಪ್ಪನವರೂ ಹೋಗಿ ಆ ಕೆಲಸ ಮಾಡಿಕೊಂಡು ಬರಬಹುದು. ನಾನು ಮಾಣಿಕ್ ಬಾಬೂಗಳಿಗೆ ಪರಿಚಯಪತ್ರ ಕೊಡುತ್ತೇನೆ."

"ಅಂಗೇ ಆಗ್ಲಿ. ನಮ್ಮ ಜತೇಗೆ ಶಿವಾನಂದರು ಬತ್ತಾರೆ."

ಎಂದು ಹೇಳಿದರು.

ಕಾರ್ಯಕ್ರಮವನ್ನು ವ್ಯವಸ್ಥೆಮಾಡುವುದು ಚಿನ್ನಪ್ಪನಿಗೆ ಸಮಸ್ಯೆಯಾಯಿತು.

"ಬೊಂಬಾಯಿಗೆ ಯಾವಾಗ ಹೋಗೋದು, ಮದರಾಸಿಗೆ ಯಾವಾಗ ಹೋಗೋದು ಸ್ವಾಮಿ?"

ಎಂದು ಕೇಳಿದ. ಚಿನ್ನಪ್ಪನ ಸಮಸ್ಯೆ ಅರ್ಥಮಾಡಿಕೊಂಡ ಭೂಪೆನ್ ಬಾಬು

"ಹೀಗೆ ಮಾಡಿ ಚಿನ್ನಪ್ಪನವರೇ. ನಾಡಿದ್ದು ಬುಧವಾರ ಸಾಹುಕಾರರು, ನೀವು, ನಾನು, ಶಿವಾನಂದರು ಮದರಾಸಿಗೆ ಹೋಗಿ ಸ್ಟೂಡಿಯೋ ಕಾಂಟ್ರ್ಯಾಕ್ಟ್ ಮುಗಿಸಿಕೊಂಡು ಬರೋಣ. ನೀವು ಬೇಗ ಕಥಾ ಲೇಖಕರನ್ನು ಗೊತ್ತುಮಾಡಿ ನನ್ನ ವಶಕ್ಕೆ ಕೊಟ್ಟುಬಿಟ್ಟರೆ ಅವರೂ ನಾನೂ ಕಥೆಯ ಕೆಲಸ ಆರಂಭಿಸುತ್ತೇವೆ. ನೀವೂ, ಸಾಹುಕಾರರೂ, ಶಿವಾನಂದರೂ ಬೊಂಬಾಯಿಗೆ ಹೋಗಿ ಶಾಮಲಾಬಾಯಿಯ ಭೆಟ್ಟಿಯಾಗಿ ಬನ್ನಿ."

"ಅಂಗೇ ಮಾಡೋಣ ಚಿನ್ನಪ್ಪ"

ಎಂದು ಸಾಹುಕಾರರು ತಮ್ಮ ಒಪ್ಪಿಗೆಯ ಮುದ್ರೆಯನ್ನೊತ್ತಿದರು.

ಸಾಹುಕಾರರು ಹೋದ ಮೇಲೆ ಭೂಪೆನ್ ಬಾಬು ಚಿನ್ನಪ್ಪನಿಗೆ

"ನನ್ನ ಕಾರಾರಿನಲ್ಲಿ ಸೂಚಿಸಿದ್ದ ಹಣವನ್ನು ಅರ್ಧಕ್ಕೆ ಇಳಿಸಿದಿರಿ. ಅಡ್ವಾನ್ಸ್ ಹಣವನ್ನೂ ಅರ್ಧಕ್ಕೆ ಇಳಿಸಿಬಿಟ್ಟಿರಲ್ಲಾ ಚಿನ್ನಪ್ಪನವರೇ?"

"ಅಸಮಾಧಾನಪಟ್ಟುಕೊಳ್ಳಬೇಡಿ ಡೈರೆಕ್ಟರ್ ಸಾಹೇಬರೇ. ನಮ್ಮ ಸಾಹುಕಾರರ ಸ್ವಭಾವ ನಿಮಗಿನ್ನೂ ಗೊತ್ತಿಲ್ಲ. ಸ್ವಲ್ಪ ಅವರ ಮರ್ಜಿ ಹಿಡಿದು ಹೋಗಿ ಅನಂತರ ಅವರನ್ನು ನಮ್ಮ ಕಡೆಗೆ ತಿರುಗಿಸಿಕೊಳ್ಳಬೇಕು. ಅವರು ಮೊಂಡು ಹಿಡಿದುಬಿಟ್ಟರೆ ಬಹಳ ಕಷ್ಟವಾಗುತ್ತದೆ. ಯಾರು ಹೇಳಿದರೂ ಅವರು ಮನಸ್ಸು ಬದಲಾಯಿಸುವುದಿಲ್ಲ. ಶಾಮಲಾಬಾಯಿಯ ವಿಷಯ ನೋಡಿದಿರೋ ಇಲ್ಲವೋ—ಹೊರಗಿನಿಂದ ಆಕೆಯನ್ನು ಕರೆಸಿ ಆಕೆಯುದ್ದಕ್ಕೂ ಹಣ ಸುರಿಯುವುದು ಬೇಡವೆಂದು ನಾನೆಷ್ಟು ಹೇಳಿದೆ. ಆ ವಿಷಯದಲ್ಲಿ ಅವರ ಮನಸ್ಸು ದೃಢವಾಗಿಬಿಟ್ಟಿದೆ—ಅದಕ್ಕೋಸುಗ ಎಲ್ಲಿ ಪಟ್ಟು ಹಿಡಿದುಬಿಡುತ್ತಾರೋ ಎನ್ನುವ ಭಯದಿಂದ ನಾನು ನಿಮ್ಮಿಂದ ಸ್ವಲ್ಪ ರಿಯಾಯಿತಿ ಬೇಡಬೇಕಾಗುತ್ತದೆ—ನಿಮ್ಮ ಜತೆಯಲ್ಲಿ ನಾನಿರುವಾಗ ನೀವು ಹಣಕ್ಕಾಗಿ ಯೋಚನೆ ಮಾಡಬೇಕಾದ ಕಾರಣವೇ ಇಲ್ಲ. ನಿಮಗೆ ತೊಂದರೆಯಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ನನಗಿರಲಿ."

ಭೂಪೆನ್ ಬಾಬುಗಳ ಮನಸ್ಸಿಗೆ ನೆಮ್ಮದಿಯಾಯಿತು.

"ನೀವು ಮದರಾಸಿಗೆ ರಾಮಾನುಜಂ ಅವರಿಗೆ ಕಾಗದ ಬರೆಯಿರಿ. ನಾನು ಜೋಗೆನ್ ಬಾಬುಗಳಿಗೆ ಬರೆಯುತ್ತೇನೆ. ಕಥಾಲೇಖಕರ ವಿಷಯ ಏನು ಮಾಡಿದಿರಿ—ಆನಂದ್ ಬಾಬು, ನೀವು ಪಾರ್ಟಿಯಲ್ಲಿ ಪರಿಚಯ ಮಾಡಿಸಿದರಲ್ಲಾ ಅವರನ್ನು ಬರಮಾಡುವಿರಾ?"

"ಚಿನ್ನಪ್ಪನವರು ಆಗಲಿ ಎಂದರೆ ಕರೆದುಕೊಂಡು ಬರುತ್ತೇನೆ."

"ಕರೆದುಕೊಂಡು ಬನ್ನಿ ಶಿವಾನಂದರೇ."

"ಸಂಜೆಗೆ ನಾನು ಸುದರ್ಶನರನ್ನು ಹೊಟೇಲಿಗೆ ಕರೆದುಕೊಂಡು ಬರುತ್ತೇನೆ. ನೀವೂ ಬರುತ್ತೀರಾ ಚಿನ್ನಪ್ಪ."

"ನಾನು ಏತಕ್ಕೆ? ನೀವೇ ಎಲ್ಲಾ ಮಾತನಾಡಿರಿ – ಬುಧವಾರದ ಪ್ರಯಾಣದ ಸಿದ್ಧತೆ ನಾನು ಮಾಡಬೇಡವೇ?"

ಭೂಪೆನ್ ಬಾಬು ಶಿವಾನಂದನನ್ನು ಜತೆಯಲ್ಲಿ ಕರೆದುಕೊಂಡು ಹೊರಟರು. ಸ್ವಲ್ಪ ದೂರ ಹೋದ ತರುವಾಯ

"ಶಿವಾನಂದ್, ಈ ಮೈಸೂರು ಬ್ಯಾಂಕೆಲ್ಲಿದೆ?"

"ನಾವು ಹೋಗುವ ರಸ್ತೆಯಲ್ಲಿಯೇ ಸಿಕ್ಕುತ್ತದೆ. ಚೆಕ್ ಕ್ಯಾಷ್ ಮಾಡಬೇಕಾಗಿತ್ತೇನು?"

"ಕ್ಯಾಷ್ ಮಾಡಲೇ ಬೇಕಾಗಿದೆ. ನಾನು ಊರಿನಿಂದ ಹೊರಡುವಾಗ ಸರಿಯಾಗಿ ಬಟ್ಟೆಬರೆಗಳನ್ನು ಕೂಡ ತರಲಿಲ್ಲ. ಕೈಯಲ್ಲಿದ್ದ ದುಡ್ಡು ಪ್ಲೇನಿನ ಖರ್ಚಿಗೆ ಆಗಿಹೋಯಿತು."

ಶಿವಾನಂದ ಭೂಪೆನ್ ಬಾಬುಗಳನ್ನು ಮೈಸೂರು ಬ್ಯಾಂಕಿಗೆ ಕರೆದೊಯ್ದು ಅವರ ಚೆಕ್ ಕ್ಯಾಷ್ ಮಾಡಿಸಿ ಕೈಯಲ್ಲಿ ಹಣ ಕೊಟ್ಟ. ಬಾಬುಗಳನ್ನು ಹೋಟೆಲಿಗೆ ಕಳುಹಿಸಿ ತಾನು ಸಂಜೆ ಐದು ಗಂಟೆಗೆ ಸುದರ್ಶನನೊಂದಿಗೆ ಬಂದು ಕಾಣುವುದಾಗಿ ತಿಳಿಸಿ ಮನೆಯ ಕಡೆ ಹೊರಟ.

ಭೂಪೆನ್ ಬಾಬು ಊಟ ಮುಗಿಸಿ ಕೂಡಲೆ ಜೊಗೆನ್ ಬಾಬುಗಳಿಗೂ, ಮಾನಿಕ್ ದಾದರ್‌ಕರ್ ಅವರಿಗೂ ಕಾಗದ ಬರೆದು ಪೇಟೆಗೆ ಹೋಗಿ ತಮ್ಮ ಉಪಯೋಗಕ್ಕೆ ಬೇಕಾಡ ಕೆಲವು ಸಾಮಾನುಗಳನ್ನೂ ಬಟ್ಟೆಬರೆಗಳನ್ನೂ ಕೊಂಡುತಂದರು.

ಆಕಸ್ಮಿಕವಾಗಿ ಒದಗಿಬಂದ ಈ ಅದೃಷ್ಟ ಕಂಡು ಭೂಪೆನ್ ಬಾಬುಗಳಿಗೆ ಆಶ್ಚರ್ಯವಾಗಿತ್ತು. 'ಜೀವನವೆಲ್ಲಾ ಒಂದು ಜೂಜು' ಎಂದು ನಂಬಿದ್ದ ಅವರು ಅರೆಮನಸ್ಸಿನಿಂದಲೇ ಶಿವಾನಂದನ ತಾರಿಗೆ ಓಗೊಟ್ಟು ಬೆಂಗಳೂರಿಗೆ ಬಂದಿದ್ದರು. ತಮ್ಮ ಜೀವನಜೂಜಿನ ಕುದುರೆ ಗೆದ್ದು ತಮ್ಮ ಭಾಗ್ಯದ ಬಾಗಿಲು ಬೆಂಗಳೂರಿನಲ್ಲಿ ತೆರೆದುದನ್ನು ಕಂಡು ಬಾಬು ಸುಪ್ರೀತರಾಗಿದ್ದರು.

ಐದು ಗಂಟೆಗೆ ಮುಂಚೆಯೇ ಶಿವಾನಂದ ಸುದರ್ಶನರನ್ನು ಕರೆದುಕೊಂಡು ಬಂದ. ಈಗಾಗಲೇ ಅವರಿಗೆ ಪರಿಚಯವಾಗಿದ್ದುದರಿಂದ ಶಿವಾನಂದ ಶ್ರಮ ತೆಗೆದುಕೊಳ್ಳಬೇಕಾಗಿರಲಿಲ್ಲ.

"ಅವತ್ತು ನಾವು ಮಾತನಾಡುವುದಕ್ಕಾಗಲಿಲ್ಲ."

“ಅಲ್ಲಿ ಹೇಗಾಗುತ್ತದೆ. ಜನಸಂದಣಿ. ನಿಮ್ಮ ಭಾಷಣ ಚೆನ್ನಾಗಿತ್ತು.”

“ನನಗೆ ಭಾಷಣಮಾಡಿ ಅಭ್ಯಾಸವಿಲ್ಲ. ಕರ್ತವ್ಯಕ್ಕೆ ಕಟ್ಟುಬಿದ್ದು ನಾಲ್ಕು ಮಾತಾಡಿದೆ. ನೀವು ಒಳ್ಳೆಯ ವಾಗ್ಮಿಗಳೆಂದು ಕೇಳಿದ್ದೇನೆ.”

“ಶಿವಾನಂದರು ನನ್ನ ಬಗ್ಗೆ ಬಹಳ ಉತ್ಪ್ರೇಕ್ಷೆಮಾಡಿ ಹೇಳಿದ್ದಾರೆಂದು ಕಾಣುತ್ತದೆ.”

“ಅವರ ಭಾಷಣ ಒಮ್ಮೆ ನೀವು ಕೇಳಿದರೆ ಗೊತ್ತಾಗುತ್ತದೆ ಬಾಬು, ನಾನು ಉತ್ಪ್ರೇಕ್ಷೆ ಮಾಡಿದ್ದೇನೆಯೋ ನಿಜಸಂಗತಿ ಹೇಳಿದ್ದೇನೆಯೋ ಎನ್ನುವುದು.”

“ನಾವು ಮಾಡುತ್ತಿರುವ ಪ್ರಯತ್ನದ ಬಗ್ಗೆ ಶಿವಾನಂದರು ನಿಮಗೆ ಹೇಳಿರಬಹುದು.”

“ಕನ್ನಡದಲ್ಲಿ ಚಿತ್ರ ತೆಗೆಯಲು ನಿರ್ಧರಿಸಿರುವುದಾಗಿ ಹೇಳಿದರು. ನನಗೂ ಆ ವಿಷಯದಲ್ಲಿ ತುಂಬಾ ಉತ್ಸಾಹವಿದೆ.”

“ಈ ವೇಳೆಗೆ ಯಾವುದಾದರೂ ಚಿತ್ರದಲ್ಲಿ ಕೆಲಸಮಾಡಿರುವಿರಾ ?”

“ಕೆಲಸ ಮಾಡಿಲ್ಲ. ಕೆಲವು ಚಿತ್ರಗಳ ದಿಗ್ದರ್ಶನ ನೋಡಿದ್ದೇನೆ.”

“ಸಿನೀಮಾ ಯಾಂತ್ರಿಕಕಲೆ. ಅದರ ಪರಿಮಿತಿಗೆ ನಮ್ಮ ಬುದ್ಧಿಯನ್ನು ಅಡಗಿಸಿಕೊಳ್ಳಬೇಕಾಗುತ್ತದೆ–ನೀವು ನಾಟಕಗಳನ್ನು ಬರೆದಿರಬಹುದು.”

“ಹದಿಮೂರು ನಾಟಕಗಳನ್ನು ಬರೆದಿದ್ದಾರೆ ಬಾಬು.”

ಎಂದು ಶಿವಾನಂದ ಹೇಳಿದ.

“ನೋಡಿ, ನಾಟಕಕ್ಕೂ ಸಿನೀಮಾಕ್ಕೂ ಬಹಳ ವ್ಯತ್ಯಾಸವಿದೆ. ನಾಟಕದಲ್ಲಿ ಸನ್ನಿವೇಶಗಳನ್ನು ಏಕೀಕೃತ ಮಾಡುತ್ತೇವೆ. ಸಿನೀಮಾದಲ್ಲಿ ಅವುಗಳನ್ನು ಭಿನ್ನ ಭಿನ್ನ ಮಾಡುತ್ತೇವೆ. ಸಿನೀಮಾದ ಭಿನ್ನತೆಗನುಗುಣವಾಗಿ ಸಂಭಾಷಣೆ ಹೊಂದಿಕೊಳ್ಳಬೇಕು.”

“ಸಿನೀಮಾ ಬರವಣಿಗೆಯಲ್ಲಿ ಸಂಕ್ಷಿಪ್ತತೆಯಿದ್ದರೂ ಸಂಕೋಚವಿರಬಾರದು.”

“ಎಷ್ಟು ಬೇಗ ವಿಷಯಗಳನ್ನು ಗ್ರಹಿಸುತ್ತೀರಿ.”

“ಶ್ರೀರಾಮ ಪಟ್ಟಾಭಿಷೇಕ ಕಥೆ ಆರಿಸಿರುವಿರಂತೆ !”

“ಹೌದು–ನಿಮ್ಮ ಭಾಷೆಯಲ್ಲಿ ಅದರ ಮೇಲೆ ಕಾವ್ಯಗಳಿವೆಯೇ ?”

“ಬೇಕಾದಷ್ಟಿದೆ. ರಾಮಾಯಣದ ಭಾರ ತಡೆಯಲಾರದೆ ಫಣಿರಾಯ ಶಿಣಿಕಿದನೆಂದು ನಮ್ಮಲ್ಲಿ ಒಂದು ಪ್ರತೀತಿಯಿದೆ. ಬಂಗಾಳಿಯಲ್ಲಿ ಕೃತ್ತಿವಾಸನ

ರಾಮಾಯಣ ಹೇಗೋ ಹಾಗೆ ಕನ್ನಡದಲ್ಲಿ ಕುಮಾರ ವಾಲ್ಮೀಕಿಯ ರಾಮಾಯಣವಿದೆ. ದೊಡ್ಡ ಕಾವ್ಯ."

" ಬಾಬು ನಿಮಗೆ ಬಂಗಾಳಿ ಬರುತ್ತದೆಯೇ ? "

" ಇಲ್ಲ. ಇಂಗ್ಲಿಷ್ ಅನುವಾದಗಳನ್ನು ಮಾತ್ರ ಓದಿದ್ದೇನೆ. ಬಂಗಾಳಿ ಕಲಿಯಬೇಕೆಂದು ತುಂಬ ಆಸೆಯಿದೆ."

" ನಾನು ಕಲಿಸಿಕೊಡುತ್ತೇನೆ–ನೀವು ನನಗೆ ಕನ್ನಡ ಕಲಿಸಿಕೊಡಿ."

" ಆಗಬಹುದು. ಭೂಪೆನ್ ಬಾಬು, ನನಗೊಂದು ಸಂದೇಹವಿದೆ ಕೇಳಲೇ–ನೀವು ಮನಸ್ಸಿಗೆ ಏನೂ ತಿಳಿದುಕೊಳ್ಳಬೇಡಿ."

" ಇಲ್ಲ ಕೇಳಿ."

ನಿಮಗೆ ಕನ್ನಡ ಬರುತ್ತದೆಯೇ ? "

" ಸ್ವಲ್ಪವೂ ಬರುವುದಿಲ್ಲ. ನಮ್ಮ ಶಿವಾನಂದ ಬಾಬು ಕಲ್ಕತ್ತೆಯಲ್ಲಿದ್ದಾಗ ಕೆಲವು ಶಬ್ದಗಳನ್ನು ಕಲಿಸಿಕೊಟ್ಟರು–ಅಲ್ಲಿಗೆ ನನ್ನ ಪಾಂಡಿತ್ಯ ನಿಂತು ಹೋಯಿತು."

" ಕನ್ನಡ ಬರದೆ ಕನ್ನಡಚಿತ್ರ ಮಾಡುವುದು ಸ್ವಲ್ಪ ಕಷ್ಟವಲ್ಲವೇ ? "

" ಅದಕ್ಕೇ ನಾನು ನಿಮ್ಮ ಸಹಾಯ ಕೋರಿದುದು. ನೀವು ಚಿತ್ರ ನಾಟಕ(film script) ಸಿದ್ಧಗೊಳಿಸಿ ಅದನ್ನು ನನಗೆ ಇಂಗ್ಲಿಷಿಗೆ ಅನುವಾದ ಮಾಡಿಕೊಡಬೇಕು. ಹಾಗೇ ಮೂಲವನ್ನು ನನಗೆ ಹೇಳಿ ಬರೆಯಿಸಬೇಕು. ನಾನು ಬಂಗಾಳಿಯಲ್ಲಿ ಬರೆದುಕೊಂಡು ಪಾಠ ಮಾಡಿಕೊಳ್ಳುತ್ತೇನೆ."

"ದ್ರಾವಿಡ ಪ್ರಣಾಯಾಮವಾಯಿತು."

" ಸುದರ್ಶನ ಬಾಬು, ನಿಮಗೆ ಕೆಲಸ ವಿಪರೀತವಾಗುತ್ತದೆ, ಆದರೂ ನೀವು ದೊಡ್ಡಮನಸ್ಸು ಮಾಡಿ ಒಪ್ಪಿಕೊಳ್ಳಬೇಕು. ನನ್ನ ಮಿತ್ರರು ಶಿವಾನಂದರು ನನ್ನನ್ನು ಇಲ್ಲಿಗೆ ಬರಮಾಡಿಕೊಂಡು ಈ ಅವಕಾಶ ಕಲ್ಪನೆ ಮಾಡಿಕೊಟ್ಟರು. ಅವರ ಋಣ ನಾನು ಎಂದೆಂದಿಗೂ ತೀರಿಸಲಾರೆ. ನೀವೂ ಅವರಂತೆ ನನ್ನ ಕೈಹಿಡಿದು ಮುಂದಕ್ಕೆ ನಡೆಸಬೇಕು. ಈ ದೇಶಕ್ಕೆ, ಇದರ ನಡೆವಳಿಕೆಗೆ, ಇದರ ಭಾಷೆಗೆ ನಾನು ಹೊಸಬ. ನಾನು ಹೊಸಬನೆಂಬುದನ್ನೂ ಲಕ್ಷಿಸದೆ ಸಾಹುಕಾರರು, ಚಿನ್ನಪ್ಪನವರು ನನ್ನನ್ನು ನಂಬಿ ಲಕ್ಷಾಂತರ ರೂಪಾಯಿ ಖರ್ಚುಮಾಡಲು ಸಿದ್ಧರಾಗಿದ್ದಾರೆ. ಅವರ ವಿಶ್ವಾಸ, ನಂಬಿಕೆ ನಾನು ಉಳಿಸಿಕೊಳ್ಳುವುದಕ್ಕೆನಿಮ್ಮ ಸಹಾಯಬೇಕು. "

" ಬಂಗಾಳ ಕರ್ನಾಟಕಕ್ಕೆ ಬಹಳ ದೂರದಲ್ಲಿದ್ದರೂ ಭಾರತದಿಂದ ದೂರವಿಲ್ಲವಲ್ಲ. ಈ ದೇಶದ ಮಕ್ಕಳಾದ ನಾವು ಹಲವು ಭಾಷೆಗಳನ್ನು ಮಾತ

ನಾಡುತ್ತೇವೆ, ಹಲವು ಬಗೆಯ ಆಹಾರ ಸೇವಿಸುತ್ತೇವೆ, ಹಲವು ಮತಗಳನ್ನು ಅನುಸರಿಸುತ್ತೇವೆ. ಆದರೆ ನಮ್ಮೆಲ್ಲರನ್ನೂ ನಮ್ಮ ರಾಷ್ಟ್ರ ಬಲವಾಗಿ ಬಿಗಿದಿಲ್ಲವೇ? ಬಂಗಾಳದಲ್ಲಿ ಪೂಜಿಸಲ್ಪಡುವ ಶ್ರೀರಾಮಚಂದ್ರನನ್ನೇ ಅಲ್ಲವೆ ಕನ್ನಡಿಗರಾದ ನಾವೂ ಪೂಜಿಸುವುದು—ಕನ್ನಡ ನಾಡಿನಲ್ಲಿ ಪೂಜಿಸಲ್ಪಡುವ ಶ್ರೀಕೃಷ್ಣನನ್ನೇ ಅಲ್ಲವೆ ಬಂಗಾಳದಲ್ಲಿ ನೀವೂ ಪೂಜಿಸುವುದು. ಇಲ್ಲಿ ಅವನನ್ನು ನಾವು ಕೃಷ್ಣ ಎನ್ನುತ್ತೇವೆ-ಅಲ್ಲಿ ನೀವು ಅವನನ್ನು ಶಾಮಸುಂದರ ಎನ್ನುತ್ತೀರಿ—ಇಷ್ಟೇ ತಾನೆ ವ್ಯತ್ಯಾಸ."

"ಈ ಭವ್ಯವಾದ ಮಾತುಗಳನ್ನು ನಾನು ಎಲ್ಲಿಯೋ ಕೇಳಿದಂತಿದೆ."

"ಹೌದು—ಕೇಳಿದ್ದೀರಿ. ನನ್ನ ಗುರುಸ್ವಾಮಿ ಶ್ರೀರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರು ಹೇಳಿದ್ದನ್ನೇ ನಾನು ನಿಮಗೆ ಹೇಳುತ್ತಿದ್ದೇನೆ."

ಶಿವಾನಂದ ಪರಮೋತ್ಸಾಹದಿಂದ

"ಬಾಬೂ, ಸುದರ್ಶನರು ಶ್ರೀ ರಾಮಕೃಷ್ಣ ಪರಮಹಂಸರು, ಸ್ವಾಮಿ ವಿವೇಕಾನಂದರ ಮೇಲೆ ಸೊಗಸಾದ ಗ್ರಂಥಗಳನ್ನು ಬರೆದಿದ್ದಾರೆ."

ಎಂದು ಹೇಳಿದ. ಸುದರ್ಶನರಿಗೆ ಆ ಸ್ತುತಿ ಬೇಕಾಗಿರಲಿಲ್ಲ. ಅವರ ಮುಖ ಗಂಭೀರವಾಯಿತು.

"ಅಯ್ಯೋ! ಅದೇನು ದೊಡ್ಡ ವಿಷಯವೆಂದು ಹೇಳುತ್ತಿರುವಿರಿ ಶಿವಾನಂದ್, ಸೂರ್ಯನನ್ನು ನಾನು ಪ್ರತಿಬಿಂಬಿಸುತ್ತೇನೆಂದು ಮುರುಕು ಕನ್ನಡಿ ಹೆಮ್ಮೆ ಪಡಬಹುದೇ?"

ಭೂಪೆನ್ ಬಾಬು ಅವಾಕ್ಕಾದರು. ಅವರು ಯಾವದೋ ಬೇರೆ ಲೋಕದಲ್ಲಿರುವಂತೆ ಭಾಸವಾಯಿತು. ಸುದರ್ಶನರು ತಾವು ಹೇಳುತ್ತಿದ್ದುದನ್ನು ಮುಂದುವರಿಸಿ

"ಭೂಪೆನ್ ಬಾಬು, ನೀವು ಒಂದು ಸೊಗಸಾದ ಭಾವನೆ ವ್ಯಕ್ತಪಡಿಸಿದಿರಿ. ಅದನ್ನು ಕೇಳಿ ನನಗೆ ಬ್ರಹ್ಮಾನಂದವಾಗಿದೆ. ನಿಮ್ಮ ಹೃದಯದಲ್ಲಿ ಸಹಜವಾಗಿ ಉದ್ರಿಕ್ತವಾಗಿರುವ ಕೃತಜ್ಞತಾ ಭಾವನೆ ಚಿರಕಾಲ ಅಚ್ಚಳಿಯದಿರಲಿ. ನಾನು ಒಂದಾಗಿ ಹೇಳುತ್ತೇನೆಂದು ಬೇಸರಪಟ್ಟುಕೊಳ್ಳಬೇಡಿ ಸಿನೀಮಾ ಪ್ರಪಂಚ ರಾಗ ದ್ವೇಷಗಳ ತೌರೂರು. ಹೊನ್ನಿನ ಆಸೆ, ಹೆಣ್ಣಿನ ಆಸೆ, ಕೀರ್ತಿಯ ಆಸೆಗಳ ರಣಭೂಮಿ ಇದು. ಈ ಪ್ರಪಂಚಕ್ಕೆ ಕಾಲಿಡುವ ಜೀವರೂ ಕಾಲಾನುಕಾಲಕ್ಕೆ ಧೈರ್ಯನಾಗಿಬಿಡುತ್ತಾನೆ. ಸ್ವಾರ್ಥದ ವಿಲೋಭನೆಗೆ ಸಿಕ್ಕಿದ ಮನುಷ್ಯ ನಿರ್ದಾಕ್ಷಿಣ್ಯವಾಗಿ ಇತರರ ಸೌಖ್ಯದ ಮೇಲೆ ಪದಾ

ಘಾತ ಮಾಡುತ್ತಾನೆ. ಕೀರ್ತಿಯು ಒಂದು ಕಣ ಕೂಡ ಅಫೀಮಿನ ಗುಳಿಗೆಯಂತೆ ಮನುಷ್ಯನ ಮದವೇರಿಸುತ್ತ ಹೋಗುತ್ತದೆ."

"ನಿಜ—ನೀವು ಹೇಳುವುದು ಅಕ್ಷರಶಃ ಸತ್ಯ. ನಿಮ್ಮ ಮನಸ್ಸಿಗೆ ಬೇಸರವಾಗದಂತೆ ನಡೆದುಕೊಳ್ಳುತ್ತೇನೆಂದು ಭರವಸೆ ಕೊಡುತ್ತೇನೆ."

ಸುದರ್ಶನ, ಭೂಪೆನ್ ಬಾಬುಗಳಿಗೆ ಬೆಳೆದ ಮೈತ್ರಿ ಕಂಡು ಶಿವಾನಂದನಿಗೆ ಸಂತೋಷವಾಯಿತು.

"ನಾವು ಆರಿಸಿರುವ ಕಥೆ ನಿಮಗೆ ಒಪ್ಪಿಗೆಯಾಯಿತೇ?"

"ಕೇಳುವುದೇನಿದೆ? ಮಹಾಕವಿ ವಾಲ್ಮೀಕಿಯ ರಾಮಾಯಣದ ಅತ್ಯುತ್ತಮ ಭಾಗಗಳಲ್ಲಿ ಶ್ರೀರಾಮ ಪಾದುಕಾ ಪಟ್ಟಾಭಿಷೇಕವೂ ಒಂದಾಗಿದೆ. ಭಾರತ ಸಂಸ್ಕೃತಿಯ ಭಟ್ಟಿಯನ್ನೇ ವಾಲ್ಮೀಕಿ ಆ ಕಥಾವಸ್ತುವಿನಲ್ಲಿ ಇಳಿಸಿದ್ದಾನೆ—ನಮ್ಮ ಚಿತ್ರ ಕವಿಕಲ್ಪನೆಯನ್ನು ಕೆಡಸದಂತಿರಬೇಕು."

"ನೀವು ಕಥಾವಸ್ತುವಿನ ಗುರುತು ಹಾಕಿದರೆ ನಾನೂ ಗುರುತು ಹಾಕುತ್ತೇನೆ. ಇಬ್ಬರೂ ಅನಂತರ ಕುಳಿತು ಕಥೆಯನ್ನು ಒಂದು ಸ್ವರೂಪಕ್ಕೆ ತರಬಹುದು."

"ಆಗಬಹುದು."

ಭೂಪೆನ್ ಬಾಬುಗಳ ಮನಸ್ಸಿಗೆ ಥಟ್ಟನೆ ಒಂದು ವಿಚಾರ ಹೊಳೆಯಿತು.

"ನಾಡಿದ್ದು ಸ್ಟೂಡಿಯೋ ಕಾಂಟ್ರ್ಯಾಕ್ಟು ಮಾಡಿಕೊಳ್ಳುವುದಕ್ಕೆ ನಾವು ಮದರಾಸಿಗೆ ಹೋಗಬೇಕಾಗಿದೆ. ನೀವೂ ಏಕೆ ನಮ್ಮ ಜತೆ ಬರಬಾರದು. ಕಥೆಯನ್ನೂ ನಾವು ಚರ್ಚಿಸಬಹುದು ಮತ್ತು ಸ್ಟೂಡಿಯೋ ಆರ್ಟ್ ಡೈರೆಕ್ಟರಿಗೆ ನಿಮ್ಮ ಅಭಿಪ್ರಾಯ ತಿಳಿಸಿದರೆ ಸೆಟ್ ಹಾಕಲು ಅನುಕೂಲವಾಗುತ್ತದೆ."

"ನಾನು ಬರುವುದು ಅಗತ್ಯವಾಗಿದ್ದರೆ ಬರುತ್ತೇನೆ."

ಎಂದು ಸುದರ್ಶನ ಒಪ್ಪಿಕೊಂಡರು.

ಸುದರ್ಶನ ಹೊರಡಲನುವಾಗಲು ಭೂಪೆನ್ ಬಾಬು ಎದ್ದು ಹೋಗಿ ಕಾಫಿ, ಉಪಾಹಾರ ತೆಗೆಸಿಕೊಂಡು ಬಂದರು.

ಶಿವಾನಂದ ಜಾಂಗೀರನ್ನು ಬಾಯಿಗೆ ಇಟ್ಟುಕೊಳ್ಳುತ್ತಾ

"ನಮ್ಮ ಸ್ನೇಹ ಸಂಬಂಧ ಹೀಗೆ ಚಿರಕಾಲವಿರಲಿ. ಭೂಪೆನ್ ಬಾಬುಗಳೇ ನಮಗೆ ಯಾವಾಗಲೂ ತಿಂಡಿಕೊಡಿಸುತ್ತಿರಲಿ."

ಎಂದ. ಭೂಪೆನ್ ಬಾಬು ನಗುತ್ತಾ

"ನೀವು ಮಾಡಿಟ್ಟದ್ದ ತಿಂಡಿಯನ್ನೇ ತೆಗೆದುಕೊಂಡು ನಿಮಗೆ ಬಡಿಸಿ ನಾನು ಕೀರ್ತಿಗಳಿಸಿಕೊಳ್ಳುತ್ತಿದ್ದೇನೆ"

ಎಂದು ಹೇಳಿದರು.

೧೨

ಬುಧವಾರ ಬೆಳಿಗ್ಗೆ ಸಾಹುಕಾರ ರುದ್ರಪ್ಪನವರು, ಚಿನ್ನಪ್ಪ, ಶಿವಾನಂದ, ಭೂಪೆನ್ ಬಾಬು ಮತ್ತು ಸುದರ್ಶನ ಬೆಂಗಳೂರಿನಿಂದ ಹೊರಟು ನಾಲ್ಕು ಗಂಟೆಗೆ ಮದರಾಸಿನಲ್ಲಿ ಬಂದಿಳಿದರು. ವುಡ್‌ಲ್ಯಾಂಡ್ಸ್ ಹೊಟೇಲಿನಲ್ಲಿ ಬಿಡಾರವಾಯಿತು. ಭೂಪೆನ್ ಬಾಬು 'ಕಾರ್ತಿಕೇಯ ಸ್ಟೂಡಿಯೋ'ಕ್ಕೆ ಫೋನ್ ಮಾಡಿ ತಾವು ಬಂದಿರುವುದಾಗಿ ತಿಳಿಸಿದರು. ರಾಮಾನುಜಂ ಉತ್ತರಿಸಿ

" ಅನುಕೂಲವಿದ್ದರೆ ಈಗಲೇ ಬನ್ನಿ. ಚೆಟ್ಟಿಯಾರರೂ ಇಲ್ಲೇಇದ್ದಾರೆ " ಎಂದು ಹೇಳಿದರು. ಜೊಗೆನ್ ಬಾಬು ಮನೆಗೆ ಫೋನ್ ಮಾಡಿದಾಗ ಅವರು ಷೂಟಿಂಗಿಗೆ ಸ್ಟೂಡಿಯೋಗೆ ಹೋಗಿರುವುದಾಗಿ ತಿಳಿಯಬಂತು.

ವೃಥಾ ಕಾಲಹರಣ ಮಾಡಬಾರದೆಂದು ಸಾಹುಕಾರರೂ, ಇತರರೂ ಸ್ಟೂಡಿಯೋಕ್ಕೆ ಹೊರಟು ನಿಂತರು.

ರಾಮಾನುಜಂ ಅವರನ್ನು ಸ್ವಾಗತಿಸಿದರು. ಭೂಪೆನ್ ಬಾಬು ಸಾಹುಕಾರರ ಮತ್ತು ಸುದರ್ಶನರ ಪರಿಚಯ ಮಾಡಿಕೊಟ್ಟರು.

" ಚೆಟ್ಟಿಯಾರರು ಚಿತ್ರದ ಷೂಟಿಂಗ್ ನೋಡುತ್ತಿದ್ದಾರೆ. ಬನ್ನಿ ಅಲ್ಲೇ ಹೋಗೋಣ "

ಎಂದು ಹೇಳಿ ರಾಮಾನುಜಂ ಎಲ್ಲರನ್ನೂ ಫ್ಲೋರಿಗೆ ಕರೆದುಕೊಂಡು ಹೋಗಿ ಚೆಟ್ಟಿಯಾರರ ಪರಿಚಯ ಮಾಡಿಕೊಟ್ಟರು.

'ಕಾರ್ತಿಕೇಯ ಸ್ಟೂಡಿಯೋ'ದವರ ಸ್ವಂತ ಚಿತ್ರ 'ವಿಶ್ವಾಮಿತ್ರ–ಮೇನಕೆ' ನಡೆದಿತ್ತು. ಮಣಿ ಅದರ ದಿಗ್ದರ್ಶನ ಮಾಡುತ್ತಿದ್ದುದನ್ನು ತದೇಕಚಿತ್ತರಾಗಿ ಚೆಟ್ಟಿಯಾರರು ನೋಡುತ್ತ ಕುಳಿತಿದ್ದರು.

ವಿಶ್ವಾಮಿತ್ರನ ತಪೋಭಂಗವಾಗುತ್ತದೆ. ಅವನು ಕಣ್ತೆರೆದು ನೋಡಿ ಎದುರಿಗೆ ನಿಂತಿದ್ದ ಸ್ವರ್ಗಸುಂದರಿ ಮೇನಕೆಯಲ್ಲಿ ಅನುರಕ್ತನಾಗುತ್ತಾನೆ. ವಿಶ್ವಾಮಿತ್ರ, ಮೇನಕೆಯರ ಪ್ರಣಯ ದೃಶ್ಯ ನಡೆದಿತ್ತು.

ವಿಶ್ವಾಮಿತ್ರನಿಗೆ ನೀಳವಾದ ಗಡ್ಡ, ಜಟಾಜೂಟಗಳಿದ್ದವು. ಮೇನಕೆ ಮೊಲೆಗಟ್ಟು ಮಾತ್ರ ಬಿಗಿದುಕೊಂಡು ಅರ್ಧನಗ್ನೆಯಾಗಿದ್ದಳು. ಕೊನೆ ಮೊದಲಿಲ್ಲದಂತೆ ಅವರ ಶೃಂಗಾರ ಚೇಷ್ಟೆ ನಡೆದಿತ್ತು. ವಿಶ್ವಾಮಿತ್ರ ಪದೇ ಪದೇ ಹೋಗಿ ಅವಳ ಮೇಲೆ ಬೀಳುತ್ತಿದ್ದ. ಡೈರೆಕ್ಟರು ಕ್ಯಾಮರಾಮ್ಯಾನಿಗೆ ಸೂಚನೆಕೊಟ್ಟು ಮೇನಕೆಯ ಮೊಲೆಗಳು ಪ್ರಧಾನವಾಗಿ ಕಾಣುವೆಡೆಗಳಲ್ಲಿ ಕ್ಯಾಮೆರಾ ಇಡಿಸುತ್ತಿದ್ದರು.

ಈ ದೃಶ್ಯ ನೋಡುತ್ತ ನೋಡುತ್ತ ಸುದರ್ಶನರ ಮುಖ ಕಪ್ಪಿಟ್ಟಿತು. ಕ್ಯಾಮೆರಾಕೋಣ (Camera angles) ಗಳನ್ನು ಬದಲಾಯಿಸಿಕೊಳ್ಳು ತ್ತಿದ್ದ ಸಮಯದಲ್ಲಿ ಚೆಟ್ಟಿಯಾರರು ರುದ್ರಪ್ಪನವರಿಗೆ ತಮ್ಮ ಚಿತ್ರದ ವಿಶೇಷ ಪರಿಚಯ ಮಾಡಿಕೊಡುತ್ತಿದ್ದರು.

ಸುದರ್ಶನರಿಗೆ ಅಲ್ಲಿ ಬಹಳ ಹೊತ್ತು ಕೂಡಲಾಗಲಿಲ್ಲ. ಮೆಲ್ಲನೆದ್ದು ಹೊರಗೆ ಬಂದು, ಫ್ಲೋರಿನ ಎದುರಿಗಿದ್ದ ಹಸಿರು ಹುಲ್ಲಿನ ಹಾಸಿನ ಮೇಲೆ ಕುಳಿತು ವಿಚಾರಪರವಶರಾದರು. ಭೂಪೆನ್ ಬಾಬು ಅತ್ತಿತ್ತ ನೋಡಿದರು. ಸುದರ್ಶನರು ಕಾಣಲಿಲ್ಲ. ತಾವೂ ಮೆಲ್ಲನೆ ಎದ್ದು ಹೊರಗೆ ಬಂದರು. ಎದುರಿಗೆ ಹುಲ್ಲು ಹಾಸಿನ ಮೇಲೆ ಕುಳಿತಿದ್ದ ಸುದರ್ಶನರ ಬಳಿಗೆ ಬಂದು ತಾವೂ ಕುಳಿತರು. ಸುದರ್ಶನರು ಮಾತನಾಡುವ ಸಂಭವ ಕಂಡು ಬರಲಿಲ್ಲ. ಭೂಪೆನ್ ಬಾಬುಗಳೇ

" ಷೂಟಿಂಗ್ ನೋಡುವುದಿಲ್ಲವೇ ಸುದರ್ಶನ್‌ಜೀ "

" ನೋಡಿದೆನಲ್ಲಾ. ಒಳಗೆ ಬಹಳ ಶಖೆಯಾಗುತ್ತಿತ್ತು, ಉಸಿರು ಕಟ್ಟಿಕೊಂಡು ಬಂದಿತು. ಗಾಳಿ ಸೇವನೆಗಾಗಿ ಹೊರಗೆ ಬಂದೆ. ನೀವೇಕೆ ಬಂದಿರಿ?"

" ನಿಮ್ಮನ್ನು ಕಾಣಲಿಲ್ಲ. ಹುಡುಕಿಕೊಂಡು ಬಂದೆ. ನಿಮ್ಮ ಮನಸ್ಸು ಏಕೋ ವ್ಯಗ್ರವಾಗಿರುವ ಹಾಗೆ ಕಂಡುಬರುತ್ತದೆ."

"ವಿಶ್ವಾಮಿತ್ರನಿಗೆ ಬಂದ ಪಾಡು ಕಂಡು ಯೋಚಿಸುತ್ತಿದ್ದೆ—ಋಷಿ ಸಾರ್ವಭೌಮರಾದ ವಶಿಷ್ಠರಿಂದ ಬ್ರಹ್ಮರ್ಷಿ ಎನಿಸಿಕೊಂಡವನು ವಿಶ್ವಾಮಿತ್ರ; ಲೋಕಕಲ್ಯಾಣಕ್ಕಾಗಿ ತನ್ನ ಮಹೋಗ್ರ ತಪಸ್ಸನ್ನು ಗಾಳಿಗೆ ತೂರಿ ವಿಶ್ವ ಮಿತ್ರನಾದವನು ವಿಶ್ವಾಮಿತ್ರ; ಹರಿಶ್ಚಂದ್ರನ ಸತ್ಯಸಂಧತೆಯನ್ನು ಜಗತ್ತಿಗೆ ಸಾರಿ ಅವನ ಹೆಸರನ್ನು ಅಜರಾಮರ ಮಾಡಿದವನು ವಿಶ್ವಾಮಿತ್ರ; ಲೋಕ ತಾರಕನಾದ ಶ್ರೀರಾಮಚಂದ್ರನ ಗುರುವಾಗಿ ಅವನನ್ನು ಭಾರತದ ಆರಾಧ್ಯ ಮೂರ್ತಿ ಮಾಡಿದವನು ವಿಶ್ವಾಮಿತ್ರ. ತಮಿಳು ಚಿತ್ರನಿರ್ಮಾಪಕರ ಕೈಯಲ್ಲಿ ಸಿಕ್ಕಿ ಅವನು ಕೀಳುವರ್ಗದ ವಿಟನಾಗಿದ್ದಾನೆ. ಕವಿ ರವೀಂದ್ರರು ಹೇಳಿದಂತೆ 'ನಾವು ನಮ್ಮ ದೇವರುಗಳನ್ನು, ಋಷಿಸಂತರನ್ನು ಕಪಿಗಳಂತೆ ಕುಣಿಸು ತ್ತಿದ್ದೇವೆ.' "

" ಚಿತ್ರ ಪ್ರಪಂಚವೇ ವಿಶ್ವಾಮಿತ್ರ ಸೃಷ್ಟಿ. ಅದರಲ್ಲಿ ಇಂಥ ವೈಪರೀತ್ಯ ಗಳಾಗುವುದು ಅನಿವಾರ್ಯ."

" ಇದೇನು ಬಾಬು ಹೀಗೆ ಹೇಳುತ್ತಿರುವಿರಿ. ಕಲ್ಕತ್ತೆಯಿಂದಲೇ ರಾಜ ರಾಣಿ ವಿಾರಾ, ಸೀತಾ ವೈಪರೀತ್ಯಗಳಿಲ್ಲದೆ ಬಂದಿಲ್ಲವೇ? ಕೀಳು ಅಭಿರುಚಿಗೆ ಸೊಪ್ಪುಹಾಕದೆ ಚಿತ್ರ ರಚಿಸಿ ಅದನ್ನು ಜನಪ್ರಿಯ ಮಾಡುವುದಕ್ಕಾಗುವು ದಿಲ್ಲವೇ ? "

" ಸಾಧ್ಯ. ಆದರೆ ಆ ದೃಷ್ಟಿ ನಿರ್ಮಾಪಕರಿಗಿರಬೇಕಲ್ಲ. ನಾನೂ ನೀವೂ ಬಂಡವಾಳಗಾರರ ನೌಕರರಾಗಿಬಿಡುತ್ತೇವೆ—ಅವರು ಹೇಳಿದ ಹಾಗೆ ನಾವು ಕೇಳಬೇಕಾಗುತ್ತದೆ. ಅವರ ಅಭಿರುಚಿಗೆ ನಾವು ಹೊಂದಿಕೊಳ್ಳದಿದ್ದರೆ ನಮ್ಮ ಸಮಾಧಿ ಕಟ್ಟಿಬಿಡುತ್ತಾರೆ."

" ಅವರ ಅಭಿರುಚಿಗೆ ಶರಣುಹೋಗುತ್ತಾ ನಾವು ಯಾವಯಾವುದನ್ನು ಪವಿತ್ರ, ಪೂಜಾರ್ಹವೆಂದು ಭಾವಿಸಿಕೊಂಡಿದ್ದೇವೆಯೋ ಅದನ್ನು ಕಾಲಕೆಳಗೆ ಹಾಕಿಕೊಂಡು ಹೊಸೆಯುತ್ತ ಬರೋಣವೇ ? "

" ನಮ್ಮ ಚಿತ್ರದಲ್ಲಿ ಅಂಥ ಪ್ರಮೇಯ ಒದಗಲಾರದು ? "

" ಹೇಗೆ ಅಷ್ಟು ಧೈರ್ಯವಾಗಿ ಹೇಳುತ್ತೀರಿ ? "

" ಸಾಹುಕಾರರು, ಚಿನ್ನಪ್ಪನವರು ಚಿತ್ರಪ್ರಪಂಚಕ್ಕೆ ಹೊಸಬರು. ನಮ್ಮ ಮಾತಿಗೆ ಅವರು ಬೆಲೆ ಕೊಡಬಹುದು."

" ಎಳೆನಾಗರ ಮರಿಯಾದರೂ ಅದರ ವಿಷ ಪ್ರಾಣಾಂತಕವಾಗುತ್ತದೆ."

" ನೀವು ಜೀವನದಲ್ಲಿ ಬಹಳ ನೊಂದಿರುವ ಹಾಗೆ ಕಾಣುತ್ತದೆ."

" ನೊಂದಿದ್ದೇನೆ. ಆದರೆ ನೋಯದವರು ಯಾರು? ಬೆಳಕನ್ನು ಅರಸುವ ಜೀವ ಅದನ್ನು ಕಾಣದೆ ನೋಯುವ ನೋವು ಸಹನಾತೀತವಾಗು ತ್ತದೆ."

" ನೀವು ಬಿಡಿಸಲು ಹೊರಟಿರುವ ಸಮಸ್ಯೆ ಯಾವುದೆಂದು ಕೇಳ ಬಹುದೇ ? "

" ಹುಟ್ಟುವಾಗಲೇ ಮಾನವ ದೈತ್ಯನಾಗಿರುವುದಿಲ್ಲ. ಪ್ರತಿಯೊಬ್ಬನೂ ಭಗವದಂಶದಿಂದಲೇ ಹುಟ್ಟಿರುತ್ತಾನೆ. ಆದರೆ ಬೆಳೆಯುತ್ತ ಬೆಳೆಯುತ್ತ ಬಹು ಮಂದಿ ದೈತ್ಯರಾಗುವುದು ಏಕೆ? ಪ್ರತಿಯೊಬ್ಬನಲ್ಲಿಯೂ ಸುಪ್ತವಾಗಿರುವ ದೈವಿಕತೆ ಕೆಲವರಲ್ಲಿ ಮಾತ್ರ ವಿಕಾಸವಾಗುವುದು ಏಕೆ ? "

" ಅವರವರ ಕರ್ಮದಿಂದ ಎಂದು ಹಿರಿಯರು ಹೇಳಿದ್ದಾರೆ."

" ಆ ಸಮಾಧಾನ ನನಗೇಕೋ ತೃಪ್ತಿಯನ್ನುಂಟುಮಾಡುವುದಿಲ್ಲ ಬಾಬೂ. ಕರ್ಮವಾದದಿಂದ ನಮ್ಮ ಸಹಜಶಕ್ತಿಯೇ ಕುಂದಿಹೋಗಿದೆ. ಅಗೋ. ಎಲ್ಲರೂ ಹೊರಕ್ಕೆ ಬರುತ್ತಿದ್ದಾರೆ. ನಾವೂ ಏಳಬೇಕು."

ಎಂದು ಎದ್ದರು.

ರಾಮಾನುಜಂ ಚೆಟ್ಟಿಯಾರರು ಎಲ್ಲರೊಂದಿಗೆ ಹೊರಗೆ ಬಂದರು.

ಆಫೀಸಿನಲ್ಲಿ ಎಲ್ಲರೂ ಕುಳಿತ ಮೇಲೆ ಚೆಟ್ಟಿಯಾರರ ಆಳು ಯಥಾವಿಧಿಯಂತೆ ಒಂದು ಟ್ರೇಯಲ್ಲಿ ಕೆಲವು ಗ್ಲಾಸುಗಳು, ಎರಡು ವಿಸ್ಕಿ ಶೀಷೆಗಳು, ನೀರಿನ ಸೈಫನ್, ಸೋಡಾಬಾಟಲುಗಳನ್ನು ತಂದಿಟ್ಟ.

ಚೆಟ್ಟಿಯಾರರು 'ಸ್ವೀಕರಿಸಿ' ಎಂದರು.

ಅತಿಥಿಗಳೆಲ್ಲರೂ ಪಾನೀಯವನ್ನು ನಿರಾಕರಿಸಲು ಚೆಟ್ಟಿಯಾರರು ತಮ್ಮ ಗ್ಲಾಸನ್ನು ಮುಗಿಸುತ್ತಾ

"ಫಿಲಂ ನಿರ್ಮಾಪಕರಾಗಿ ನೀವು ಯಾರೂ ಪಾನೀಯ ಸ್ವೀಕರಿಸದಿರುವುದನ್ನು ಕಂಡು ನನಗೆ ಪರಮಾಶ್ಚರ್ಯವಾಗಿದೆ."

"ಚಿತ್ರನಿರ್ಮಾಪಕರಿಗೆ ಅಗತ್ಯವಾಗಿ ಇರಬೇಕಾದ ಗುಣಗಳಲ್ಲಿ ಪಾನೀಯವೂ ಒಂದೆಂದು ಕಾಣುತ್ತದೆ."

ಎಂದು ಸುದರ್ಶನ ಹೇಳಿದರು. ಚೆಟ್ಟಿಯಾರರಿಗೆ ಎಲ್ಲಿ ಅಸಮಾಧಾನವಾಗುತ್ತದೋ ಎಂದು ಭಯಗ್ರಸ್ತರಾದ ಸಾಹುಕಾರರು ಮಧ್ಯೆ ಬಾಯಿಹಾಕಿ

"ಅಂಗೇನಿಲ್ಲ. ಏನೋ ಕೆಲವರ ಅಭ್ಯಾಸ"

ಎಂದರು. ಯಾರು ಆಡಿದ ಮಾತೂ ಚೆಟ್ಟಿಯಾರರ ಕಿವಿಯ ಮೇಲೇ ಬೀಳಲಿಲ್ಲ.

ಭೂಪೇನ್ ಬಾಬು

"ಕಾಂಟ್ರ್ಯಾಕ್ಟ್ ಮಾಡಿಕೊಳ್ಳುವುದಕ್ಕೆ ಸಾಹುಕಾರರು ಬೆಂಗಳೂರಿನಿಂದ ಬಂದಿದ್ದಾರೆ. ಆ ಕೆಲಸ ಯಾವಾಗ ಮುಗಿಸೋಣ"

ಎಂದು ಕೇಳಿದರು. ರಾಮಾನುಜಂ ಚೆಟ್ಟಿಯಾರರ ಕಡೆ ತಿರುಗಿ

"ನಾಳೆ ಬೆಳಿಗ್ಗೆ ಆಗಬಹುದಲ್ಲವೇ?"

"ಆಗಬಹುದು"

ಎಂದು ಚೆಟ್ಟಿಯಾರರು ಹೇಳಿ

"ರಾಮಾನುಜಂ, ದೊಡ್ಡವರು ಬಂದಿದ್ದಾರೆ ಅವರಿಗೆ ನಮ್ಮ ಚಿತ್ರಗಳು ತೋರಿಸುವುದಿಲ್ಲವೇನು? ನಮ್ಮ ಮನೆ ಕಲ್ಯಾಣದ ಚಿತ್ರ ತೋರಿಸಬೇಕಾಗಿತ್ತು"

ಎಂದರು. ಭೂಪೇನ್ ಅತ್ಯಂತ ವಿನಯದಿಂದ

"ನಾಳೆ ನೋಡುತ್ತಾರೆ. ಇದೇ ರೈಲಿನಲ್ಲಿ ಎಲ್ಲರೂ ಬಂದಿದ್ದೇವೆ. ತುಂಬ ಆಯಾಸವಾಗಿದೆ. ತಾವು ಅಪ್ಪಣೆಕೊಟ್ಟರೆ ನಾವು ಹೊರಡುತ್ತೇವೆ."

ಎಂದು ಹೇಳಿದರು. ಚೆಟ್ಟಿಯಾರರ ಅಪ್ಪಣೆ ದೊರೆಯಲು ತಡವಾಗಲಿಲ್ಲ.

ಸ್ಟೂಡಿಯೋದಿಂದ ಹೊರಗೆ ಬರುವಾಗ ಭೂಪೆನ್ ಬಾಬು ರಾಮಾನುಜಂ ಅವರಿಗೆ

"ಬೆಳಿಗ್ಗೆ ನಿಮ್ಮ ಆರ್ಟ್ ಡೈರೆಕ್ಟರನ್ನೂ (Art-Director) ಬರಮಾಡಿದರೆ ಅನುಕೂಲ. ನಮ್ಮ ಕಥಾ ಲೇಖಕರು ಬಂದಿದ್ದಾರೆ. ಆರ್ಟ್ ಡೈರೆಕ್ಟರಿಗೆ ಸೆಟ್ಟುಗಳ ವಿಷಯ ಹೇಳಿಬಿಡಬಹುದು."

"ಆಗಲಿ ಬರಮಾಡಿರುತ್ತೇನೆ."

"ಮನೆಗಳ ವಿಷಯ ಏನು ಮಾಡಿದಿರಿ ಮ್ಯಾನೇಜರ್ ಸಾಹೇಬರೇ ?"

ಎಂದು ಚಿನ್ನಪ್ಪ ಕೇಳಿದ.

"ನಿಮಗೇಕೆ ಮನೆಯ ಚಿಂತೆ. ನೀವು ಬರುವ ದಿನ ತಿಳಿಸಿ. ಎರಡು ಮನೆ ನಿಮಗಾಗಿ ಖಾಲಿ ಮಾಡಿಸಿಟ್ಟಿರುತ್ತೇನೆ."

"ಇನ್ನೂ ಒಂದು ಬೇಕಾಗಬಹುದು."

"ಯಾರಿಗೆ ಚಿನ್ನಪ್ಪ"

ಎಂದು ಸಾಹುಕಾರರು ಕೇಳಿದರು.

"ಬೊಂಬಾಯಿಯಿಂದ ಬರುವ ಸ್ಟಾರ್‌ಗೆ ಮನೆ ಬೇಕಲ್ಲಣ್ಣಾ"

"ಯಾವ ಸ್ಟಾರನ್ನು ಬುಕ್ ಮಾಡಿದ್ದೀರಿ ?"

ಎಂದು ರಾಮಾನುಜಂ ಕೇಳಿದರು.

"ಶಾಮಲಾ ನಿಪ್ಪಾಣಿಕರ್"

"ಬಹಳ ಸಂತೋಷ"

"ಆಗಬಹುದೇನು ಸ್ವಾಮಿ"

ಎಂದು ಸಾಹುಕಾರರು ಕುತೂಹಲದಿಂದ ಪ್ರಶ್ನಿಸಲು ರಾಮಾನುಜಂ

"ಆಕೆ ಅಖಿಲ ಭಾರತ ಖ್ಯಾತಿ ಪಡೆದಿರುವ ಸ್ಟಾರ್–ಆಗಬಹುದು."

ಎಂದರು.

ಹೊರಡುವ ಮುನ್ನ ಕೈಜೋಡಿಸಿ ಸಾಹುಕಾರರು ರಾಮಾನುಜಂ ಅವರಿಗೆ

"ನಾವು ಒಸಬ್ರು–ಅನುಭವವಿಲ್ಲ–ನೀವು ದಾರಿ ತೋರ್ಸಿ ನಮ್ಮನ್ನ ದಡ ಸೇರಿಸ್ಬೇಕು. ನಿಮ್ಮನ್ನಂಬಿ ನಾವು ಈ ಸ್ಟೂಡಿಯೋಗೆ ಬಂದಿದ್ದೇವೆ."

ಎನ್ನಲು ರಾಮಾನುಜಂ ಮುಗುಳ್ನಗೆ ನಗುತ್ತಾ

"ನಮ್ಮ ಸ್ವಂತ ಪಿಕ್ಚರ್ ಎಂದುಕೊಂಡು ಕೆಲಸ ಮಾಡುತ್ತೇವೆ. ಯೋಚನೆ ಮಾಡಬೇಡಿ ಸಾಹುಕಾರರೇ"

ಎಂದು ಆಶ್ವಾಸನವಿತ್ತರು.

ಹೊಟೇಲಿಗೆ ಬಂದ ಕೂಡಲೆ, ಹೊಟೇಲಿನ ಆಫೀಸ್ ಕ್ಲರ್ಕ್ ಬಂದು "ಸರ್. ಜೊಗೆನ್ ಬಾಬುಗಳು ನಿಮಗೆ ಮೂರು ಸಲ ಫೋನ್ ಮಾಡಿದ್ದರು. ನೀವು ಬಂದ ಕೂಡಲೆ ತಿಳಿಸೆಂದು ಹೇಳಿದ್ದಾರೆ"

"ಅವರನ್ನು ದಯೆಯಿಟ್ಟು ಇಲ್ಲಿಗೆ ಬರಬೇಕೆಂದು ಹೇಳಿ"

ಎಂದು ಭೂಪೆನ್ ತಿಳಿಸಿದರು

ಹೊಟೇಲಿನವರು ಊಟವನ್ನು ರೂಮಿಗೇ ಕಳುಹಿಸಿಕೊಟ್ಟರು. ಊಟ ಮಾಡುತ್ತಿದ್ದಂತೆ ಭೂಪೆನ್ ಬಾಬು ಸಾಹುಕಾರರಿಗೆ

"ಸಾಹುಕಾರ್‌ಜೀ, ರಾಮಾನುಜಂ ಎದುರಿಗೇಕೆ ಅಷ್ಟು ವಿನಯ ಪ್ರದರ್ಶನ ಮಾಡಿದಿರಿ ?"

"ಅವರ ಕೈಯಲ್ಲಿ ನಮ್ಮ ಜುಟ್ಟು ಕೊಡ್ತೀವೆಲ್ಲಾ ಸ್ವಾಮಿ. ಅವರನ್ನ ಕೊಂಚ ಕುಸೀಲಿ ಇಟ್ಟುಕೊಂಡಿರೋದು ನಮ್ಗೇ ಒಳ್ಳೇದು."

"ಸ್ಟುಡಿಯೋದವರ ಬಗ್ಗೆ ನಾವು ವಿನಯದಿಂದ ವರ್ತಿಸಬೇಕು—ಆದರೆ ಬಗ್ಗಿ ನಡೆಯಬಾರದು. ನಾವು ದುರ್ಬಲರೆಂದು ಅವರಿಗೆ ತಿಳಿದುಬಂದರೆ ನಮ್ಮನ್ನು ನುಂಗಿಬಿಡುತ್ತಾರೆ."

ಮಾತು ತಮಗೆ ಅನಾನುಕೂಲವಾಯಿತೆಂದು ಗ್ರಹಿಸಿದ ಸಾಹುಕಾರರು ಮೆಲ್ಲನೆ

"ಯಾರು ಸ್ವಾಮಿ ಫೋನ್ ಮಾಡಿದ್ದೋರು ?"

"ಜೊಗೆನ್ ಬಾಬು. ದೊಡ್ಡ ಕ್ಯಾಮರಾಮೆನ್ ಅವರು. ನನ್ನ ಸ್ನೇಹಿತರು. ಈ ಸ್ಟುಡಿಯೋದವರ ಪರಿಚಯ ಅವರೇ ಮಾಡಿಸಿದ್ದು ನನಗೆ— ಮುಂದೆ ನಮ್ಮ ಅನೇಕ ಕೆಲಸ ಕಾರ್ಯಗಳಿಗೆ ಅವರ ನೆರವು ಪಡೆಯ ಬೇಕಾಗುತ್ತದೆ."

ಊಟ ಮುಗಿಯುವ ವೇಳೆಗೆ ಜೊಗೆನ್ ಬಂದರು.

"ನಾನು ಮೂರು ಸಲ ಫೋನ್ ಮಾಡಿದ್ದೆ ಭೂಪೆನ್"

"ತಿಳಿಯಿತು. ನಾವು ಸ್ಟುಡಿಯೋಕ್ಕೆ ಹೋಗಿದ್ದೆವು."

"ಕಾಂಟ್ರ್ಯಾಕ್ಟು ಆಯಿತೇನು ?"

"ಬೆಳಿಗ್ಗೆ ಆಗುತ್ತದೆ."

ಭೂಪೆನ್ ಬಾಬು ಜೋಗೆನ್‌ರಿಗೆ ಎಲ್ಲರ ಪರಿಚಯ ಮಾಡಿಕೊಟ್ಟರು. ಸಾಹುಕಾರರು ಮೆಲ್ಲನೆ ಜೋಗೆನ್‌ರ ಬಳಿಯಿದ್ದ ಕುರ್ಚಿಯ ಮೇಲೆ ಬಂದು ಕುಳಿತು

" ನಿಮಗೆ ಈ ಸ್ಟುಡಿಯೋದವರು ಚೆನ್ನಾಗಿ ಗೊತ್ತಾ ಸ್ವಾಮಿ."

" ಚೆನ್ನಾಗಿ ಗೊತ್ತು. ಏಕೆ ?

" ಇವರು ಎಂಗೆ ? ನಮ್ಕೆಲಸ ಆಗ್ತೈತಾ ? "

" ಸಾಹುಕಾರ್‌ಜೀ, ನಿಮ್ಮ ಕೆಲಸ ಎಲ್ಲಿಯಾದರೂ ಆಗುವುದಿದ್ದರೆ ಈ ಸ್ಟುಡಿಯೋದಲ್ಲಿಯೇ ಸಾಧ್ಯ. ಇಷ್ಟು ಚೆನ್ನಾಗಿ ವ್ಯವಸ್ಥಿತವಾಗಿರುವ ಸ್ಟುಡಿಯೋನ ನಾನು ಇಡಿಯ ಹಿಂದೂಸ್ಥಾನದಲ್ಲಿಯೇ ನೋಡಿಲ್ಲ. ಏಕೆ ಹೀಗೆ ಕೇಳುತ್ತಿರುವಿರಿ ? "

" ಸ್ಟುಡಿಯೋ ಯಜಮಾನ್ರು ಯಾವಾಗಲೂ ಬುಡ್ಡಿ ಹಿಡಿದಿರ್ತಾರೆ — ಅನುಮಾನವಾಯ್ತು. ಎಲ್ಲಿ ಬಂತಪ್ಪ ಕುಡುಕರ ಸಾವಾಸ ಎಂತ. "

ಸಾಹುಕಾರರ ಮಾತು ಕೇಳಿ ಜೋಗೆನ್ ಬಾಬುಗಳಿಗೆ ಹಿಡಿಸಲಾರದಷ್ಟು ನಗೆ ಬಂದಿತು.

" ಕುಡಿಯುವವರೆಲ್ಲಾ ಕೆಟ್ಟವರು ಎಂದುಕೊಂಡಿದ್ದೀರೇನು ? "

" ಹಂಗಲ್ಲ. ಅವರ ಬುದ್ಧಿ ಸ್ಥಿಮಿತ ಇರೋಕಿಲ್ಲಾ ಎಂದೆ. "

ಜೋಗೆನ್ ಬಾಬುಗಳ ಮುಖ ಗಂಭೀರವಾಯಿತು. ಯಾವುದೋ ಅಪಾರವೇದನೆ ಅವರ ಹೃದಯವನ್ನು ಹಿಂಡುತ್ತಿತ್ತು.

" ಚೆಟ್ಟಿಯಾರರಿಗೆ ಲೆಕ್ಕವಿಲ್ಲದಷ್ಟು ಐಶ್ವರ್ಯವಿದೆ — ಅವರ ಐಶ್ವರ್ಯದ ವ್ಯಾಪ್ತಿ ಅವರಿಗೇ ಗೊತ್ತಿದೆಯೋ ಇಲ್ಲವೋ ? ಆದರೂ ಆ ಮನುಷ್ಯ ಪರಮ ದುಃಖಿ — ನಿಮಗೆ ನಾನು ಈ ವಿಷಯಗಳನ್ನು ಹೇಳಬೇಕೋ ಹೇಳಬಾರದೋ ಗೊತ್ತಿಲ್ಲ. ನಿಮ್ಮ ಮತ್ತು ಅವರ ಸಂಬಂಧ ಮಧುರವಾಗಿರಲೆಂದು ಹೇಳುತ್ತೇನೆ — ಚೆಟ್ಟಿಯಾರರು ನಿಮಗೆಲ್ಲಾ ತಮ್ಮ ಮನೆಯ ಮದುವೆಯ ಚಿತ್ರ ತೋರಿಸಿದರೇ ? "

" ತೋರಿಸುತ್ತೇವೆಂದರು. ಹೊತ್ತಾಗಿದೆ ಬೇಡವೆಂದು ನಾನೇ ಹೇಳಿದೆ. ನಾನೂ ಶಿವಾನಂದರೂ ಆ ಚಿತ್ರ ನೋಡಿದ್ದೇವೆ."

ಎಂದು ಭೂಪೆನ್ ಬಾಬು ಹೇಳಿದರು.

" ಚೆಟ್ಟಿಯಾರರಿಗೆ ಒಬ್ಬಳೇ ಮಗಳು. ಬೇರೆ ಮಕ್ಕಳೇ ಇಲ್ಲ. ಆ ಮಗಳನ್ನು ಕಣ್ಣಿನ ಬೊಂಬೆಯಂತೆ ಸಾಕಿ ಬೆಳಸಿ, ಆಕೆಯ ಮದುವೆಗೆ ಲಕ್ಷಾಂತರ ರೂಪಾಯಿ ಖರ್ಚು ಮಾಡಿದರು. ಅಳಿಯ, ಮಗಳೂ ಚೆಟ್ಟಿಯಾರರ ಮನೆಯಲ್ಲಿಯೇ ಇದ್ದರು. ಆ ಮಗಳು ಒಬ್ಬ ಗಂಡು

ಮಗನನ್ನು ಹೆತ್ತು ಒಂದು ವರ್ಷದೊಳಗೆ ತೀರಿಕೊಂಡಳು. ಚೆಟ್ಟಿಯಾರರ ಜೀವನವೇ ಮುಗಿದು ಹೋಯಿತು. ಆಗಿನಿಂದ ವಿಪರೀತ ಕುಡಿಯುವುದ ಕ್ಕಾರಂಭಿಸಿದರು. ಚೆಟ್ಟಿಯಾರರು ಚಿನ್ನದಂಥ ಮನುಷ್ಯರು. ಕೆಳಗಿನ ನೌಕರರನ್ನು ಸೇವಕರನ್ನು ಅವರು ನೋಡಿಕೊಳ್ಳುವ ರೀತಿಯನ್ನು ನೀವು ನೋಡಬೇಕು. ಯಾರು ಏನೇ ಕೇಳಿದರೂ ಚೆಟ್ಟಿಯಾರರು ಇಲ್ಲವೆನ್ನುವು ದಿಲ್ಲ—ಆದರೆ ಈ ದೌರ್ಬಲ್ಯದ ದಾಸರಾಗಿದ್ದಾರೆ."

"ಆ ಮ್ಯಾನೇಜರ್ ರಾಮಾನುಜಂ ಹೇಗೆ ಸ್ವಾಮಿ?"

"ರಾಮಾನುಜಂ ತುಂಬ ದಕ್ಷರು. ಒಂದು ದೇಶ ಆಳುವ ಶಕ್ತಿ ಅವರಿ ಗಿದೆ. ಮನುಷ್ಯ ಸ್ವಭಾವತಃ ಕೆಟ್ಟವನಲ್ಲ. ತಾವಾಗಿಯೇ ಯಾರಿಗೂ ಕೆಟ್ಟ ದ್ದನ್ನು ಮಾಡುವುದಕ್ಕೆ ಹೋಗುವುದಿಲ್ಲ. ಆದರೆ ಪ್ರತಿಕಕ್ಷಿಗಳನ್ನು ನಿರ್ದಾ ಕ್ಷಿಣ್ಯವಾಗಿ ಮರ್ದಿಸುತ್ತಾರೆ. ಚೆಟ್ಟಿಯಾರರಿಗೆ ರಾಮಾನುಜಂ ಮಾತೆಂದರೆ ವೇದವಾಕ್ಯ. ಸ್ಟೂಡಿಯೋ ವಿಷಯದಲ್ಲಂತೂ ರಾಮಾನುಜಂ ಸರ್ವಾಧಿಕಾರಿ. 'ಕಾರ್ತಿಕೇಯ ಸ್ಟೂಡಿಯೋ'ದಲ್ಲಿ ಕೆಲಸಗಾರರಿಗೆ, ತಂತ್ರಜ್ಞರಿಗೆ ರಾಮಾ ನುಜಂ ಕೊಡುತ್ತಿರುವ ಸಂಬಳ ಮದರಾಸಿನಲ್ಲಿ ಬೇರೆ ಯಾರೂ ಕೊಡುತ್ತಿಲ್ಲ. ಕೆಲಸ ತೆಗೆದುಕೊಳ್ಳುವುದರಲ್ಲಿಯೂ ಅವರು ಅಷ್ಟೇ ಕರಾರುವಾಕ್. ಏಳು ಗಂಟೆಗೆ ಬರಬೇಕಾದವನು ಏಳು ಗಂಟೆ ಹತ್ತು ನಿಮಿಷಕ್ಕೆ ಬಂದರೆ ಅವನ ಕೆಲಸ ಹೋದ ಹಾಗೇ. ಆದರೆ ಯಾರ ಕೆಲಸವಾದರೂ ಮೆಚ್ಚುಗೆಯಾದರೆ ಕೈಯೆತ್ತಿಕೊಡುತ್ತಾರೆ. ನೋಡಿ, ಕ್ಯಾಮಾರಾಮನ್ ಫರ್ದೂನ್‌ಜೀ ಬೊಂಬಾಯಿಯಿಂದ ಇಲ್ಲಿಗೆ ಬಂದಾಗ ಅವರನ್ನು ಐದುನೂರು ರೂಪಾಯಿ ಸಂಬಳದ ಮೇಲೆ ಗೊತ್ತುಮಾಡಿಕೊಂಡರು. ಒಂದು ವರ್ಷದೊಳಗಾಗಿ ಫರ್ದೂನ್‌ಜೀಗೆ ಬಡ್ತಿಕೊಟ್ಟು ಈಗ ತಿಂಗಳಿಗೆ ಸಾವಿರ ರೂಪಾಯಿ ಕೊಡು ತ್ತಿದ್ದಾರೆ.—ನಿಮ್ಮ ಕೆಲಸ ನೀವು ಸರಿಯಾಗಿ ಮಾಡಿಕೊಂಡು ಹೋದರೆ ಸ್ಟೂಡಿಯೋದವರಿಂದ ಏನೂ ತೊಂದರೆ ಬರುವುದಿಲ್ಲ. ಅವರು ನಿಮಗೆ ಎಲ್ಲ ಬಗೆಯ ಸಹಕಾರವನ್ನೂ ನೀಡುತ್ತಾರೆ."

"ಆದರೂ ನಮ್ಮ ಉಷಾರೀಲಿ ನಾವು ಇರಬೇಕು"

ಎಂದು ಸಾಹುಕಾರರು ಸೂಚಿಸಿದರು.

"ನಿಮ್ಮ ಆರ್ಟಿಸ್ಟುಗಳನ್ನು ಗೊತ್ತುಮಾಡಿಕೊಂಡಿರುವಿರಾ?"

"ಇಲ್ಲಾ ಸ್ವಾಮಿ. ಎಲ್ಲಾ ಇನ್ನು ಮೇಲೆ ಆಗಬೇಕು."

"ಸಂಗೀತದ್ದು ಬಹಳ ದೊಡ್ಡ ವಿಷಯ ಮ್ಯೂಸಿಕ್ ಡೈರೆಕ್ಟರನ್ನು (Music Director) ನಾವು ಕೂಡಲೆ ಗೊತ್ತುಮಾಡಿಕೊಳ್ಳಬೇಕು."

ಎಂದು ಚಿನ್ನಪ್ಪ ಹೇಳಿದ.

" ನಿಮಗೆ ತಿಳಿದಂತೆ ಯಾರಾದರೂ ಅಪ್ರೇನು ಸ್ವಾಮಿ. "

" ನಿಮ್ಮಲ್ಲಿಯೇ ಮ್ಯೂಸಿಕ್ ಡೈರೆಕ್ಟರು ಸಿಕ್ಕುವುದಿಲ್ಲವೇ ? "

" ಸಿಕ್ಕುತ್ತಾರೆ. ಆದರೆ ಫಿಲಂ ಮ್ಯೂಸಿಕ್ ಡೈರೆಕ್ಟ್ ಮಾಡಿದ ಅನುಭವಿಕರು ಸಿಕ್ಕುವುದು ದುರ್ಲಭ. "

" ಇಲ್ಲಿ ಯಾರಾದರೂ ಸರಿಯಾದವರು ಇದ್ದರೆ ಏಳಿ ಸ್ವಾಮಿ "

ಎಂದು ಸಾಹುಕಾರರು ಮತ್ತೆ ಕೇಳಿದರು.

" ನಮ್ಮ ಸ್ಟುಡಿಯೋ ಚಿತ್ರಕ್ಕೆ ಈಗ ಸತ್ಯನಾಥನ್ ಸಂಗೀತ ದಿಗ್ದರ್ಶನ ಮಾಡುತ್ತಿದ್ದಾರೆ. ಇನ್ನೊಂದು ವಾರ ಅವರಿಗೆ ಕೆಲಸವಿದೆ. ಅನಂತರ ಬಿಡುವು. ಅವರಿಗೆ ಬೇಕಾದರೆ ನಾನು ಹೇಳಿ ಕಳಿಸಿಕೊಡುತ್ತೇನೆ."

" ಅವರು ಹೇಗೆ ? "

" ಮನುಷ್ಯ ತುಂಬ ಸಂಭಾವಿತರು ದಕ್ಷಿಣಾದಿ, ಉತ್ತರಾದಿ, ಪಾಶ್ಚಾತ್ಯ ಸಂಗೀತ ಚೆನ್ನಾಗಿ ತಿಳಿದುಕೊಂಡಿದ್ದಾರೆ. ಈಗಾಗಲೇ ನಾಲ್ಕೈದು ತಮಿಳು ಚಿತ್ರಗಳಿಗೆ ಸಂಗೀತ ಹಾಕಿಕೊಟ್ಟಿದ್ದಾರೆ. ಹೆಸರೂ ಚೆನ್ನಾಗಿದೆ. "

" ನಾಳೆ ಮಧ್ಯಾನ್ಹ ಕಳಿಸಿಕೊಡಿ ಸ್ವಾಮಿ. "

ಎಂದು ಸಾಹುಕಾರರು ತಿಳಿಸಿದರು.

## ೧೩

ಬೆಳಿಗ್ಗೆ ಎಲ್ಲರಿಗಿಂತ ಮೊದಲು ಎದ್ದವರು ಸಾಹುಕಾರ ರುದ್ರಪ್ಪನವರು. ಚಿನ್ನಪ್ಪನನ್ನು ಅವರೇ ಎಬ್ಬಿಸಿ ಸ್ನಾನದ ವ್ಯವಸ್ಥೆ ಮಾಡಿಸಿಕೊಂಡರು. ಉಳಿದವರು ಏಳುವವೇಳೆಗೆ ಸಾಹುಕಾರರು 'ಶಿವಪೂಜೆ' ಮುಗಿಸಿದ್ದರು. ಚಿನ್ನಪ್ಪ ಸಾಹುಕಾರರನ್ನು ಮೀರಿಸುವಂತೆ ಹಣೆಯ ಮೇಲೆ ತ್ರಿಪುಂಡ್ರ ಧರಿಸಿದ.

ಭೂಪೇನ್, ಶಿವಾನಂದ, ಸುದರ್ಶನ ಸ್ನಾನ ಮುಗಿಸಿಕೊಂಡು ಬರಲು ಉಪಾಹಾರ ಬಂದಿತು. ಉಪಹಾರ ಸಾಗಿರಲು ಸಾಹುಕಾರರು

" ನಾನು ಏನೊಂತಿದ್ದೆ – ನಮ್ಮ ಸ್ವಾಮಿಯೋರು ಭೋ ಚುರುಕು. ಚಿಟ್ಟಿಯಾರರಿಗೇ ಬಿಸಿಯಾಗಿ ಮುಟ್ಸಿಬಿಟ್ರು. "

" ಅವರ ಮಾತೂ ಬರವಣಿಗೆ ಎರಡೂ ಬೆಂಕಿಯಿದ್ದ ಹಾಗೆ ಸಾಹುಕಾರರೇ "

ಎಂದು ಶಿವಾನಂದ ತನ್ನ ಮೆಚ್ಚುಗೆ ವ್ಯಕ್ತಮಾಡಿದ.

"ನೀವು ಏನು ಪ್ಯಾಸ್ ಮಾಡಿದ್ದೀರಿ ಸ್ವಾಮಿ."

ಸುದರ್ಶನ ನಸುನಗುತ್ತಾ

"ಹನ್ನೆರಡು ರೂಪಾಯಿ ಪರೀಕ್ಷೆಗೆ ಎರಡು ಸಲ ಹೋಗಿ ಘುಮಕಿ ಹೊಡೆದು ಸ್ಕೂಲಿಗೆ ತಿಲೋದಕ ಬಿಟ್ಟೆ."

"ಅವರು ಕಾಲೇಜಿಗೆ ಮಣ್ಣು ಹೊರದಿರುವುದೂ ಒಂದೇ – ನಾವೆಲ್ಲಾ ಹೊತ್ತಿರುವುದೂ ಒಂದೇ ಸಾಹುಕಾರರೇ."

"ಏನೋ ಸ್ವಾಮಿ. ನನ್ಗೆ ಅವೆಲ್ಲಾ ಗೊತ್ತಾಗಾಕಿಲ್ಲ. ನಮ್ಮ ಪಿಕ್ಚರು ಚೆನ್ನಾಗೋ ಅಂಗೆ ಮಾಡಿಬಿಡಿ. ಬೇರೆ ದೇಸಕ್ಕೆ ಬಂದಿದ್ದೇವೆ. ಇವರು ನಮ್ಮುಖಕ್ಕೆ ಮಸಿಬಳೀದ್ದಂಗೆ ನೋಡಿಕೊಳ್ಳಿ."

"ಕೆಲಸದ ವ್ಯವಸ್ಥೆ ಸರಿಯಾಗಿ ಮಾಡಿಕೊಂಡು ನಾವು ಅನ್ಯೋನ್ಯವಾಗಿ ನಡೆದುಕೊಂಡರೆ ಈ ಜನದೂ ನಮ್ಮನ್ನು ತಲೆಯಮೇಲೆ ಕೂಡಿಸಿಕೊಂಡು ಮೆರಸುತ್ತಾರೆ. ನಾನು ಒಂದು ವಿಷಯ ಸ್ಪಷ್ಟವಾಗಿ ಹೇಳಿಬಿಡುತ್ತೇನೆ ಸಾಹುಕಾರರೇ – ನಿಮ್ಮ ಮನಸ್ಸಿಗೆ ಬೇಸರವನ್ನುಂಟುಮಾಡಿಕೊಳ್ಳಬಾರದು."

"ಹೇಳಿ – ಇದ್ದದ್ದು ಇದ್ದಂತೆ ಆಡೋರ್ನ ಕಂಡರೆ ನಂಗೂ ಸಂತೋಸ"

"ಚಲನ ಚಿತ್ರಕ್ಕೂ ನಾಟಕಕ್ಕೂ ಒಂದು ದೊಡ್ಡ ವ್ಯತ್ಯಾಸವಿದೆ. ನಾಟಕದಲ್ಲಿ ಪ್ರೇಕ್ಷಕರ ಮುಂದೆ ಜೀವಂತ ವ್ಯಕ್ತಿಗಳು ನಿಂತಿರುತ್ತಾರೆ. ಚಲನ ಚಿತ್ರದಲ್ಲಿ ಬರೀ ನೆರಳು. ಒಂದು ನಾಟಕದಲ್ಲಿ ಒಬ್ಬ ನಟ ತನ್ನ ಪಾತ್ರ ಕೆಡಿಸಿದರೆ ಉಳಿದವರು ಅದನ್ನು ತೂಗಿಸಿಕೊಂಡು ಹೋಗಲು ಸಾಧ್ಯ; ಅವನೇ ಇನ್ನೊಮ್ಮೆ ತನ್ನ ಪಾತ್ರವನ್ನು ತಿದ್ದಿಕೊಂಡು ಚೆನ್ನಾಗಿ ಅಭಿನಯಿಸಬಹುದು. ಚಲನ ಚಿತ್ರದಲ್ಲಿ ಈ ಬಗೆಯ ಸ್ವಾತಂತ್ರ್ಯ ಸಾಧ್ಯವಿಲ್ಲ. ಒಮ್ಮೆ ಚಿತ್ರ ಗ್ರಹಣವಾಗಿಬಿಟ್ಟರೆ ಅದರ ಕೆಲಸ ಮುಗಿದು ಹೋಗುತ್ತದೆ. ಒಬ್ಬ ಕೆಡಿಸಿದ್ದನ್ನು ಸರಿಮಾಡಬೇಕಾದರೆ ಸಾವಿರಾರು ರೂಪಾಯಿ ಖರ್ಚಾಗುತ್ತದೆ; ಆದರೂ ಅದು ಸರಿಹೋಗುತ್ತದೆಯೆಂದು ಧೈರ್ಯವಾಗಿ ಹೇಳಲು ಬರುವಂತಿಲ್ಲ. ಐಕಮತ್ಯ, ಒಮ್ಮತಿ ಸಮ್ಮತಿಯೇ ಚಿತ್ರನಿರ್ಮಾಣದ ಜೀವನಾಡಿ. ಪ್ರಧಾನ ಪಾತ್ರ ಮಾಡುವವರು ಎಷ್ಟು ಮುಖ್ಯವೋ ಅಷ್ಟೇ ಸಣ್ಣ ಪಾತ್ರ ಮಾಡುವವರೂ ಮುಖ್ಯ; ಅಲ್ಲದೆ ಈ ಕ್ರಿಯೆಯ ಪರಿಮಿತಿಯೊಳಗೆ ಬರುವ ಪ್ರತಿಯೊಬ್ಬ ನೌಕರನೂ–ಬಣ್ಣ ಹಾಕುವವನು, ಕ್ಲ್ಯಾಪ್ ಸ್ಟಿಕ್ (Clap-stick) ಹಿಡಿಯುವವನು, ವಸ್ತ್ರಭೂಷಣ ಕೊಡಿಸುವವನು, ದೀಪದ ಕೆಲಸ ಮಾಡುವವನು, ಕ್ಯಾಮೆರಾ ಟ್ರಾಲಿ ತಳ್ಳುವವನು–ಅಷ್ಟೇ ಮುಖ್ಯರಾಗಿದ್ದಾರೆ. ಯಾರಿಗೆ ಅಸಮಾಧಾನವಾದರೂ ಚಿತ್ರ ಕೆಟ್ಟುಹೋಗುತ್ತದೆ. ಖರ್ಚು ವಿನಾ

ಕಾರಣ ಒಂದಕ್ಕೆ ಹತ್ತಾಗುತ್ತದೆ. ಒಬ್ಬ ಸಣ್ಣ ನಟಿ ಕೋಪಿಸಿಕೊಂಡು ಹೊರಟುಹೋದರೆ ಇಡಿಯ ಚಿತ್ರದ ಕೆಲಸವೇ ನಿಂತುಹೋಗುತ್ತದೆ. ಎಲ್ಲರನ್ನೂ ಸ್ನೇಹಪೂರ್ವಕವಾಗಿ ವಿಶ್ವಾಸದಿಂದ ನಡೆಸಿಕೊಂಡರೆ ಚಿತ್ರ ಬದುಕಿಕೊಳ್ಳುತ್ತದೆ."

"ನ್ಯಾಯ ಸ್ವಾಮಿ. ನೀವು ಹೇಳೋದು ಬಿಲ್‌ಕುಲ್ ನಿಜ."

"ಅದಕ್ಕೆ ಆದಷ್ಟು ಮಟ್ಟಿಗೆ ನಮ್ಮ ಗುಂಪಿನಲ್ಲಿ ವೈಮನಸ್ಯ ಬರದಂತೆ ನಾವು ಎಚ್ಚರವಾಗಿರಬೇಕು."

"ಎಂಗಿರಬೇಕು ಅದೂ ಏಳಿಬಿಡಿ."

"ಜಾತಿ, ಮತದ ಪ್ರಶ್ನೆ ಬರಬಾರದು. ಇವನು ಲಿಂಗಾಯಿತ, ಇವನು ಬ್ರಾಹ್ಮಣ, ಇವನು ಜೈನ ಎಂದು ಭೇದ ಕಲ್ಪಿಸಬಾರದು. ಇವನು ನಮ್ಮವನು ಎಂದು ತಲೆಯ ಮೇಲೆ ಕೂಡಿಸಿಕೊಂಡು ಉಳಿದವರನ್ನು ತುಳಿಯಬಾರದು. ಯೋಗ್ಯತೆಯುಳ್ಳವರು ಯಾರೇ ಆಗಿರಲಿ ಅವರಿಗೆ ಪುರಸ್ಕಾರ ದೊರೆಯಬೇಕು."

"ಅಂಗೆ ತಾನೆ ಇರ್ಬೇಕು."

"ಚಿತ್ರದ ಕೆಲಸ ಜೀವ ಹಿಂಡುವ ಕೆಲಸ, ರಕ್ತ ಒಣಗಿಸುವ ಕೆಲಸ. ಒಂದು ದಿನ ಅಥವಾ ಒಂದು ರಾತ್ರಿ ದೀಪಗಳ ಮುಂದೆ ನಿಂತು ಸುಡಿಸಿಕೊಂಡು ಬಂದ ನಟ ನಟಿಯರು ಜೀವಶವಗಳಾಗುತ್ತಾರೆ. ಅವರ ಊಟ, ಉಪಚಾರ, ಸ್ನಾನ, ಆರೋಗ್ಯದ ವ್ಯವಸ್ಥೆ ಅಚ್ಚುಕಟ್ಟಾಗಿ ಮಾಡಬೇಕು. ಅವರ ಮನಸ್ಸಿನಲ್ಲಿ ಸಂತೋಷವಿದ್ದರೆ ತಾನೆ ಅವರ ಕೆಲಸದಲ್ಲಿಯೂ ಸಂತೋಷ ಕಂಡು ಬರುವುದು."

"ನೀವು ಏಳಿದ್ದೆಲ್ಲಾ ನಂಗೆ ಒಪ್ಪಿಗೆ ಐತೆ ಸ್ವಾಮಿ. ಚಿನ್ನಪ್ಪ—ಸೋಮಿಯೋರು ಎಂಗೆ ಏಳ್ತಾರೆ ಅಂಗೆ ಮಾಡು."

ಎಂದರು. ಸುದರ್ಶನರ ಸ್ಪಷ್ಟೋಕ್ತಿಗೆ ಚಿನ್ನಪ್ಪ ತನ್ನ ಮುಖ ಭಂಗಿಯಿಂದಲೂ ಅಭಿಪ್ರಾಯ ವ್ಯಕ್ತಗೊಳಿಸಲಿಲ್ಲ. ಶಿವಾನಂದ, ಭೂಪೇನ್ ಬಾಬು ಸಂತೋಷಪಟ್ಟರು.

ಸಾಹುಕಾರರೂ ಅವರ ಪರಿವಾರ ಸ್ಟೂಡಿಯೋಕ್ಕೆ ತಲುಪಿದ ಕೂಡಲೆ ರಾಮಾನುಜಂ ಮಿಠಾಯಿ ಪೊಟ್ಟಣ ಬಿಚ್ಚಿ ಎಲ್ಲರಿಗೂ ಪೇಡಾ ಹಂಚಿದರು.

ತುಂಬಿದ ಕಾಂಟ್ರ್ಯಾಕ್ಟ್ ಫಾರ್ಮು ಸಿದ್ಧವಾಗಿತ್ತು. ಅದರಲ್ಲಿ ಮುಂಗಡವಾಗಿ ಹತ್ತು ಸಾವಿರ ರೂಪಾಯಿ ಕೊಡಬೇಕೆಂದು ಸೂಚಿತವಾಗಿತ್ತು. ಸಾಹುಕಾರರ ಪ್ರಾರ್ಥನೆಯಂತೆ ಐದು ಸಾವಿರ ಮುಂಗಡ ಹಣ ತೆಗೆದುಕೊಳ್ಳುವುದಕ್ಕೆ

ಚೆಟ್ಟಿಯಾರರು ಒಪ್ಪಿಕೊಂಡರು. ಕಚ್ಚಾ ಫಿಲ್ಮುಗಳನ್ನು ಕೊಳ್ಳುವುದಕ್ಕೆ ಸಾಹುಕಾರರು ಮತ್ತೆ ಐದು ಸಾವಿರ ರೂಪಾಯಿ ಕೊಟ್ಟರು.

ಕಾಂಟ್ರ್ಯಾಕ್ಟಿಗೆ ಉಭಯ ಪಕ್ಷದವರೂ ಸಹಿ ಹಾಕಿಸಿದರು. ಸುದರ್ಶನ, ಶಿವಾನಂದರು ಸಾಕ್ಷಿಗಳಾದರು.

ರಾಮಾನುಜಂ ಕೂಡಲೆ ತಮ್ಮ ಆರ್ಟ್ ಡೈರೆಕ್ಟರ್ ಬಾಲಮೂರ್ತಿಯವರಿಗೆ ಹೇಳಿ ಕಳುಹಿಸಿದರು. ಅವರಿಗೆ ಭೂಪೇನ್ ಬಾಬು, ಸುದರ್ಶನರು ಸೆಟ್ ನಿರ್ಮಾಣಕ್ಕೆ ಅತ್ಯವಶ್ಯಕವಾದ ಕೆಲವು ಸಲಹೆಗಳನ್ನಿತ್ತರು. ದಶರಥನ ಅಂತಃಪುರದಿಂದಲೇ ಚಿತ್ರತ ಷೂಟಿಂಗ್ ಆರಂಭಿಸಬೇಕೆಂದು ನಿರ್ಧರಿಸಲಾಯಿತು.

ಚೆಟ್ಟಿಯಾರರು ಎಲ್ಲರನ್ನೂ ಪ್ರೊಜೆಕ್ಷನ್ ರೂಮಿಗೆ ಕರೆದೊಯ್ದು ತಮ್ಮ ಮನೆಯ 'ಕಲ್ಯಾಣ'ದ ಚಿತ್ರವನ್ನು ತೋರಿಸಿದರು.

ಕಾಂಟ್ರ್ಯಾಕ್ಟ ಕೆಲಸ ಸುಮುಖವಾಗಿ ಆದುದಕ್ಕೆ ಎಲ್ಲರಿಗೂ ಸಂತೋಷವಾಯಿತು. ತಾನು ಕೈಗೊಂಡ ಕೆಲಸ ಇಷ್ಟು ಜಯಪ್ರದವಾಗಿ ಆದುದಕ್ಕೆ ಎಲ್ಲರಿಗಿಂತ ಚಿನ್ನಪ್ಪನಿಗೆ ಹೆಚ್ಚು ಸಂತೋಷವಾಯಿತು.

ಚೆಟ್ಟಿಯಾರರಿಂದ ಬೀಳ್ಕೊಂಡು ಎಲ್ಲರೂ ಹೊರಟರು. ಮನೆಗಳ ವಿಷಯ ರಾಮಾನುಜಂ ಅವರಿಗೆ ಚಿನ್ನಪ್ಪ ಪುನಃ ನೆನಪುಕೊಟ್ಟ.

" ನೀವೂ ನಿಮ್ಮ ಪಾರ್ಟಿ ಇಲ್ಲಿಗೆ ಬರುವುದಕ್ಕೆ ಒಂದು ವಾರ ಮುಂಚೆ ವೈರ್ ಮಾಡಿ. ನಾನು ಸ್ಟೂಡಿಯೋ ಆವರಣದ ಮನೆ, ಮತ್ತೆ ಎರಡು ಮನೆಗಳನ್ನು ಸಿದ್ಧಮಾಡಿಸಿಟ್ಟಿರುತ್ತೇನೆ. ನಿಮ್ಮ ಆಫೀಸಿಗೆ ಸ್ಟೂಡಿಯೋ ಒಳಗೆ ಒಂದು ರೂಮೂ ಕೊಡುತ್ತೇನೆ."

ಎಂದು ಹೇಳಿದರು.

ಹೊಟೇಲಿಗೆ ಹಿಂದಿರುಗಿದ ಮೇಲೆ ಸಾಹುಕಾರರು ಚಿನ್ನಪ್ಪನಿಗೆ

" ಚಿನ್ನಪ್ಪ, ಎಲ್ಲಾ ನಿನ್ನ ಮನಸ್ಸಿನಂತೇ ಆಯ್ತಲ್ಲಪ್ಪಾ. ಇನ್ನು ಏನೇನು ಮಾಡಿಸ್ತೀಯೋ ನೋಡುವ. ರಾತ್ರಿಗೆ ಊರಿಗೆ ಒಲ್ಡೊ ಏರ್ಪಾಟು ಮಾಡು."

" ಆಗಬಹುದು ಯಜಮಾನರೇ. ಮಧ್ಯಾಹ್ನಕ್ಕೆ ಮ್ಯೂಸಿಕ್ ಡೈರೆಕ್ಟರು ಬರ್‍ತಾರೆ. ಅವರನ್ನು ನೋಡಿಕೊಂಡು ರಾತ್ರಿಗೆ ಹೊರಟುಬಿಡೋಣ."

" ಬೊಂಬಾಯಿಗೆಂದು ಒಲ್ಡೋದು."

" ನಾಳೆ ಊರಿನ ಕೆಲಸಕಾರ್ಯ ನೋಡಿಕೊಂಡು ನಾಡಿದ್ದು ಹೊರಡೋಣ. ಇನ್ನೊಂದು ಕಲಸವಾಗಬೇಕಲ್ಲ ಯಜಮಾನರೇ ? "

" ಹೇಳು, ಅದೇನು ಕೆಲಸ."

" ಸರೋಜಮ್ಮನಿಗೆ ನಿಮ್ಮ ಕಾರಿದೆ. ಆರ್ಟಿಸ್ಟ್‌ಗಳನ್ನು ಕರ್ಕೊಂಡು ಬರೋದಿಕ್ಕೆ, ಮನೆಗೆ ಬಿಡುವುದಕ್ಕೆ ಕಂಪೆನಿಗೆ ಒಂದು ಕಾರುಬೇಕು. ಮೂರು ಮನೆಯಾಗುತ್ತದೆ ನೋಡಿ. ಒಂದೊಂದು ಒಂದೊಂದು ಕಡೆ. ಸುಮ್ಮನೆ ಇದರಲ್ಲಿಯೇ ಕಾಲ ಹೋಗಬಾರದು. ಸ್ಟುಡಿಯೋದವರು ನಮಗೆ ಕಾಲ್ ಷೀಟ್ (Call-Sheet) ಹಾಕಿದ ದಿವಸ ಎಂಟು ಗಂಟೆ ಕೆಲಸ ಮಾಡುತ್ತಾರೆ. ಅದರಲ್ಲಿ ಒಂದೂವರೆ ಗಂಟೆ ವಿಶ್ರಾಂತಿಗೆ ಹೋದರೆ ಅವರು ಕೆಲಸ ಮಾಡುವುದು ಆರೂವರೆ ಗಂಟೆ. ನಮ್ಮಿಂದ ತಡವಾದರೆ ಖರ್ಚು ಯದ್ವಾತದ್ವಾ ಆಗಿಬಿಡುತ್ತದೆ."

" ಇನ್ನೊಂದು ಕಾರೂಂದ್ರೆ ಅತ್ತು ಸಾವಿರ ಕುಕ್ಕಬೇಕಲ್ಲೋ ಚಿನ್ನಪ್ಪ. ಮೂಲಚಂದನ ತಾವ ಯಾವದೂ ಹಳೇ ವ್ಯಾನ್‌ಗೀನ್ ಇಲ್ವಾ."

" ಚೆನ್ನಾಗಿರೋ ವ್ಯಾನ್ ಅವನು ಸಿನೀಮಾ ಅಡ್ವರ್‌ಟೈಸ್‌ಮೆಂಟಿಗೆ ಉಪಯೋಗಿಸುತ್ತಿದ್ದಾನೆ. ಇನ್ನೊಂದು ಹಳೇ ವ್ಯಾನ್ ಮುರಿದು ಗ್ಯಾರೇಜ್‌ನಲ್ಲಿ ಬಿದ್ದಿದೆ."

" ಸೇಠನ್ನ ಗಿಲೀಟ್‌ಮಾಡಿ ಹಳೇವ್ಯಾನ್ ಐನೂರಕ್ಕೋ ಆರ್ನೂರಕ್ಕೋ ಖರೀದಿ ಮಾಡು. ಅದರ ಮ್ಯಾಕೆ ಒಂದು ಸಾವಿರ ಆಕಿ ರಿಪೇರಿ ಮಾಡಿಸ್ಕೊಂಡರೆ ನಮ್ಮ ಕೆಲಸ ತೂಗ್ತೈತೆ."

" ಮಾಡಬಹುದು. ಹಳೇ ಕಾರುಗಳ ಸಮಾಚಾರ ಹೀಗೇಂತ ನಿರ್ಧರವಾಗಿ ಹೇಳುವುದಕ್ಕಾಗುವುದಿಲ್ಲ. ಮಧ್ಯೆ ಕೈಕೊಟ್ಟರೆ ನಮ್ಮ ಕೆಲಸ ಅತಂತ್ರವಾಗುತ್ತದೆ."

" ಏನಿಲ್ಲ ಕಣೋ. ಈಗ ಬರೋ ಹೊಸ ಕಾರ್‌ಗಳಿಗಿಂತ ಹಳೇ ಕಾರುಗಳೇ ಗಟ್ಟಿ."

" ಸುದರ್ಶನರ ಜತೆ ಕಾಂಟ್ರ್ಯಾಕ್ಟ್ ಮಾಡಿಕೊಂಡು ಬಿಡಬೇಕು. ನಾವು ಬೊಂಬಾಯಿಗೆ ಹೋಗಿ ಬರುವಷ್ಟರಲ್ಲಿ ಅವರೂ ಭೂಪೆನ್ ಬಾಬುಗಳೂ ಕಥೆಯ ಕೆಲಸ ಆರಂಭಿಸಿರುತ್ತಾರೆ."

" ಅವರಿಗೆಷ್ಟು ಕೊಡಬೇಕು ಏನು ಎಂತಾ ವಿಚಾರಮಾಡಿದ್ದೀಯಾ?"

" ಶಿವಾನಂದರ ಜತೆ ವಿಚಾರಮಾಡಿದ್ದೇನೆ."

" ಎಷ್ಟು ಕೊಡಬೇಕಂತೆ?"

" ಐದು ಸಾವಿರವಾದರೂ ಕೊಡಬೇಕು ಎಂದು ಶಿವಾನಂದರು ಹೇಳಿದರು."

" ಸರಿ, ನಮ್ಮ ಕೊಂಪೆ ಕೂಲಿ ಓಗ್ತೈತೆ. ಇಂಗೆ ಕೊಟ್ಕೊಂಡು ಓದ್ರೆ ನಾವು ಉಳೀತೇವೇನೋ ಚಿನ್ನಪ್ಪ. ನೂರು ರೂಪಾಯಿ ಕೈಗೆ ಆಕಿದರೆ ಮಾದೇವ ಸಂತೋಸವಾಗಿ ಬರ್ಕೊಡ್ತಾನೆ."

" ಮಹಾದೇವಯ್ಯ ಬರೆಯುವುದಕ್ಕೂ ಸುದರ್ಶನರು ಬರೆಯುವುದಕ್ಕೂ ಬಹಳ ವ್ಯತ್ಯಾಸವಿದೆ ಸಾಹುಕಾರರೇ. ಸುದರ್ಶನರು ಕಥೆ, ಸಂಭಾಷಣೆ ಬರೆದಿದ್ದಾರೆಂದರೇ ನಮಗೇ ಒಂದು ದೊಡ್ಡ ಗೌರವ. ಸ್ಟಾರ್‌ಗಳಿಗೆ ಹೇಗೆ ನಾವು ಕೈತುಂಬ ಕೊಡಬೇಕೋ ಹಾಗೇ ಒಳ್ಳೆಯ ಕಥೆಗಾರರಿಗೂ ಕೊಡಬೇಕು. ಅಂಥಿಂಥ ಬರಹಗಾರರು ಭೂಪೇನ್ ಬಾಬುಗಳ ಹತ್ತಿರ ಪೂರೈಸಬೇಕಲ್ಲ. ಅವರಿಗೆ ಇಂಗ್ಲಿಷಿನಲ್ಲಿ ಬೇರೆ ಬರ್ಕೊಡಬೇಕು."

" ನಮ್ಮ ಆಸಾಮಿ ಇರುವಾಗ ಕಂಡೋರ್ಗೆ ಅಣ ಕೊಡಬೇಕಲ್ಲೋ ಚಿನ್ನಪ್ಪ."

" ಅದನ್ನೆಲ್ಲಾ ನಾವು ನೋಡುತ್ತ ಹೋದರೆ ಪಿಕ್ಚರ್ ಕೆಟ್ಟುಹೋಗುತ್ತದೆ. ಸುದರ್ಶನರ ಕೈ ಬಿಡುವುದು ನಮಗೆ ಲಾಭಕಾರಿಯಲ್ಲ."

" ಅಂಗಾರೆ ಎಷ್ಟಕ್ಕೆ ಗೊತ್ತುಮಾಡುತ್ತೀ"

" ನಾನೂ ಶಿವಾನಂದರೂ ಮಾತನಾಡಿಕೊಂಡೆವು. ಮೂರು ಸಾವಿರಕ್ಕೆ ಅವರನ್ನು ಒಪ್ಪಿಸಬೇಕೆಂದು ಯೋಚನೆ ಮಾಡಿದ್ದೇವೆ."

" ಅಂಗೇ ಮಾಡಪ್ಪ. ಶಿವಾನಂದನನ್ನೇನು ಮಾಡ್ತೀ ? "

" ಭರತನ ಪಾರ್ಟು ಅವರ ಕೈಲೇ ಮಾಡಿಸೋದು ಎಂದು ಭೂಪೇನ್ ಬಾಬು ಹೇಳಿದ್ದಾರೆ."

" ರಾಮುನಿಗೇನು ಮಾಡ್ತೀ."

" ಚಕ್ರವರ್ತಿಗೆ ಕಾಗದ ಬರೆದರೆ ಬರ್ತಾನೆ. ಅವನಿಗೇನೋ ಹೆಚ್ಚು ಕಡಿಮೆ ಕೊಟ್ಟರೆ ಆಗುತ್ತದೆ. ಶಿವಾನಂದರಿಗೆ........? "

" ಆ ವಿಷಯ ಸದ್ಯಕ್ಕೆ ಅಂಗೇ ಇರ್ಲಿ ಬಿಡು. ನಾನು ಶಿವಾನಂದರ ಕೈಲಿ ಮಾತಾಡಿ ಇತ್ಯರ್ಥ ಮಾಡ್ತೇನೆ."

ಎಂದು ಹೇಳಿದರು. ಎಲ್ಲರೂ ಊಟ ಮುಗಿಸಿ ಸ್ವಲ್ಪಹೊತ್ತು ವಿಶ್ರಾಂತಿಗೆ ತೆರಳಿದರು.

ಸುಮಾರು ನಾಲ್ಕು ಗಂಟೆಯ ವೇಳೆಗೆ ರೂಮು ಬಾಗಿಲು ಯಾರೋ ತಟ್ಟಿದರು. ಚಿನ್ನಪ್ಪನೇ ಎದ್ದುಹೋಗಿ ಬಾಗಿಲು ತೆಗೆದ. ಹೊರಗೆ ನಿಂತಿದ್ದವರು ಚಿನ್ನಪ್ಪನ ಕೈಗೆ ಜೊಗೆನ್ ಬಾಬುಗಳ ವಿಸಿಟಿಂಗ್ ಕಾರ್ಡುಕೊಟ್ಟು

" ನಾನೇ ಸತ್ಯನಾಥನ್. ಇವರು ವರದರಾಜ ಅಯ್ಯಂಗಾರ್ಯರು "

ಎಂದು ಹೇಳಿದರು. ಚಿನ್ನಪ್ಪ ಅವರನ್ನು ಒಳಕ್ಕೆ ಬರಮಾಡಿಕೊಂಡು ಕೂಡಲು ಹೇಳಿದ. ಸಾಹುಕಾರರು, ಶಿವಾನಂದ, ಭೂಪೆನ್‌ಬಾಬು, ಸುದರ್ಶನರು ಮುಖ ಪ್ರಕ್ಷಾಳನ ಮಾಡಿಕೊಂಡು ಬಂದು ಕುಳಿತರು.

ಚಿನ್ನಪ್ಪ ಕಾಫಿ ತರಲು ಹೇಳಿಬಂದು ಎಲ್ಲರ ಪರಿಚಯವನ್ನು ಸತ್ಯನಾಥನ್ ಮತ್ತು ವರದರಾಜ ಅಯ್ಯಂಗಾರ್ಯರಿಗೆ ಮಾಡಿಕೊಟ್ಟ.

ಸತ್ಯನಾಥನ್ ಸಾಹುಕಾರರಿಗೂ ಇತರರಿಗೂ ವರದರಾಜ ಅಯ್ಯಂಗಾರ್ಯರ ಪರಿಚಯಮಾಡಿಕೊಡುತ್ತಾ

"ಇವರು ನಿಮಗೆ ಗೊತ್ತಿರಬೇಕು. ಮೈಸೂರಿನವರು. ಒಳ್ಳೆಯ ವೀಣೆ ವಿದ್ವಾಂಸರು. ಇಲ್ಲಿ ಒಂದು ವಾದ್ಯಮೇಳ (Orchestra) ಇಟ್ಟುಕೊಂಡಿದ್ದಾರೆ. ಎಷ್ಟೋ ತಮಿಳು, ತೆಲುಗು ಚಿತ್ರಗಳಿಗೆ ಮ್ಯೂಸಿಕ್ ಕೊಟ್ಟಿದ್ದಾರೆ."

ಕಾಫಿ ಬರಲು, ಎಲ್ಲರೂ ಅದನ್ನು ಸವಿಯುತ್ತ ಕುಳಿತರು. ಸತ್ಯನಾಥನ್ ಅವರ ಬಲಗಾಲು ಊನವಾಗಿದ್ದುದನ್ನು ಕಂಡು ಸಾಹುಕಾರ ರುದ್ರಪ್ಪನವರು

"ಕಾಲಿಗೆ ಏನಾಯಿತು ಸ್ವಾಮಿ?" ಎಂದು ಕೇಳಿದರು.

"ಅದೊಂದು ದೊಡ್ಡ ಕಥೆ. ನಾನು 'ಶ್ರೀ ಕಂದನ್ ನಾಟಕ ಸಭೆ'ಯ ಮುಖ್ಯ ನಟನಾಗಿದ್ದೆ. ಇಡಿಯ ದಕ್ಷಿಣ ಹಿಂದೂಸ್ಥಾನದಲ್ಲೆಲ್ಲಾ ನಮ್ಮ ಕಂಪೆನಿ ಹೆಸರುಗಳಿಸಿತು. ನಾವು ಮೈಸೂರಿಗೆ ಮೂರು ಸಲ ಬಂದಿದ್ದೆವು. ಒಂದು ದಿನ ಅಕಸ್ಮಾತ್ತಾಗಿ ಮೋಟಾರೊಂದು ಬಂದು ನನ್ನ ಕಾಲಿಗೆ ಡಿಕ್ಕಿ ಹೊಡೆಯಿತು. ನನ್ನ ಪ್ರಾಣವೇ ಹೋಗಿಬಿಡಬೇಕಾಗಿತ್ತು. ಆದರೆ ದೈವವಶಾತ್ ನಾನು ಉಳಿದುಕೊಂಡೆ – ಕಾಲು ಈ ಸ್ಥಿತಿಗೆ ಬಂದಿತು."

"ನಿಮ್ಮ ವಿಷಯ ಜೊಗೆನ್ ಬಾಬುಗಳು ಬಹಳ ಹೇಳಿದ್ದಾರೆ. ನಮ್ಮ ಚಿತ್ರಕ್ಕೆ ನಿಮ್ಮ ಕೈಲೇ ಸಂಗೀತ ಹಾಕಿಸ್ಬೇಕು ಎಂದು ಅವರೇ ಹೇಳಿದರು."

"ಆಗಬಹುದು. ಇದೇ ಒಂದು ಚಿತ್ರದ ಕೆಲಸ ಮುಗಿಸಿದ್ದೇನೆ. ಸಾಮಾನ್ಯವಾಗಿ ನಾನು ಮ್ಯೂಸಿಕ್ ಡೈರೆಕ್ಟ್ ಮಾಡಿದ ಚಿತ್ರಗಳಿಗೆಲ್ಲಾ ವರದರಾಜ ಅಯ್ಯಂಗಾರ್ಯರು ತಮ್ಮ ವಾದ್ಯಮೇಳದೊಂದಿಗೆ ಸಹಕಾರ ಮಾಡಿದ್ದಾರೆ."

ಭೂಪೆನ್ ಬಾಬು ತಮ್ಮ ಚಿತ್ರಕ್ಕೆ ಬೇಕಾದ ಸಂಗೀತವನ್ನು ವರ್ಣಿಸಿದರು. ರುದ್ರಪ್ಪನವರು

"ಎರಡು ಮೂರು ಹಾಡು ಜನಕ್ಕೆ ಇಡಿಯೋ ಅಂಗೆ ಆಗ್ಬೇಕು ಸ್ವಾಮಿ. ಎಲ್ಲಾರ ಬಾಯಲ್ಲೂ ನಮ್ಮ ಚಿತ್ರದ ಹಾಡುಗಳು ಕುಣಿದಾಡ್ತಾ ಇರ್ಬೇಕು."

ಸತ್ಯನಾಥನ್ ಅಲ್ಲಿಯೇ ಕೆಲವು ಹಾಡುಗಳ ರಾಗ ಹಾಡಿ, ಗತಿ ತೋರಿಸಿ

"ನಿಮಗೆ ಎಂಥ ಹಾಡು ಬೇಕೋ ಹಾಕಿಕೊಡುತ್ತೇನೆ. ಪವಳಕ್ಕೊಡಿ, ಅಭಿಮನ್ಯು, ಓನ್ಲಿ ಟ್ರೊ, ರಾಧಾಕೃಷ್ಣ ಇತ್ಯಾದಿ ಚಿತ್ರಗಳಿಗೆ ನಾನು ಕೊಟ್ಟಿರುವ ಸಂಗೀತ ನೋಡಿ. ಅವುಗಳಿಗಿಂತ ಒಳ್ಳೆಯ ಸಂಗೀತ ಈ ಚಿತ್ರಕ್ಕೆ ಕೊಡ ಬೇಕೆಂದು ಆನೆಯಿದೆ. ತಮಿಳು ನಿರ್ದೇಶಕರು ನಮಗೆ ಸ್ವಲ್ಪವೂ ಸ್ವಾತಂತ್ರ್ಯ ಕೊಡುವುದಿಲ್ಲ. ಪ್ರೊಡ್ಯೂಸರುಗಳು ನಮಗೆ ಸಂಗೀತಪಾಠ ಹೇಳಿಕೊಡುತ್ತಾರೆ. ಸ್ಪ್ಯಾನಿಷ್, ಹವಾಯ್, ಇಂಗ್ಲಿಷ್ ಸಂಗೀತವನ್ನು ಬೆರಸಿ ಎಂದು ಹೇಳು ತ್ತಾರೆ. ನೀವು ನನಗೆ ಅವಕಾಶಕೊಟ್ಟರೆ ಭಾರತೀಯ ಚಿತ್ರಗಳಲ್ಲಿ ಸಂಗೀತ ಹೇಗಿರಬೇಕೆಂದು ತೋರಿಸುತ್ತೇನೆ."

"ನನ್ನದು ಅದೇ ಅಭಿಪ್ರಾಯ ಸತ್ಯನಾಥನ್ ಅವರೇ. ಹಲವು ಹನ್ನೊಂದು ಸಂಗೀತ ಬೆರಸದೆ ಶುದ್ಧ ಕರ್ನಾಟಕ ಸಂಗೀತವನ್ನೇ ಅಳವಡಿಸಿ ಕೊಂಡು ಪಂಡಿತ, ಪಾಮರರಂಜಕವಾಗುವಂತೆ ಚಿತ್ರಕ್ಕೆ ಸಂಗೀತ ಹಾಕ ಬಹುದೆಂದು ನನ್ನ ಅಭಿಪ್ರಾಯ."

ಎಂದು ಸುದರ್ಶನರು ಹೇಳಲು ಸತ್ಯನಾಥನ್‌ರಿಗೆ ಎಂಟು ಭುಜ ಬಂದಂತಾಯಿತು.

"ಕರ್ನಾಟಕ ಸಂಗೀತದ ವ್ಯಾಪ್ತಿ, ಅಖಿಳ ಜಗತ್ತಿನ ಯಾವ ಸಂಗೀತಕ್ಕೆ ಇದೆ ಸ್ವಾಮಿ. ನಮ್ಮ ಕಲೆಗಳ ಮರ್ಮ ನಾವೇ ಅರ್ಥಮಾಡಿಕೊಂಡಿಲ್ಲ."

ಎಂದರು.

ಸತ್ಯನಾಥನ್ ಅವರನ್ನು ಸಂಗೀತ ನಿರ್ದೇಶನಕ್ಕೆ ಗೊತ್ತುಮಾಡಿ ಕೊಳ್ಳುವ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಬರಲಿಲ್ಲ. ಚಿನ್ನಪ್ಪ ವ್ಯವಹಾರದ ಮಾತು ತೆಗೆದ.

"ಜೊಗೆನ್ ಬಾಬುಗಳನ್ನು ಕೇಳಿನೋಡಿ. ಅವರ ಸ್ಟುಡಿಯೋದವರು ಎಷ್ಟು ಕೊಟ್ಟಿದ್ದಾರೆ ಅಷ್ಟೇ ಕೊಡಿ."

"ಅವರೆಷ್ಟುಕೊಟ್ಟಿದ್ದಾರೆ."

"ಇಡಿಯ ಚಿತ್ರಕ್ಕೆ ಹತ್ತು ಸಾವಿರ ರೂಪಾಯಿ ನನಗೆ, ವಾದ್ಯ ಮೇಳಕ್ಕೆ ಇಪ್ಪತ್ತೆರಡು ಸಾವಿರ ರೂಪಾಯಿ."

ರುದ್ರಪ್ಪನವರೇ ಚೌಕಾಸಿ ಆರಂಭಿಸಿ ಕೊನೆಗೆ ಸತ್ಯನಾಥನ್ ಅವರಿಗೆ ಆರು ಸಾವಿರ ಕೊಡತಕ್ಕದೆಂದೂ, ವರದರಾಜ ಅಯ್ಯಂಗಾರ್ಯರು ಮತ್ತು ಅವರ ವಾದ್ಯ ಮೇಳಕ್ಕೆ ಹದಿನಾರು ಸಾವಿರ ಕೊಡತಕ್ಕದೆಂದೂ ನಿಶ್ಚಯಿಸಿ

ದರು. ಸಾಹುಕಾರರ ಸೂಚನೆಯನ್ನು ಒಪ್ಪಿಕೊಳ್ಳುವುದಕ್ಕೆ ಸತ್ಯನಾಥನ್ ಸ್ವಲ್ಪ ಹಿಂದೆ ಮುಂದೆ ನೋಡಿದಾಗ

“ ನೀವು ಒಪ್ಕೊಳ್ಳಿ ಸ್ವಾಮಿ. ಇದೊಂದು ಪಿಕ್ಚರ್ರು ಚೆನ್ನಾಗಿ ನಡೆಯಲಿ. ಮುಂದಿನ ಪಿಕ್ಚರಿಗೆ ಹೆಚ್ಚಾಗಿ ಕೊಡ್ತೀನಿ. ಇದರಲ್ಲೇ ನಾಲ್ಕು ಕಾಸು ಜಾಸ್ತಿ ಬಂದರೆ ನಿಮಗೆ ನಾನು ಮರ್ವಾದೆ ಮಾಡ್ತೇನೆ.”

ಎಂದರು. ಭೂಪೆನ್ ಬಾಬುಗಳೂ ನಯವಾಗಿ ಒತ್ತಾಯ ಮಾಡಿದರು. ಸತ್ಯನಾಥನ್ ಒಪ್ಪಿಕೊಂಡರು.

ಸ್ಥೂಲವಾದ ಒಂದು ಕಂಟ್ರ್ಯಾಕ್ಟ್ ಅಲ್ಲೇ ಆಯಿತು. ಚಿನ್ನಪ್ಪ ಸತ್ಯನಾಥನ್ ಅವರಿಗೆ ಒಂದು ಸಾವಿರ, ವರದರಾಜ ಅಯಂಗಾರ್ಯರಿಗೆ ಒಂದು ಸಾವಿರ ಮುಂಗಡವಾಗಿ ಚೆಕ್ಕುಗಳನ್ನು ಕೊಟ್ಟು ರಶೀದಿ ತೆಗೆದುಕೊಂಡ.

ಸತ್ಯನಾಥನ್ ತಮ್ಮ ಕಾರ್ಯಕ್ರಮ ವಿವರಿಸುತ್ತಾ

“ ಇದುವರೆಗೆ ನಾನೂ, ಅಯ್ಯಂಗಾರ್ಯರೂ ಅವರ ವಾದ್ಯಮೇಳದವರೂ, ‘ ಶ್ರೀ ಪ್ರೊಡ್ಯೂಸರ್ಸ್’ ಅವರ ಅತಿಥಿಗಳಾಗಿದ್ದೆವು. ನಾವು ಇರುವುದಕ್ಕೆ ಸ್ಥಳ, ಊಟ ಉಪಚಾರ ಎಲ್ಲಾ ಅವರೇ ನೋಡಿಕೊಳ್ಳುತ್ತಿದ್ದರು. ಇನ್ನು ಮೇಲೆ ನಾವು ಅಲ್ಲಿರಲು ಸಾಧ್ಯವಿಲ್ಲ.”

“ನಾವು ಇನ್ನು ಎರಡು ತಿಂಗಳೊಳಗಾಗಿ ಪಿಕ್ಚರ್ ಷುರುಮಾಡುತ್ತೇವೆ. ನಮ್ಮ ಜನ ಇರುವುದಕ್ಕೆ ಮನೆ ಮಾಡಿದ್ದೇವೆ. ನೀವು ಅಲ್ಲಿಯೇ ಬಂದುಬಿಡಿ. ನಮ್ಮ ಕೆಲಸಕ್ಕೂ ಅನುಕೂಲವಾಗುತ್ತದೆ.”

“ ಹಾಗೇ ಆಗಲಿ. ನಾನು ಊರಿಗೆ ಹೋಗಿ ಬರುತ್ತೇನೆ. ನೀವು ಬರುವವೇಳೆ ತಿಳಿಸಿದರೆ ನಾನೂ ಬಂದು ಬಿಡುತ್ತೇನೆ.”

ಎಂದು ತಮ್ಮ ಊರಿನ ವಿಳಾಸಕೊಟ್ಟರು.

ಸತ್ಯನಾಥನ್ ಮತ್ತು ವರದರಾಜ ಅಯ್ಯಂಗಾರ್ಯರನ್ನು ಬೀಳ್ಕೊಟ್ಟು ಚಿನ್ನಪ್ಪ ರಾತ್ರಿ ಬೆಂಗಳೂರಿಗೆ ಹಿಂದಿರುಗುವುದಕ್ಕೆ ಟಿಕೆಟ್‌ಗಳನ್ನು ಬುಕ್ ಮಾಡಲು ಹೋದ.

## ೧೪

ಬೆಂಗಳೂರು ತಲುಪಿದ ಮೇಲೆ ಮಾರನೆಯ ದಿನ ಮುಂಬಯಿಗೆ ಯಾರು ಯಾರು ಹೊರಡತಕ್ಕದ್ದೆಂದು ಜಿಜ್ಞಾಸೆ ಎದ್ದಿತು. ಅಳಿದೂ ಸುರಿದೂ ಕೊನೆಗೆ ಸಾಹುಕಾರರು, ಚಿನ್ನಪ್ಪ, ಸುದರ್ಶನರು ಹೊರಡುವುದೆಂದು ನಿಶ್ಚಯವಾಯಿತು.

ಭೂಪೆನ್ ಬಾಬು ತಮ್ಮ ಗೆಳೆಯರಾದ ಮಾನಿಕ್ ದಾದರ್‌ಕರ್ ಅವರಿಗೆ ಕಾಗದ ಬರೆದು ಸಾಹಕಾರರು ಬರುವ ವಿಷಯ ತಿಳಿಸಿದರು. ಕಾಗದ ತಲುಪುವ ಮೊದಲೇ ಸುದ್ದಿ ಗೊತ್ತಾಗಿರಲೆಂದು ತಂತಿಯನ್ನೂ ಕಳಿಸಿದರು.

ಬೆಳಿಗ್ಗೆ ಹೊರಡುವ ಎಕ್ಸ್‌ಪ್ರೆಸ್‌ನಲ್ಲಿ ಎಲ್ಲರೂ ಪ್ರಯಾಣ ಬೆಳಸಿದರು. ಮಾರನೆಯ ಮಧ್ಯಾಹ್ನ ಹನ್ನೊಂದು ಗಂಟೆಗೆ ಎಕ್ಸ್‌ಪ್ರೆಸ್ ವಿ. ಟಿ. ಸ್ಟೇಷನ್ ತಲುಪಿತು. ಸ್ಟೇಷನ್ನಿಗೆ ದಾದರ್‌ಕರ್ ಬಂದಿರಬಹುದೆಂದು ಚಿನ್ನಪ್ಪ ಹುಡುಕಿದ. ಅವರ ದರ್ಶನವಾಗದಿರಲು ವಿ. ಟಿ. ಸ್ಟೇಷನ್ನಿಗೆ ಸಮೀಪ ದಲ್ಲಿದ್ದ ಎಂಪೈರ್ ಹೊಟೇಲಿನಲ್ಲಿ ಹೋಗಿ ಇಳಿದುಕೊಂಡರು.

ಚಿನ್ನಪ್ಪ ತಡಮಾಡಲಿಲ್ಲ. ಕೂಡಲೆ ಮಾನಿಕ್ ಅವರ 'ಯೂನಿ ವರ್ಸಲ್ ಪಿಕ್ಚರ್ ಸರ್‌ಕ್ಯೂಟ್, ಕಛೇರಿಗೆ ಫೋನ್' ಮಾಡಿದ. ಮಾನಿಕ್ ಅವರೇ ಫೋನನ್ನು ಕೈಗೆತ್ತಿಕೊಂಡರು.

"ಹೆಲ್ಲೋ—ಯಾರದು ? ಯಾರು ಮಾತಾಡುವವರು ?"

"ನಾವು ಸರ್. ಬೆಂಗಳೂರಿನಿಂದ ಬಂದಿದ್ದೇವೆ."

"ಭೂಪೆನ್ ಬಾಬು ಕಡೆಯವರೇ ?"

"ಹೌದು. ಅವರ ತಂತಿ ನಿಮಗೆ ಬಂದಿರಬೇಕಲ್ಲವೇ ?"

"ಬಂತು. ನಾನು ಸ್ಟೇಷನ್ನಿಗೆ ಬರಬೇಕೆಂದಿದ್ದೆ. ಆಫೀಸಿನಲ್ಲಿ ಅರ್ಜೆಂಟ್ ಕೆಲಸ ಬಿದ್ದುಬಿಟ್ಟಿತು. ಎಲ್ಲಿದ್ದೀರಿ ?"

"ಎಂಪೈರ್ ಹೊಟೇಲಿನಲ್ಲಿ."

"ನನ್ನ ಆಫೀಸಿಗೆ ಬರುತ್ತೀರೇನು ?"

"ಬರುತ್ತೇವೆ. ಶಾಮಲಾಬಾಯಿಯ ವಿಷಯವೇನು ಮಾಡಿದಿರಿ ?"

"ಅವರ ಯಜಮಾನರ ಹತ್ತಿರ ನಾನು ಪ್ರಸ್ತಾಪ ಮಾಡಿದ್ದೇನೆ. ನೀವು ಬಂದರೆ ನಾನು ಫೋನ್ ಮಾಡಿ ದಾದಾಸಾಹೇಬರನ್ನು ಕರೆಸುತ್ತೇನೆ."

"ನಾವು ಇಲ್ಲಿ ಬಹಳ ದಿವಸ ನಿಲ್ಲುವ ಹಾಗಿಲ್ಲ. ನಮ್ಮ ಕೆಲಸ ಬೇಗ ಮಾಡಿಕೊಟ್ಟು ನೀವು ಉಪಕಾರ ಮಾಡಬೇಕು."

"ನೀವು ಬನ್ನಿ. ಎಲ್ಲಾ ಮಾತನಾಡೋಣ. ಎಷ್ಟು ಹೊತ್ತಿಗೆ ಬರುವಿರಿ ?"

"ಇದೇ ರೈಲಿನಿಂದ ಇಳಿದಿದ್ದೇವೆ. ಸ್ನಾನ, ಊಟ ಮುಗಿಸಿಕೊಂಡು ಎರಡು ಗಂಟೆಗೆ ಬರುತ್ತೇವೆ."

ಎರಡು ಗಂಟೆಗೆ ಸರಿಯಾಗಿ ಚಿನ್ನಪ್ಪ, ಸಾಹುಕಾರರನ್ನೂ ಸುದರ್ಶನ ರನ್ನೂ ಕರೆದುಕೊಂಡು ಫೆರೋಜ್ ಮೇಥಾ ರಸ್ತೆಯಲ್ಲಿದ್ದ ಮಾನಿಕ್ ದಾದರ್

ಕರ್ ಅವರ ಆಫೀಸಿಗೆ ಹೋದ. ಆಫೀಸಿನ ಪಟ್ಟೇವಾಲ ಅವರನ್ನು ಸಾಹೇಬರ ಬಳಿಗೆ ಕರೆದೊಯ್ದ.

ಪರಸ್ಪರ ಪರಿಚಯವಾದ ಮೇಲೆ ದಾದರ್‌ಕರ್ ಆಳನ್ನು ಕರೆದು ಚಹಾ ತರಹೇಳಿ, ಕೈಗೆ ಫೋನ್ ಎತ್ತಿಕೊಂಡು ದಾದಾ ಸಾಹೇಬರಿಗೆ 'ರಿಂಗ್' ಮಾಡಿ ಕೂಡಲೆ ಬನ್ನಿರೆಂದು ತಿಳಿಸಿ

"ದಾದಾ ಸಾಹೇಬ್ ಕಾಲು ಗಂಟೆಯಲ್ಲಿ ಬರುತ್ತಾರೆ. ಶಾಮಲಾ ಬಾಯಿಯವರ ಹಾಡಿನ ರಿಕಾರ್ಡಿಂಗ್ ನಡೆದಿದೆ. ಭೂಪೆನ್ ಬಾಬು ಏಕೆ ಬರಲಿಲ್ಲ?"

"ಅವರಿಗೂ ಕೈತುಂಬ ಕೆಲಸವಿತ್ತು. ನೀವಿರುವಾಗ ತಮ್ಮ ಅಗತ್ಯ ವಿಲ್ಲವೆಂದರು."

"ನಿಮ್ಮ ಚಿತ್ರ ಯಾವಾಗ ಆರಂಭಿಸುವಿರಿ?"

"ಎರಡು ತಿಂಗಳಲ್ಲಿ."

"ಸ್ಟೂಡಿಯೋ ಗೊತ್ತಾಯಿತೇ?"

ಚಿನ್ನಪ್ಪ ಮದರಾಸಿನ ಸ್ಟೂಡಿಯೋ ವಿಷಯ ವಿವರಿಸಿದ.

"ಒಳ್ಳೆಯ ಕೆಲಸ ಮಾಡಿದಿರಿ. ಕಾರ್ತಿಕೇಯ ಒಳ್ಳೆಯ ಸ್ಟೂಡಿಯೋ."

ಎಂದು ದಾದರ್‌ಕರ್ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ಚಹಾ ಬರಲು ದಾದರ್‌ಕರ್ ಬಲವಂತಕ್ಕೆ ಕಟ್ಟುಬಿದ್ದು ಎಲ್ಲರೂ ಚಹಾ ಸ್ವೀಕರಿಸಿದರು. ಸಾಹುಕಾರರು ಮುಂದುವರಿದು

"ಶಾಮಲಾಬಾಯಿ ಎಷ್ಟು ಕೇಳುತ್ತಾರೆ ನಿಮಗೆ ಗೊತ್ತಿದೆಯೇ?" ಎಂದರು.

"ನೋಡಿ. ಚಿತ್ರ ವ್ಯವಹಾರದಲ್ಲಿ ಹೀಗೇ ಎಂದು ನಿಗದಿಯಾಗಿ ಹೇಳಲು ಸಾಧ್ಯವಿಲ್ಲ. ಇದು ಸ್ಟಾರ್‌ಗಳ ಲಹರಿಯನ್ನು ಅವಲಂಬಿಸುವ ವಿಷಯ."

ಸಾಹುಕಾರರು ತಮ್ಮ ಸಾಹಸವನ್ನು ವರ್ಣಿಸಿ, ತಾವುಕೈಗೊಂಡಿರುವುದು ಕನ್ನಡ ಚಿತ್ರ ನಿರ್ಮಾಣವೆಂಬ ಅಂಶವನ್ನು ಒತ್ತಿ ಹೇಳಿ

"ಶಾಮಲಾಬಾಯಿಯವರನ್ನು ನೀವು ಆದಷ್ಟು ರಿಯಾಯತಿಗೆ ನಮಗೆ ಗೊತ್ತುಮಾಡಿಕೊಡಬೇಕು."

"ನೋಡಿ ಸಾಹುಕಾರ್‌ಜೀ, ಇಲ್ಲಿಯ ಸ್ಟಾರ್‌ಗಳು ದಕ್ಷಿಣಕ್ಕೆ ಹೋಗ ಲೊಪ್ಪುವುದು ಕಷ್ಟ. ಮುಂಬಯಿ ಬಿಟ್ಟು ಹೋದರೆ ಇಲ್ಲಿಯ ಮಾರ್ಕೆಟ್ ತಮ್ಮ ಕೈಬಿಟ್ಟು ಹೋಗುವುದೆಂದು ಹೆದರುತ್ತಾರೆ. ಇಲ್ಲಿ ಬರುವುದಕ್ಕಿಂತಲೂ

ಹೆಚ್ಚು ಹಣ ಬರುವುದಿದ್ದರೆ ಮಾತ್ರ ದಕ್ಷಿಣಕ್ಕೆ ಬರುತ್ತಾರೆ. ಶಾಮಲಾಬಾಯಿ ಬಹಳ ಹಣ ಕೇಳುವುದಂತೂ ಖಂಡಿತ."

"ಅದಕ್ಕೆ ನಿಮ್ಮ ಮರೆಹೊಕ್ಕಿದ್ದೇವೆ."

"ಇರಲಿ. ಮೊದಲು ನೀವು ದಾದಾ ಸಾಹೇಬರ ಜತೆ ಮಾತನಾಡಿ. ಮುಂದಿನ ವಿಷಯ ತರುವಾಯ ಆಲೋಚಿಸೋಣ."

"ದಾದಾ ಸಾಹೇಬರು ಯಾರು?"

"ಅವರೇ ಶಾಮಲಾಬಾಯಿಯ ಯಜಮಾನರು."

ದಾದಾ ಸಾಹೇಬ್ ಸಾಠೆ ನೇರವಾಗಿ ದಾದರ್‌ಕರ್ ಅವರ ಆಫೀಸಿನ ಒಳಕ್ಕೆ ಬಂದರು. ಪರಿಚಯ ವಿಧಿಯಾಯಿತು.

"ನಾನು ಹೇಳಿದ್ದೆನಲ್ಲಾ ದಾದಾ, ಕನ್ನಡ ಚಿತ್ರದ ವಿಷಯ, ಅದಕ್ಕಾಗಿ ಇವರು ಬಂದಿದ್ದಾರೆ. ಭೂಪೆನ್ ಬಾಬು ಕಳುಹಿಸಿಕೊಟ್ಟಿದ್ದಾರೆ."

ದಾದಾ ಸಾಹೇಬ್ ಪ್ರಸ್ತಾವಳಿಯನ್ನೇ ಆರಂಭಿಸಿದರು.

"ನಿಮ್ಮ ಚಿತ್ರಕ್ಕೆ ಎಷ್ಟು ಬಂಡವಾಳ ಹಾಕುತ್ತೀರಿ."

ಒಳ್ಳೆಯ ಚಿತ್ರ ಮಾಡಬೇಕೆಂದು ನಮ್ಮ ಇಚ್ಛೆ. ಇದಕ್ಕಾಗಿ ಎಷ್ಟು ಬಂಡವಾಳ ಬೇಕಾದರೂ ಹಾಕಲು ನಾವು ಸಿದ್ಧರಾಗಿದ್ದೇವೆ. ಕನ್ನಡದ ಮಾರ್ಕೆಟ್ ಬಹಳ ಸಣ್ಣದು. ಆದಷ್ಟು ಕಡಿಮೆ ಖರ್ಚಿನಲ್ಲಿ ಈ ಚಿತ್ರ ಮಾಡಿ ಕೊಂಡು ಮುಂದೆ ಇದಕ್ಕೂ ದೊಡ್ಡ ಚಿತ್ರಗಳನ್ನು ಮಾಡಬೇಕೆಂದಿದ್ದೇವೆ."

"ನೀವು ಚಿತ್ರವನ್ನು ಮುಂಬಯಿಯಲ್ಲಿಯೇ ಏಕೆ ಮಾಡಬಾರದು?"

"ಮದರಾಸಿನಲ್ಲಿ ನಮಗೆ ಹೆಚ್ಚಿನ ಸೌಲಭ್ಯಗಳು ಸಿಕ್ಕುತ್ತವೆ. ಅಲ್ಲದೆ ನಾವು ಮದರಾಸಿನ 'ಕಾರ್ತಿಕೇಯ ಸ್ಟೂಡಿಯೋ' ಜತೆಯಲ್ಲಿ ಕಾಂಟ್ರ್ಯಾಕ್ಟ್ ಮಾಡಿಕೊಂಡಿದ್ದೇವೆ."

"ನಾವು ಮುಂಬಯಿ ಬಿಟ್ಟು ಬರುವುದೇ ಕಷ್ಟ. ಶಾಮಲಾಬಾಯಿ ಒಟ್ಟಿಗೆ ಮೂರು ಚಿತ್ರಗಳಲ್ಲಿ ಅಭಿನಯ ಮಾಡುತ್ತಿದ್ದಾರೆ."

"ಚಿತ್ರ ಮುಗಿಯುತ್ತ ಬಂತು ಎಂದು ಕೇಳಿದೆವು."

"ಒಂದು ಚಿತ್ರ ಮುಗಿಯಿತು. ಇನ್ನೂ ಎರಡು ಬಾಕಿ ಇದೆ."

"ಸುಮ್ಮನೆ ಬಂದು ಕೆಲಸಮಾಡಿ ಎಂದು ನಾವು ಕರೆಯುತ್ತಿಲ್ಲ. ನ್ಯಾಯ ವಾಗಿ ಕೊಡಬೇಕಾದುದನ್ನು ನಾವೂ ಕೊಡಲು ಸಿದ್ಧರಾಗಿದ್ದೇವೆ. ಇದು ನಮ್ಮ ಪ್ರಥಮ ಪ್ರಯತ್ನವಾದುದರಿಂದ ನೀವು ಸ್ವಲ್ಪ ರಿಯಾಯಿತಿ ತೋರಿಸ ಬೇಕೆಂದು ಪ್ರಾರ್ಥಿಸುತ್ತಿದ್ದೇವೆ."

" ನೀವು ಮುಂಬಯಿಯಲ್ಲಿಯೇ ಚಿತ್ರ ಮಾಡಿದ್ದರೆ ನಮಗನುಕೂಲ ವಾಗಿತ್ತು."

ಎಂದು ದಾದಾ ಸಾಹೇಬ್ ಮತ್ತೆ ಹೇಳಿದರು. ಸುದರ್ಶನರು ತಮ್ಮ ಮೌನಮುದ್ರೆ ಒಡೆದು

" ನೋಡಿ ದಾದಾ ಸಾಹೇಬ್. ಶಾಮಲಾಬಾಯಿಯವರು ಈಗಾಗಲೇ ಸಾಕಷ್ಟು ಕೀರ್ತಿ, ಹಣ ಗಳಿಸಿಕೊಂಡಿದ್ದಾರೆ. ಕಲಾವಿದರು ಕೇವಲ ಹಣ ಕ್ಕಾಗಿಯೇ ಕೆಲಸ ಮಾಡತಕ್ಕವರಲ್ಲ. ದಕ್ಷಿಣದ ಫಿಲಂ ಮಾರ್ಕೆಟ್ ಬಹಳ ದೊಡ್ಡ ಮಾರ್ಕೆಟ್. ಅದನ್ನು ಕೈಗೆ ತೆಗೆದುಕೊಳ್ಳುವುದಕ್ಕೆ ಇದು ಸದವ ಕಾಶ. ಅಲ್ಲದೆ ಶಾಮಲಾಬಾಯಿ ಕನ್ನಡನಾಡಿನ ಹೆಣ್ಣುಮಗಳು. ತಮ್ಮ ದೇಶ, ಭಾಷೆಗೆ ಅವರು ಸೇವೆ ಸಲ್ಲಿಸಬೇಕಾದುದೂ ಅಗತ್ಯ."

" ಉಪವಾಸ ಮಾಡಿಕೊಂಡು ದೇಶಸೇವೆ ಮಾಡಿರೆನ್ನುವುದು ಯಾವ ನ್ಯಾಯ ? "

" ಉಪವಾಸದ ಮಾತನ್ನೇ ನಮ್ಮ ಸಾಹುಕಾರರು ಎತ್ತಲಿಲ್ಲವಲ್ಲ ! "

" ಫಿಲಂ ಕೆಲಸ ನಟನಟಿಯರಿಗೆ – ಅದರಲ್ಲಿಯೂ ನಟಿಯವರಿಗೆ – ಯಾವಜ್ಜೀವ ಪರ್ಯಂತ ನಡೆಯುವ ಕೆಲಸವಲ್ಲ. ಹೆಣ್ಣು ಮಕ್ಕಳು ಹತ್ತು ವರ್ಷ ಫಿಲಂ ಕೆಲಸ ಮಾಡಿದರೆ ಮುಗಿಯಿತು. ಆ ಕಾಲದಲ್ಲಿಯಾದರೂ ಅವರು ಹತ್ತು ಕಾಸು ಮಾಡಿಕೊಳ್ಳಬೇಡವೇ ?"

"ಬೇಡವೆಂದವರು ಯಾರು ? ನಮ್ಮ ದೇಶಕ್ಕೆ ಫಿಲಂ ವ್ಯವಸಾಯ ಹೊಸದು. ಇದರ ನಿಷ್ಕೃಷ್ಟ ಸ್ವರೂಪ ಇನ್ನೂ ನಮ್ಮ ಜನಕ್ಕೆ ಅರ್ಥವಾಗಿಲ್ಲ. ಈ ವ್ಯವಸಾಯ ಬೆಳೆಯುವುದಕ್ಕೆ ಕಲಾವಿದರು, ಸಾಹಿತಿಗಳು, ಬಂಡವಾಳ ಗಾರರು ಒಮ್ಮನಸ್ಸಿನಿಂದ ದುಡಿಯಬೇಕು. ಹೊಸ ಪ್ರಯತ್ನಗಳಿಗೆ ನೆರವು ನೀಡಬೇಕಾದುದು ಈಗಾಗಲೇ ಖ್ಯಾತಿ, ಧನ ಗಳಿಸಿರುವವರ ಕರ್ತವ್ಯ."

ಈ ಬಗೆಯ ವಾದ ವಿವಾದ ಎಲ್ಲಿಗೂ ಮುಟ್ಟದೆಂದು ಭಾವಿಸಿದ ಸಾಹು ಕಾರರು ಮೆಲ್ಲನೆ

" ಹೋಗಲಿ ? ಸುಮ್ಮನೆ ಚರ್ಚೆ ಮಾಡಿ ಏನು ಸಾರ್ಥಕ ? ಶಾಮಲಾ ಬಾಯಿಯವರು ಎಷ್ಟು ಹೇಳುತ್ತಾರೆ ಸಾರ್."

ಎಂದರು.

ದಾದಾ ಸಾಹೇಬ್ ತಮ್ಮ ಕನ್ನಡಕ ತೆಗೆದು ಕೈಯಲ್ಲಿ ಹಿಡಿದುಕೊಂಡು, ಕಿಸೆಯಿಂದ ಕರವಸ್ತ್ರ ತೆಗೆದು ಕನ್ನಡಕದ ಗಾಜುಗಳನ್ನು ಒರಸುತ್ತಾ

"ಅದನ್ನು ಸಾವಕಾಶವಾಗಿ ಮಾತನಾಡೋಣ. ಸಂಜೆ ನಿಮಗೆ ಎಷ್ಟು ಹೊತ್ತಿಗೆ ಪುರಸತ್ತು."

"ನಮಗೆ ಯಾವಾಗಲೂ ಪುರಸತ್ತೇ. ಇದೇ ಕೆಲಸಕ್ಕಾಗಿ ನಾವು ಬೊಂಬಾಯಿಗೆ ಬಂದಿದ್ದೇವೆ."

"ಸಂಜೆ ಆರಕ್ಕೆ ನಮ್ಮ ಮನೆಗೆ ಬನ್ನಿ. ಎಲ್ಲಾ ಮಾತನಾಡೋಣ."

ಎಂದು ಹೇಳಿ ಶಿವಾಜಿ ಪಾರ್ಕಿನಲ್ಲಿದ್ದ ತಮ್ಮ ಮನೆಯ ವಿಳಾಸ ಕೊಟ್ಟರು.

ಸಾಹುಕಾರರು, ಚಿನ್ನಪ್ಪ, ಸುದರ್ಶನರು ದಾದರ್‌ಕರ್ ಅಪ್ಪಣೆ ಪಡೆದು ಅಲ್ಲಿಂದ ಹೊರಟರು.

ದಾದಾಸಾಹೇಬರ ಜತೆ ನಡೆದ ಸಂಭಾಷಣೆ, ಅವರ ನಡತೆ ಸುದರ್ಶನರನ್ನು ಬೇಸರಗೊಳಿಸಿತ್ತು. ಮೂವರೂ ಮಾತನಾಡದೆ ನಡೆದಿದ್ದರು. 'ಇಂಡಿಯಾ ಕಾಫಿ ಬಾರ್' ಸಿಕ್ಕಲು ಚಿನ್ನಪ್ಪ

"ಕಾಫಿ ತಕ್ಕೊಳ್ಳೇನು ಸ್ವಾಮಿ"

ಎಂದ. ಸಾಹುಕಾರರೂ ಕಾಫಿಗಾಗಿ ಕಾತರಿಸುತ್ತಿದ್ದರು.

ಮೂವರೂ ಕಾಫಿ ಬಾರಿನಲ್ಲಿ ಕುಳಿತು ಟೋಸ್ಟ್, ಕಾಫಿಗೆ ಆರ್ಡರು ಮಾಡಿ 'ಚಿಪ್ಸ್' ಕುರಕುತ್ತ ಕುಳಿತರು.

ಸುದರ್ಶನರು ತಮ್ಮ ಬೇಸರದ ಕಾರಣವನ್ನು ಸೂಚಿಸುತ್ತಾ

"ಈಗಲೂ ಈ ಶಾಮಲಾಬಾಯಿಯನ್ನು ಬುಕ್ ಮಾಡುವ ಹವ್ಯಾಸ ಬಿಡುವುದು ಒಳ್ಳೆಯದು ಸಾಹುಕಾರರೇ. ಏನು ಆ ದಾದಾಸಾಹೇಬರ ಬಿಗುಮಾನ! ಇಲ್ಲಿಂದ ಬಂದು ನಮ್ಮನ್ನು ಉದ್ಧಾರಮಾಡುವ ಹಾಗೆ ಮಾತನಾಡುತ್ತಾರೆ. ಈ ಬಿಳಿ ಆನೆಗಳನ್ನು ಕಟ್ಟಿಕೊಂಡು, ಅವರು ಹೇಳಿದ ಹಾಗೆ ಕೇಳಿ ಅವರುದ್ದಕ್ಕೂ ಹಣ ಸುರಿಯುವುದಕ್ಕಿಂತ ನಮ್ಮವರ ಕೈಯಿಂದಲೇ ಕೆಲಸ ತೆಗೆದುಕೊಳ್ಳುವುದು ಒಳ್ಳೆಯದು."

"ನೀವು ಹೇಳುವುದು ಸರಿ—ಆದರೆ ಪಿಕ್ಚರ್‍ರಿಗೆ ಸ್ಟಾರ್ ಬೇಕಲ್ಲಾ ಸ್ವಾಮಿ."

"ರೊಟ್ಟಿ ಅಂಗಡಿಯಲ್ಲಿ ಬಿಸ್ಕತ್ತುಗಳು ಮಾಡಿದ ಹಾಗೆ ಚಿತ್ರ ಪ್ರಪಂಚದಲ್ಲಿ ಸ್ಟಾರ್‌ಗಳನ್ನು ನಿರ್ಮಾಣಮಾಡುತ್ತಾರೆ ಸಾಹುಕಾರರೇ. ನಾವು ಚಿತ್ರಕ್ಕೆ ಸುಮಾರು ೧॥ ಖರ್ಚು ಮಾಡುತ್ತೇವೆಯಲ್ಲವೇ—ಅದರಲ್ಲಿ ಶಾಮಲಾಬಾಯಿಯೇ ೨೫ ಸಾವಿರ ನುಂಗುತ್ತಾರೆ. ಇದೇ ಇಪ್ಪತ್ತೈದು ಸಾವಿರವನ್ನು ಪ್ರಸಾರಕ್ಕೆ (Publicity) ಖರ್ಚುಮಾಡಿ ನಮ್ಮಲ್ಲಿಯೇ ಯಾರನ್ನಾದರೂ

ಏಕೆ ಸ್ಟಾರ್ ಮಾಡಬಾರದು. ಅಂದು ಭೂಪೆನ್ ಬಾಬು ಟೀ ಪಾರ್ಟಿಯಲ್ಲಿ ಹಾಡಿದರಲ್ಲಾ ಅವರು ಏನಾಗಿದ್ದಾರೆ."

"ಹೆಸರು ಬೇಕು ಸ್ವಾಮಿ. ನಮ್ಮ ಜನ ಹೆಸರಿಗೆ ಮರುಳಾಗುತ್ತಾರೆ."

ಕಾಫಿ ಬಾರಿನ 'ಬಾಯ್' ಟೋಸ್ಟ್, ಕಾಫಿ ತಂದಿಟ್ಟ. ಅದೇ ಸಮಯಕ್ಕೆ ಹೊಟೇಲ್ ಪ್ರವೇಶಿಸಿದ ಸುರವಾಲ್, ಜುಬ್ಬ, ಚಡಾವು, ನೀಳ ಗೂದಲು ಧರಿಸಿದ ಒಬ್ಬ ವ್ಯಕ್ತಿಯನ್ನು ದಿಟ್ಟಿಸಿ ನೋಡುತ್ತ ಚಿನ್ನಪ್ಪ

"ಅವನನ್ನು ನೋಡಿ ಸ್ವಾಮಿ. ನಮ್ಮ ರಾಜಣ್ಣ ಇದ್ದ ಹಾಗಿಲ್ಲವೇ?"

ಎಂದ. ಹೊಸದಾಗಿ ಪ್ರವೇಶಿಸಿದ ವ್ಯಕ್ತಿಯೂ ಇವರನ್ನು ದಿಟ್ಟಿಸಿ ನೋಡುತ್ತ ಒಂದು ಮೇಜಿನ ಮುಂದೆ ಕುಳಿತ. ಚಿನ್ನಪ್ಪ ಧೈರ್ಯಮಾಡಿ ಕೊಂಡು ಅವನ ಟೇಬಲ್ ಬಳಿಗೆ ಹೋಗಿ ಮಾತನಾಡಿಸಿ ಜತೆಯಲ್ಲಿ ಕರೆದು ಕೊಂಡೇ ಬಂದ.

"ಹೌದು ಸ್ವಾಮಿ. ರಾಜಣ್ಣನೇ!"

ಸಾಹುಕಾರರು ರಾಜಣ್ಣನ ರೂಪ ಅಲಂಕಾರ ನೋಡಿ ಆಶ್ಚರ್ಯ ವ್ಯಕ್ತಗೊಳಿಸುತ್ತಾ

"ಇದೇನು ರಾಜಣ್ಣ ಇಲ್ಲಿದ್ದೀ?" ಎಂದರು.

ಪಕ್ಕದಲ್ಲಿದ್ದ ಕುರ್ಚಿ ಎಳೆದುಕೊಂಡು ರಾಜಣ್ಣನೂ ಕುಳಿತ. ಅವನಿಗೂ ಟೋಸ್ಟ್, ಕಾಫಿ ತರಲು ಚಿನ್ನಪ್ಪ ಆರ್ಡರ್ ಮಾಡಿದ.

"ಕಂಪೆನಿ ಬಿಟ್ಟ ಮೇಲೆ ನಾನು ಇಲ್ಲೇ ಇದ್ದೇನೆ ಸ್ವಾಮಿ."

"ನೀನು ಬೊಂಬಾಯಿಗೆ ಹೋದೆ ಎಂದು ಯಾರೋ ಹೇಳಿದರು. ಇಲ್ಲಿ ಏನು ಮಾಡುತ್ತಿದ್ದೀ?"

"ಹಾಫೀಸ್ ಚಿತ್ರ ಕಂಪೆನಿಯಲ್ಲಿ ನಟನಾಗಿದ್ದೇನೆ."

"ಚೆಂದಾಗಿ ನಡೆದೈತೋ"?

"ಎಲ್ಲಿ ಸ್ವಾಮಿ? ಈ ಜನ ಹೊರಗಿನವರಿಗೆ ಅವಕಾಶ ಕೊಡುವುದಿಲ್ಲ. ಇನ್ನೂ ಸಣ್ಣ ಪುಟ್ಟ ಪಾರ್ಟುಗಳಲ್ಲಿಯೇ ಇದ್ದೇನೆ. ನಿವೇನು ಸ್ವಾಮಿ ಇಲ್ಲಿ ಬಂದಿರುವುದು?"

"ಹೀಗೇ ಸ್ವಲ್ಪ ಕೆಲಸದ ಮೇಲೆ ಬಂದಿದ್ದೆ."

ರಾಜಣ್ಣನಿಗೂ ಟೋಸ್ಟ್, ಕಾಫಿ ಬಂದಿತು. ಎಲ್ಲರೂ ಉಪಾಹಾರ ಮುಗಿಸಿದ ಮೇಲೆ

"ಎಲ್ಲಿದ್ದೀರಿ ಸ್ವಾಮಿ" ಎಂದು ರಾಜಣ್ಣ ಕೇಳಿದ.

"ಪುರಸತ್ತಿದ್ದರೆ ಹೊಟೇಲ್ ತನಕ ಬಂದು ಹೋಗು"

ಎಂದು ಚಿನ್ನಪ್ಪ ಹೇಳಿದ.

ರಾಜಣ್ಣನನ್ನು ಕರೆದುಕೊಂಡು ಎಲ್ಲರೂ 'ಎಂಪೈರ್ ಹೊಟೇಲಿ'ನಲ್ಲಿ ಬಂದು ಕುಳಿತರು.

ಚಿನ್ನಪ್ಪ ರಾಜಣ್ಣನನ್ನು ಕೆಣಕಿ ಮುಂಬಯಿ ಫಿಲ್ಮ್ ಪ್ರಪಂಚವನ್ನು ಅವನು ವಿಶದವಾಗಿ ವರ್ಣಿಸುವಂತೆ ಮಾಡಿದ. ಮಾತಿನ ಸಂದರ್ಭದಲ್ಲಿ ಮೆಲ್ಲನೆ

"ಶಾಮಲಾಬಾಯಿ ನಿಪ್ಪಾಣಿಕರ್ ಎಂತಾ ಒಬ್ಬ ಆರ್ಟಿಸ್ಟ್ ಇದ್ದಾಳಲ್ಲಾ ಅವಳ ವಿಷಯ ಹೇಗೆ ರಾಜಣ್ಣ"

ಎಂದು ಕೇಳಿದ.

ರಾಜಣ್ಣ ಮುಗುಳ್ನಗೆ ನಗುತ್ತಾ

"ಕಾಲ ಹೇಗಿದೆ ನೋಡಿ ಸ್ವಾಮಿ. ಶಾಮಲಾಬಾಯ್ ಇವತ್ತು ದೊಡ್ಡ ಸ್ಟಾರ್. ಒಟ್ಟೊಟ್ಟಿಗೆ ಮೂರು ಮೂರು ಚಿತ್ರಗಳಲ್ಲಿ ಅವಳು ಪಾರ್ಟು ಮಾಡುತ್ತಾಳೆ. ಒಂದೊಂದು ಪಿಕ್ಚರಿಗೆ ಅವಳಿಗೆ ೨೦, ೩೦, ೪೦ ಸಾವಿರ ರೂಪಾಯಿ ಕಾಂಟ್ರ್ಯಾಕ್ಟ್."

"ಅವಳಿಗೆ ಕನ್ನಡ ಚೆನ್ನಾಗಿ ಬರುತ್ತದಂತಲ್ಲಾ ರಾಜಣ್ಣ?"

"ಬರದೇ ಏನು ಚಿನ್ನಪ್ಪ. ಹುಟ್ಟಿ ಬೆಳೆದದ್ದು ಎಲ್ಲಾ ಬೆಳಗಾಂವಿಯಲ್ಲಿ"

"ಅವಳ ವಿಷಯವೇನು ಹೇಳು ರಾಜಣ್ಣ."

"ಅವಳ ಹೆಸರು ಶಾಮಲಾಬಾಯಿಯಲ್ಲ—ಗಂಗವ್ವ. ಅವಳ ತಾಯಿಯ ಊರು ನಿಪ್ಪಾಣಿ. ತಾಯಿ ಕಾಲಕ್ಕೇ ಬೆಳಗಾಂವಿಗೆ ಬಂದು ನಿಂತರು. ಅಲ್ಲಿ ತಾಯಿ ಸೂಳೆಗಾರಿಕೆ ಮಾಡಿಕೊಂಡು ಹೊಟ್ಟೆ ಹೊರೆಯುತ್ತಿದ್ದಳು. ತಾಯಿ ನಾಲ್ಕು ಕಾಸೂ ಮಾಡಿಕೊಂಡಳು ಮಗಳಿಗೆ ಸ್ವಲ್ಪ ಸಂಗೀತ ಹೇಳಿಸಿದಳು. ಗಂಗವ್ವ ವಯಸ್ಸಿಗೆ ಬಂದ ಮೇಲೆ 'ಗೋಕಾಕ ಕಂಪೆನಿಗೆ' ಸೇರಿ ಪಾರ್ಟು ಮಾಡುತ್ತಿದ್ದಳು. ಆ ಕಂಪೆನಿ ಒಡೆದುಹೋದ ಮೇಲೆ ಮಹಾಲಿಂಗಪುರದ ಕಂಪೆನಿಯೊಂದರಲ್ಲಿ ನಟಿಯಾಗಿದ್ದಳು. ಮಹಾಲಿಂಗಪುರದ ಕಂಪೆನಿ ಬೆಳಗಾಂವಿಯಲ್ಲಿ ಕ್ಯಾಂಪು ಹಾಕಿದರು. ಅದೇ ಕಾಲಕ್ಕೆ ಬೆಳಗಾಂವಿಗೆ ಗ್ರಾಮಫೋನ್ ರಿಕಾರ್ಡಿಂಗಿಗೆ ಬಂದಿದ್ದ 'ಮೈವಾಯ್ಸ್' ಕಂಪೆನಿಯ ಒಬ್ಬ ನೌಕರನಿಗೂ ಗಂಗವ್ವನಿಗೂ ಪರಿಚಯವಾಯಿತು – ಸ್ನೇಹವಾಯಿತು. ಅವನ ಜತೆ ಗಂಗವ್ವ, ಗಂಗವ್ವನ ತಾಯಿ ಮುಂಬಯಿ ಸೇರಿದರು. ಗಂಗವ್ವನ ಸ್ನೇಹಿತ ಅವಳಿಗೆ ಮುಂಬಯಿಯಲ್ಲಿ ಒಂದು ಮರಾಟಿ ಚಿತ್ರದಲ್ಲಿ ಅವಕಾಶ ಮಾಡಿಕೊಟ್ಟ. ಹಾಗೆ ಕ್ರಮೇಣ ಡೈರೆಕ್ಟರುಗಳ, ಪ್ರೊಡ್ಯೂಸರುಗಳ ಮರ್ಜಿ

ಹಿಡಿದು ಅವಳು ಮೇಲಕ್ಕೆ ಬಂದಿದ್ದಾಳೆ. ಇಂದು ನಮ್ಮ ಬೆಳಗಾಂವಿ ಗಂಗವ್ವ – ಮುಂಬಯಿಯ ಪ್ರಸಿದ್ಧ ಸಿನೀಮಾ ತಾರೆ ಶಾಮಲಾಬಾಯ್ ! "

" ನೀನು ಅವಳನ್ನು ಬಲ್ಲೆಯಾ ? "

" ಚೆನ್ನಾಗಿ ಬಲ್ಲೆ. ಅವಳ ಜತೆ ಒಂದೆರಡು ಸ್ಟಂಟ್ ಚಿತ್ರಗಳಲ್ಲಿ ಅಭಿನಯವನ್ನೂ ಮಾಡಿದ್ದೇನೆ. "

" ಅವಳ ತಾಯಿ, ಆ ಸ್ನೇಹಿತ ಏನಾದರು ಹೇಳಲೇ ಇಲ್ಲವಲ್ಲಾ

" ತಾಯಿ ಸತ್ತಳು ; ಸ್ನೇಹಿತನ ಕೈ ಇವಳೇ ಬಿಟ್ಟಳು.? "

" ಈ ದಾದಾ ಸಾಹೇಬ್ ಯಾರು ? "

" ಅದೊಂದು ದೊಡ್ಡ ಕಥೆ ಚೆನ್ನಪ್ಪ – ಹಾಳಾಗಿ ಹೋಗಲಿ ಬಿಡು. "

" ಇರಲಿ – ಹೇಳಯ್ಯಾ."

" ದಾದಾ ಸಾಹೇಬನದು ದಾದರಿನಲ್ಲಿ ಒಂದು ಬೆಳ್ಳಿ ಅಂಗಡಿಯಿದೆ. ಅದಕ್ಕೆ ಅವನೂ ಫಡ್ನೀಸ್ ಇಬ್ಬರೂ ಪಾಲುಗಾರರು. ಮುಂಬಯಿಗೆ ಬಂದ ಕೆಲವು ದಿನ ಗಂಗವ್ವ ದಾದರಿನಲ್ಲಿಯೇ ಇರುತ್ತಿದ್ದಳು. ಅವಳು ಹೋಗಿ ಬರುವುದನ್ನು ದಾದಾ ನೋಡುತ್ತಿದ್ದ. ಒಂದು ದಿನ ಅವಳು ಅಂಗಡಿಯೊಳಗೇ ಬಂದು ಕೆಲವು ಬೆಳ್ಳಿಯ ಲೋಟಾಗಳನ್ನು ವ್ಯಾಪಾರ ಮಾಡಿದಳು. ದಾದಾ ಅವಳ ಪರಿಚಯ ಬೆಳಸಿದ. ಈ ವೇಳೆಗೆ ದಾದನಿಗೆ ಹೆಂಡತಿ, ನಾಲ್ಕು ಮಕ್ಕಳು ಇದ್ದರೆಂಬುದನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ. ದಾದನ ಜತೆ ಓಡಾಟ ಬಲವಾಯಿತು. ದಾದನೂ ಗಂಗವ್ವನ ಮನೆಗೆ ಹೋಗಿ ಬರುವುದಕ್ಕಾರಂಭಿಸಿದ. ಒಂದು ದಿನ ದಾದನಿಗೂ, ಮೊದಲಿನ ಸ್ನೇಹಿತನಿಗೂ ಗಂಗವ್ವನ ಮನೆಯಲ್ಲಿ ಮೊಕಾಬಿಲೆಯಾಗಿ ಹಣಾಹಣಿ ಜಗಳವಾಯಿತು. ಮೊದಲ ಸ್ನೇಹಿತ –ಮರ್ಯಾಧಸ್ಥ, ಹಾಳಾಗಿ ಹೋಗಲಿ ಎಂದು ಕೈಬಿಟ್ಟ. ಗಂಗವ್ವ ದಾದನನ್ನೇ ಬಲವಾಗಿ ಹಿಡಿದುಕೊಂಡಳು. 'ನಿನ್ನಿಂದ ನನ್ನ ಸ್ನೇಹಿತ ನನ್ನ ಕೈಬಿಟ್ಟ. ನನ್ನ ಮದುವೆಯಾಗು' ಎಂದು ಹಟ ಹಿಡಿದು ಕೊನೆಗೆ ಮದುವೆಯೂ ಆದಳು."

" ದಾದನ ಹೆಂಡತಿ ಮಕ್ಕಳ ಗತಿ ? "

" ದೇವರೇ ಗತಿ ! ಅವರನ್ನು ಪುಣೆಗೆ ತೌರುಮನೆಗೆ ದಾದ ಕಳಿಸಿಬಿಟ್ಟ. ಇಲ್ಲಿ ಇವಳ ಜತೆ ಕಾಲಹಾಕುತ್ತಿದ್ದಾನೆ. ಶಾಮಲಾಬಾಯಿಗೆ ದಾದನೇ ಸೆಕ್ರೆಟರಿ, ಮ್ಯಾನೇಜರ್, ಆಳು. ಅವಳು ಹೇಳಿದ್ದು ಮಾಡುತ್ತಾನೆ. ಹಗಲೂ ರಾತ್ರಿಯೆನ್ನದೆ ಅವಳ ಜತೆ ಸ್ಟೂಡಿಯೋಗಳಲ್ಲಿ ಕಾಲ ಹಾಕುತ್ತಾನೆ. ಮುಂಬಯಿಯಲ್ಲಿ 'ದಾದ' ಎನ್ನುವುದು ಹಾಸ್ಯದ ಮಾತಾಗಿ ಪರಿಣಮಿಸಿದೆ.

ಪುಣ್ಯಾತ್ಮನ ಮೈ ಚರ್ಮ ಬಹಳ ದಪ್ಪ. ಯಾರು ಎಷ್ಟು ಲೇವಡಿ ಮಾಡಿದರೂ ಅವನು ಮೈಗಂಟಿಸಿಕೊಳ್ಳುವುದೇ ಇಲ್ಲ."

"ಹೋಗಲಿ ರಾಜಣ್ಣ. ಅವಳಾದರೂ ಸರಿಯಾಗಿರುತ್ತಾಳೋ? ತನ್ನ ಕೆಲಸ ತಾನು ಸರಿಯಾಗಿ ಮಾಡಿಕೊಂಡು ಹೋಗುತ್ತಾಳೋ?"

"ಮನಸ್ಸು ಬಂದರೆ ಮಾಡಿಕೊಂಡು ಹೋಗುತ್ತಾಳೆ. ಬೇಡವಾದರೆ ಮೇಕಪ್ ಆಗಿದ್ದರೂ ಮನೆಗೆ ಹೊರಟು ಹೋಗುತ್ತಾಳೆ."

ರಾಜಣ್ಣನ ವಿವರಣೆ ಕೇಳಿ ಚಿನ್ನಪ್ಪನ ಉತ್ಸಾಹ ಅರ್ಧ ಇಳಿದು ಹೋಯಿತು. ರಾಜಣ್ಣ ಹೋದ ಮೇಲೆ ಸಾಹುಕಾರರ ಕಡೆ ತಿರುಗಿ

"ದಾದಾ ಸಾಹೇಬ್ ಮನೆಗೆ ಹೋಗಿ ಬರೋಣವೇ ಸ್ವಾಮಿ" ಎಂದ.

"ನಡಿ ಚಿನ್ನಪ್ಪ ಹೋಗಿ ಬರೋಣ."

"ರಾಜಣ್ಣ ಹೇಳಿದ್ದು ನೀವೇ ಕೇಳಿದಿರಿ."

"ಅವಳ ಸಂಸಾರ ಕಟ್ಕೊಂಡು ನಮ್ಗೇನಯ್ಯ ಆಗ್ಬೇಕು."

ಚಿನ್ನಪ್ಪ ಒಂದು ಟ್ಯಾಕ್ಸಿ ಗೊತ್ತು ಮಾಡಿದ.

'ಶಿವಾಜಿ ಪಾರ್ಕ್'ನಲ್ಲಿ ದಾದಾ ಸಾಹೇಬನ ಮನೆ ಕಂಡು ಹಿಡಿಯುವುದು ಸ್ವಲ್ಪ ಪ್ರಯಾಸವೇ ಆಯಿತು. ಟ್ಯಾಕ್ಸಿ ಡ್ರೈವರ್ ಹುಡುಕಿ ಪತ್ತೆ ಮಾಡಿದ.

ದಾದಾ ಸಾಹೇಬನ ಬೈಠಕ್ ಖಾನೆಯಲ್ಲಿ ಎಲ್ಲರೂ ಕುಳಿತರು. ಗೋಡೆಗಳ ಮೇಲೆ ಶಾಮಲಾಬಾಯಿ ಅಭಿನಯಿಸಿದ ಕೆಲವು ಚಿತ್ರಗಳ ಫೋಟೋಗಳಿದ್ದವು.

ದಾದಾ ಸಾಹೇಬ್ ಬಂದು ಮಾತಿಗೆ ಕುಳಿತುಕೊಂಡ.

ಲೋಕಾಭಿರಾಮದ ಮಾತು ಸಾಗಿತೇ ವಿನಾ ದಾದಾ ಮುಖ್ಯ ವಿಷಯಕ್ಕೇ ಬರಲಿಲ್ಲ. ಸಾಹುಕಾರರು ಹುಬ್ಬುಗಂಟು ಹಾಕಿಕೊಂಡು

"ಚಿನ್ನಪ್ಪ, ಹೊತ್ತಾಗ್ತಾ ಬಂತು. ಬಂದಿರೋ ವಿಷಯ ಮಾತಾಡಿ ಮುಗಿಸು."

ಎಂದರು. ಚಿನ್ನಪ್ಪ ಸ್ಪಷ್ಟವಾಗಿ

"ದಾದಾ ಸಾಹೇಬ್, ನಿಮ್ಮ ಟರ್ಮ್ಸ್ ಏನು ಹೇಳಿಬಿಡಿ."

"ಅದನ್ನು ನೀವು ಹೇಳಬೇಕು. ನಾನು ಹೇಗೆ ಹೇಳಲು ಸಾಧ್ಯ?"

"ನಿಮಗೆ ಹತ್ತಾರು ಪಿಕ್ಚರುಗಳ ಕಾಂಟ್ರ್ಯಾಕ್ಟ್ ಮಾಡಿಕೊಂಡ ಅಭ್ಯಾಸವಿದೆ. ನೀವೇ ಹೇಳಬೇಕು."

"ನಾವು ಮದರಾಸಿಗೆ ಬರಬೇಕಾದರೆ ಇಲ್ಲಿನ ಕಾಂಟ್ರ್ಯಾಕ್ಟ್‌ಗಳನ್ನೆಲ್ಲಾ ಬಿಟ್ಟುಕೊಟ್ಟು ಬರಬೇಕು."

" ಅದನ್ನೆಲ್ಲಾ ಮಧ್ಯಾಹ್ನವೇ ಹೇಳಿ ಪೂರೈಸಿದ್ದೀರಲ್ಲಾ ದಾದಾ ಸಾಹೇಬ್. ನಮ್ಮ ಚಿತ್ರದಲ್ಲಿ ಕೆಲಸಮಾಡುವುದಕ್ಕೆ ಎಷ್ಟು ಕೊಡಬೇಕು ಹೇಳಿ."

" ಎಷ್ಟು ತಿಂಗಳ ಕೆಲಸ."

" ಆರು ತಿಂಗಳು."

" ಆರು ತಿಂಗಳಿಗಿಂತ ಹೆಚ್ಚಾದರೆ ಪ್ರೋರೇಟಾ (Pro Rata) ಕೊಡಬೇಕಾಗುತ್ತದೆ. ಎಲ್ಲರ ಜತೆಯಲ್ಲಿಯೂ ನಾವು ಕಾಂಟ್ರ್ಯಾಕ್ಟ್ ಮಾಡಿಕೊಳ್ಳುವುದು ಹಾಗೆಯೇ ? "

" ಸರಿ. ಆರು ತಿಂಗಳಿಗೆಷ್ಟು ಕೊಡಬೇಕು ಹೇಳಿ."

" ಐವತ್ತು ಸಾವಿರ ರೂಪಾಯಿ ಕೊಡಬೇಕಾಗುತ್ತದೆ."

ಸಾಹುಕಾರರ ಎದೆಯೇ ನಿಂತುಹೋಗುವಂತಾಯಿತು, ಚಿನ್ನಪ್ಪ ಚಕಿತನಾದ. ಸುದರ್ಶನರು ಮಾತ್ರ ಮುಗುಳ್ನಗೆ ನಕ್ಕರು.

ಸುದರ್ಶನರ ವ್ಯಂಗ್ಯನಗೆ ಕಂಡು ದಾದಾ ಸಾಹೇಬ್

" ಏಕೆ ? ನಾನು ಕೇಳಿದ್ದು ಹೆಚ್ಚಾಯಿತೇ ? "

" ಛೆ ! ಛೆ ! ಎಲ್ಲಿಯಾದರೂ ಉಂಟೇ ? ಹಾಲಿವುಡ್ಡಿನಲ್ಲಿ ರೀಟಾ ಹೇವರ್ತ್ತಿಗೆ, ಗ್ರೀಯರ್ ಗಾಯರ್ಸನ್ನಿಗೆ ದಿನಕ್ಕೆ ಐವತ್ತು ಸಾವಿರ ಕೊಡುವಾಗ ನೀವು ಕೇಳಿದ್ದು ಹೆಚ್ಚು ಎಂದು ಹೇಳಲು ಹೇಗೆ ಸಾಧ್ಯ ? "

"ಸುಮ್ಮನೆ ಚೌಕಾಸಿ ಬೇಡಿ ಸ್ವಾಮಿ. ಖಂಡಿತವಾಗಿ ಎಷ್ಟುಕೊಡಬೇಕು ಹೇಳಿಬಿಡಿ. ಏನೋ ವಿಶ್ವಾಸವಿಟ್ಟುಕೊಂಡು ನಾವು ಅಲ್ಲಿಂದ ಬಂದಿದ್ದೇವೆ. ನಮ್ಮನ್ನು ನಿರಾಶೆಗೊಳಿಸಿ ಕಳಿಸುವುದು ದೊಡ್ಡ ವಿಷಯವಲ್ಲ"

ಎಂದು ಚಿನ್ನಪ್ಪ ಹೇಳಿದ. ದಾದಾ ದೇಶಾವರದ ನಗೆ ಬೀರುತ್ತ

" ಪಿಕ್ಚರ್ ಮಾಡುವುದಕ್ಕೆ ನೀವು ಲಕ್ಷಾಂತರ ರೂಪಾಯಿ ಖರ್ಚು ಮಾಡುವಾಗ ನಿಮ್ಮ ಮುಖ್ಯವಾದ ಸ್ಟಾರಿಗೆ ಐವತ್ತು ಸಾವಿರ ಕೊಡುವುದು ಹೆಚ್ಚೇ ? "

" ಹೆಚ್ಚು ಎಂದು ನಾವು ಹೇಳಲಿಲ್ಲ. ನಮ್ಮ ಸ್ಥಿತಿಗತಿ, ಕಷ್ಟನಷ್ಟಗಳನ್ನು ನೀವೂ ಗಮನಿಸಬೇಕು."

ದಾದಾ ಯೋಚಿಸಿ

" ಐದು ಸಾವಿರ ಕಡಿಮೆ ಮಾಡಬಹುದು. ಅದಕ್ಕಿಂತ ಕಡಿಮೆಗೆ ಕೆಲಸ ಮಾಡಲು

ಎಂದು ಹೇಳಿದ.

ಸಾಹುಕಾರರೂ, ಚಿನ್ನಪ್ಪ, ಸುದರ್ಶನರು ಪೆಚ್ಚುಮೋರೆ ಹಾಕಿಕೊಂಡರು. ದಾದಾ ಅವರ ಕಳವಳ ನೋಡಿ

" ಈಗಲೇ ನೀವು ನಿರ್ಧರಿಸಬೇಡಿ. ನಾಳೆ ಬೇಕಾದರೆ ನಾನೇ ಬಂದು ಕಾಣುತ್ತೇನೆ. ನಾಳೆ ನಿರ್ಧರಿಸಿ ಹೇಳಿ."

ಎಂದ.

ಹೊಟೇಲ್ ರೂಮಿಗೆ ಬಂದು ಕುಳಿತ ಮೇಲೆ ಚಿನ್ನಪ್ಪ ಮುಖ ಕೆಂಪಗೆ ಮಾಡಿಕೊಂಡು

" ಏನು ವ್ಯವಹಾರ ಇದು ಸ್ವಾಮಿ. ಎಲ್ಲಾ ಮಾತೂ ದಾದಾ ಮುಗಿಸಿದನೇ ವಿನಾ ಆ ರಂಭೆ ಮುಖದರ್ಶನ ಕೂಡ ಮಾಡಿಸಲಿಲ್ಲ."

" ಒಂದು ಕಪ್ ಟೀ ತೊಗೊಳ್ಳಿ ಎಂದು ಹೇಳೋಕೆ ಅವನ್ಗೆ ಬಾಯಿ ಬರಲಿಲ್ಲ ನೋಡು ಚಿನ್ನಪ್ಪ "

ಎಂದು ಸಾಹುಕಾರರು ಗೊಣಗುಟಿದ್ದರು. ಸುದರ್ಶನರು

" ನನ್ನ ಮಾತು ಸ್ವಲ್ಪ ತೊಗೊಳ್ಳಿ ಸಾಹುಕಾರರೇ. ಈಗಲೂ ಈ ಸ್ಟಾರ್ ಹಂಬಲ ಬಿಟ್ಟುಬಿಡಿ. ಇವೆಲ್ಲಾ ಬಿಳಿಯಾನೆಗಳು. ಆರಂಭದಲ್ಲಿಯೇ ಇವರಿಂದ ಇಷ್ಟು ಕಿರುಕುಳವಾದರೆ ಮುಂದೆ ನಾವು ಏನು ಅನುಭವಿಸಬೇಕಾಗುತ್ತದೆಂಬುದನ್ನು ಯೋಚನೆ ಮಾಡಿ."

ಎಂದರು. ಸಾಹುಕಾರರು

" ನಾಳೆ ಮಾನಿಕ್ ದಾದರ್‌ಕರ್ ಅವರನ್ನು ಒಂದು ಮಾತು ಕೇಳಿ ನಿರ್ಧರಿಸೋಣ. ಬಂದ ಕೆಲ್ಸ ಆಗ್ಮಾಡಿಕೊಳ್ದೆ ಹಿಂದಕ್ಕೆ ಓಗೋದಿಕ್ಕೆ ನಂಗ್ಯಾಕೋ ಮನಸ್ಸುಬಾರದು."

ಎಂದು ಸ್ಪಷ್ಟವಾಗಿ ನುಡಿದುಬಿಟ್ಟರು.

ಮಾರನೆಯ ಬೆಳಿಗ್ಗೆ ಮಾನಿಕ್ ದಾದರ್‌ಕರ್ ಅವರನ್ನು ಕಂಡು ದಾದನ ಟರ್ಮಿನ ಬಗ್ಗೆ ಅವರ ಸಲಹೆ ಕೇಳಿದಾಗ

" ನೋಡಿ ಸಾಹುಕಾರ್‌ಜೀ. ನಾನೂ ದಾದಾ ತುಂಬ ಸ್ನೇಹಿತರು. ಆದರೆ ನಾವು ಒಬ್ಬರ ವ್ಯವಹಾರದೊಳಗೆ ಒಬ್ಬರು ಪ್ರವೇಶಿಸುವುದಿಲ್ಲ. ದಾದನ ಪರಿಚಯ ಮಾಡಿಕೊಡುವ ಕೆಲಸ ನಾನು ಮಾಡಿದ್ದೇನೆ. ಉಳಿದದ್ದನ್ನು ನೀವೇ ಇತ್ಯರ್ಥ ಮಾಡಿಕೊಳ್ಳಬೇಕು. ನನಗೆ ತಿಳಿದಿರುವ ಮಟ್ಟಿಗೆ ದಾದ ಹಣದ ವಿಷಯದಲ್ಲಿ ತುಂಬ ಕಡಕು ಆಸಾಮಿ. ಶಾಮಲಾಬಾಯಿಯ ನೆರವು ನಿಮಗೆ ಬೇಕಾದರೆ ಅವರ ಟರ್ಮಿಗೆ ಒಪ್ಪದೆ ಸಾಧ್ಯವಿಲ್ಲವೆಂದು ನನಗೆ

ತ್ತೋರುತ್ತದೆ. ನಿಮಗೆ ಹೇಗೆ ಸೂಕ್ತತೋರುತ್ತದೋ ಹಾಗೆ ಮಾಡಬಹುದು."

ಮಧ್ಯಾಹ್ನ ಹೊಟೇಲಿಗೆ ಬಂದು ದಾದನ ಜತೆ ಮತ್ತೆ ವ್ಯವಹಾರದ ಮಾತುಕತೆಯಾಯಿತು. ದಾದಾ ಕೊನೆಗೆ ನಲವತ್ತು ಸಾವಿರಕ್ಕಾದರೆ ಒಪ್ಪಿಕೊಳ್ಳುತ್ತೇನೆಂದ.

ಸಾಹುಕಾರರ ಬುದ್ಧಿ ಇದ್ದಕ್ಕಿದ್ದಂತೆ ಬಹಳ ಚುರುಕಾಯಿತು. ಶಾಮಲಾಬಾಯಿ ಎಷ್ಟಾದರೂ ಕನ್ನಡ ದೇಶದವಳು. ಅವಳನ್ನೇ ಕಂಡು ಮಾತನಾಡಿದರೆ ವ್ಯಾಪಾರ ಗಿಟ್ಟಬಹುದೆಂದು ಭಾವಿಸಿಕೊಂಡ,

" ದಾದಾ ಸಾಹೇಬ್, ಎಲ್ಲಾ ಮಾತೂ ನೀವೇ ಆಡ್ತಿರುವಿರಲ್ಲಾ. ಶಾಮಲಾಬಾಯಿಯವರ ಅಭಿಪ್ರಾಯ ಕೇಳಬ್ಯಾಡ್ವಾ ? "

" ಅವರ ಅಭಿಪ್ರಾಯವನ್ನೇ ನಾನು ನಿಮ್ಮಲ್ಲಿ ಹೇಳುತ್ತಿರುವುದು."

" ನಾವು ಅವರನ್ನು ನೋಡಿ ಮಾತಾಡಿದ ಮ್ಯಾಕೆ ಈ ವಿಷಯ ಇತ್ಯರ್ಥವಾಗೋದೂಂತ ನನಗನಿಸುತ್ತದೆ."

" ಆಗಬಹುದು. ಸಂಜೆಗೆ ಬನ್ನಿ – ಅವರ ಜತೆಯೇ ಮಾತನಾಡಿ."

ಸಾಹುಕಾರರ ಮನಸ್ಸಿನಲ್ಲಿ ಆಶಾಂಕುರವಾಯಿತು. ತಮ್ಮ ವ್ಯವಹಾರ ನೈಪುಣ್ಯದಿಂದ ಶಾಮಲಾಬಾಯಿಯ ವಿಶ್ವಾಸ ದೊರಕಿಸಿಕೊಂಡು, ಆದಷ್ಟು ಸುಲಭ ಬೆಲೆಗೆ ಆಕೆಯನ್ನು ಗೊತ್ತುಮಾಡಿಕೊಳ್ಳಬಹುದೆಂದು ಭಾವಿಸಿದರು.

ಸಂಜೆ ದಾದಾ ಮನೆಯ ಹೊರಗೆ ಕಾದಿದ್ದು ಅತಿಥಿಗಳನ್ನು ಒಳಗೆ ಕರೆದೊಯ್ದ. ಅರ್ಧಗಂಟೆ ಕಳೆಯಿತು. ಶಾಮಲಾಬಾಯಿಯ ಸುಳಿವಿಲ್ಲ. ಚಿನ್ನಪ್ಪ ಕೇಳಿಯೇ ಬಿಟ್ಟ

" ಶಾಮಲಾಬಾಯಿಯವರು ಮನೆಯಲ್ಲಿಲ್ಲವೇ ? "

" ಇದ್ದಾರೆ. ಇದೇ ಬರುತ್ತಾರೆ. "

ಎಂದು ದಾದಾ ಎದ್ದು ಹೋಗಿ ಬಾಯಿಯವರಿಗೆ ತಿಳಿಸಿ ಬಂದ.

ಸ್ವಲ್ಪಹೊತ್ತು ಕಳೆದ ಮೇಲೆ ಬಾಯಿಯವರು, ದಯೆಮಾಡಿಸಿ ದಿವಾನಖಾನೆಯ ಸೋಫಾದ ಮೇಲೆ ಕುಳಿತರು.

ಬಾಯಿಯನ್ನು ನೋಡಿದ ಕೂಡಲೆ ಸಾಹುಕಾರರು, ಚಿನ್ನಪ್ಪನ ಉತ್ಸಾಹ ಕುಸಿದುಬಿತ್ತು. ಶಾಮಲಾಬಾಯಿ ಚಿತ್ರಗಳಲ್ಲಿ ಕಾಣುವ ಹಾಗೆ ತೆಳ್ಳಗೆ ಬೆಳ್ಳಗೆ, ನಸುಗೋಮಲೆಯಾಗಿ ಸದಾ ಹಸನ್ಮುಖಿಯಾಗಿರುತ್ತಾಳೆಂದು ಸಾಹುಕಾರರು ಚಿತ್ರಿಸಿಕೊಂಡಿದ್ದರು. ಬಾಯಿಗೆ ಸ್ವಲ್ಪ ಮೈ ಬಂದಿದ್ದುದು ಮಾತ್ರವಲ್ಲದೆ ಅವರ ವರ್ಣ ಅಚ್ಚ ಶಾಮಲವರ್ಣವಾಗಿತ್ತು.

ದಾದಾ ಎಲ್ಲರ ಪರಿಚಯವನ್ನೂ ಬಾಯಿಯವರಿಗೆ ಮಾಡಿಕೊಟ್ಟ ಮೇಲೆ ಸಾಹುಕಾರರು ಅವರನ್ನು ಉದ್ದೇಶಿಸಿ

" ನೀವು ದೊಡ್ಮನಸ್ಮಾಡಿ ನಮ್ಮ ಚಿತ್ರದಲ್ಲಿ ಪಾಲ್ಟುಮಾಡೋಕೆ ಒಪ್ಪಿಕೊಳ್ಳಬೇಕವ್ವ."

ಎಂದರು. ಚಿನ್ನಪ್ಪ ಸಾಹುಕಾರರ ಮನವಿಯನ್ನು ವಿಸ್ತರಿಸುತ್ತಾ

" ದಾದಾ ಸಾಹೇಬರು ಎಲ್ಲಾ ಹೇಳಿರಬಹುದು. ನಮ್ಮದು ಬಡ ಕಂಪೆನಿ. ನಿಮಗೆ ಮುಂಬಯಿಯ ಪ್ರೊಡ್ಯೂಸರ್ಸ್ ಕೊಡುತ್ತಿರುವ ಹಣ ನಾವು ಕೊಡಲು ಸಾಧ್ಯವಿಲ್ಲ. ಇದೊಂದು ಚಿತ್ರಕ್ಕೆ ನೀವು ರಿಯಾಯಿತಿ ತೋರಿಸಿದರೆ ಮುಂದಿನ ಚಿತ್ರದಲ್ಲಿ ನಿಮ್ಮ ಇಚ್ಛೆಯಂತೆ ಕೊಡಲಾಗುತ್ತದೆ. "

ಎಂದು ಹೇಳಿದ. ಶಾಮಲಾಬಾಯಿ ಅವರಿಬ್ಬರಿಗೂ ಉತ್ತರಕೊಡುವ ಗೋಜಿಗೇ ಹೋಗಲಿಲ್ಲ. ಗಂಡನ ಕಡೆ ತಿರುಗಿ ಮರಾಠಿಯಲ್ಲಿ ಏನೋ ಮಾತನಾಡಿದಳು. ಅವರಿಬ್ಬರ ಮರಾಠಿ ಸಂಭಾಷಣೆ ಮುಗಿದ ಮೇಲೆ ದಾದಾ

" ನಲವತ್ತು ಸಾವಿರ ನಾನು ಕೇಳಿದ್ದು ಬಹಳ ಕಡಿಮೆಯಾಯಿತು ಎಂದು ಬಾಯಿಯವರು ಹೇಳುತ್ತಾರೆ."

ಎಂದ. ಇಷ್ಟುಹೊತ್ತು ನಡೆದ ಸಂಭಾಷಣೆ ಸುದರ್ಶನರನ್ನು ಕೆರಳಿಸಿತ್ತು. ಅವರು ಬಾಯಿಯ ಕಡೆ ತಿರುಗಿ

" ನಾವು ಮಾಡುತ್ತಿರುವುದು ಕನ್ನಡ ಚಿತ್ರ. ನೀವು ಪಾರ್ಟ್ ಮಾಡಬೇಕಾದುದೂ ಕನ್ನಡದಲ್ಲಿಯೇ. ನೀವು ಕನ್ನಡ ಮಾತಾಡುವುದನ್ನು ನಾವು ಕೇಳಬೇಕು."

ಬಾಯಿ ಸಾಹುಕಾರರ ಕಡೆ ತಿರುಗಿ

" ಇವರು ಯಾರು ? " ಎಂದು ಕೇಳಿದರು.

ಚಿನ್ನಪ್ಪ ಸ್ಥೂಲವಾಗಿ ಸುದರ್ಶನರ ಪರಿಚಯಮಾಡಿಕೊಡುತ್ತಾ

" ಇವರೇ ನಮ್ಮ ಕಥಾ ಲೇಖಕರು " ಎಂದು ಹೇಳಿದ.

ತನಗೆ ಕನ್ನಡ ಬರುತ್ತದೆಂದು ತೋರಿಸಿಕೊಳ್ಳುವುದಕ್ಕೆ ಶಾಮಲಾಬಾಯಿ ಪ್ರಯತ್ನಪಡಲಿಲ್ಲ. ವಾತಾವರಣ ಗಭೀರ ಶಾಂತಿ ತಾಳಿತು. ಯಾರೂ ಮುಂದುವರಿದು ಮಾತನಾಡಲಿಲ್ಲ. ದಾದಾ ಕೊನೆಗೆ

" ನಾವು ಹೇಳಿದ್ದು ಮುಗಿಯಿತು. ನಿಮ್ಮ ಆಫರ್ (offer) ಕೊಡಿ."

" ನಮ್ಮ ಆಫರ್ ಏನೆಂದು ಕೊಡುವುದು ದಾದಾ ಸಾಹೇಬ್. ನೀವು ಕೇಳುವುದಕ್ಕೂ ನಮ್ಮ ಯೋಚನೆಗೆ ಅಜಗಜಾಂತರ ವ್ಯತ್ಯಾಸ. "

" ಚಿಂತೆಯಿಲ್ಲ ಹೇಳಿ. ನೀವು ಒಂದು ಸಂಖ್ಯೆ ಹೇಳಿದರೆ ನಾವೂ ಯೋಚನೆ ಮಾಡಬಹುದು."

ಚಿನ್ನಪ್ಪ, ಸುದರ್ಶನ ಇಬ್ಬರೂ ಸಾಹುಕಾರರ ಮುಖ ನೋಡಿದರು. ಸಾಹುಕಾರರು ಸಾವಕಾಶವಾಗಿ ತಮ್ಮ ರುಮಾಲು ತೆಗೆದು ಕೈಯಲ್ಲಿ ಹಿಡಿದು ಕೊಂಡು,

" ನಾವು ಇಪ್ಪತ್ತು ಸಾವಿರದವರೆಗೆ ಹೋಗಬಹುದು ಸ್ವಾಮಿ. ಅದರ ಮೇಲಾದರೆ ನಮಗೆ ಸಾಧ್ಯವಿಲ್ಲ."

ಎಂದರು. ಸಾಹುಕಾರರ ಮಾತು ಕೇಳಿ ಶಾಮಲಾಬಾಯಿ ನಗುತ್ತಾ

" ಒಟ್ಟು ಚಿತ್ರಕ್ಕೆ ಇಪ್ಪತ್ತು ಸಾವಿರವೇ ? "

" ಹೌದು."

" ಆರು ತಿಂಗಳಿಗೆ ? "

" ಹೌದು."

ಶಾಮಲಾಬಾಯಿ ತಲೆಯಳ್ಳಾಡಿಸುತ್ತ ಮತ್ತೆ ನಕ್ಕಳು. ಇದು ಗಿಟ್ಟುವ ವ್ಯಾಪಾರವಲ್ಲವೆಂದು ಸಾಹುಕಾರರ ಮನಸ್ಸಿಗೆ ಖಚಿತವಾಯಿತು. ಅವರೇ ಎದ್ದು ನಿಂತು

" ದಾದಾ ಸಾಹೇಬ್, ನಾವು ಹೀಗೆ ಕಾಲಹರಣಮಾಡುತ್ತಾ ಇಲ್ಲಿ ಕೂಡೋಕೆ ಆಗಾಕಿಲ್ಲ. ನಾಳೆ ಇಲ್ಲಿಂದ ಊರಿಗೆ ಹೊಲ್ಟ್ಟೀವಿ. ನೀವು ಒಪ್ಪೋ ಹಾಗಿದ್ರೆ ಓಟ್ಲಿಗೆ ಬಂದು ಜೆಳಿಗ್ಗೆ ತಿಳಿಸಿ."

ಎಂದರು.

ಎಲ್ಲರೂ ಹೊರಗೆ ಬಂದು ಕಾರಿನಲ್ಲಿ ಕುಳಿತರು. ಸಾಹುಕಾರರಿಗೆ ನಖಶಿಖಾಂತವಾಗಿ ಉರಿದು ಹೋಗಿತ್ತು. ಸುದರ್ಶನರನ್ನು ನೋಡಿ

" ನೋಡಿದ್ರಾ ಸ್ವಾಮಿ. ಈ ಜನಗ್ಳ ಪೊಗರು. ಇಪ್ಪತ್ತು ಸಾವಿರಾಂದ್ರೆ ಈ ಹೆಂಗಸಿಗೆ ಅಸಡ್ಡೆ. ಇವಳು ರೂಪಾಯಿಗಳ್ನ ಹಿತ್ತಿಲ ಗಿಡದಾಗೆ ಜೆಳೀತಾಳೇನೋ ? "

" ಈ ಜನಗಳೇ ಹೀಗೆ ಸಾಹುಕಾರರೇ. ಕನ್ನಡ ಮಾತನಾಡುವುದು ಕೂಡ ತನ್ನ ಗೌರವಕ್ಕೆ ಕುಂದು ಎಂದು ತಿಳಿದುಕೊಂಡಿರುವವಳ ಕೈಯಲ್ಲಿ ನೀವು ನಾಯಕಿ ಪಾತ್ರ ಮಾಡಿಸಬೇಕೆಂದು ಹಟತೊಟ್ಟಿರುವಿರಿ ? ಈಕೆಗೆ ಕನ್ನಡ ಬರುತ್ತದೆ ಎನ್ನುವುದೇ ನನಗೆ ಅನುಮಾನವಾಗಿದೆ ? "

" ಬರ್ದೇ ಏನು ಸ್ವಾಮಿ. ಈಕೆ ಮನೆ ಮಾತೇ ಕನ್ನಡ."

" ಆ ಕನ್ನಡ ಕೈಬಿಟ್ಟು ಎಷ್ಟು ವರ್ಷಗಳಾದವೋ ? "

"ಬೆಳಿಗ್ಗೆ ನೋಡುವಾ– ನಾವು ಹೇಳಿದ್ದಕ್ಕೆ ಒಪ್ಪಿಕೊಂಡರೆ ಸರಿ– ಇಲ್ದಿದ್ರೆ ಸಲಾಂ ತಕ್ಕೊಳ್ಳಿ."

ಎಂದು ತಮ್ಮ ಕೊನೆಯ ನಿರ್ಧಾರವನ್ನು ಸೂಚಿಸಿದರು.

ಬೆಳಿಗ್ಗೆ ದಾದನ ದಾರಿನೋಡುತ್ತ ಎಲ್ಲರೂ ಹೊಟೇಲಿನಲ್ಲಿಯೇ ಕುಳಿತರು. ಸುಮಾರು ೯॥ ಗಂಟೆಗೆ ದಾದಾ ಫೋನ್ ಮಾಡಿ

"ಇಲ್ಲಿಗೇ ಬನ್ನಿ. ಮಾನಿಕ್ ದಾದರ್‌ಕರ್ ಅವರೂ ಬಂದಿದ್ದಾರೆ"

ಎಂದು ಹೇಳಿದ.

ಒಂದು ಟ್ಯಾಕ್ಸಿ ಗೊತ್ತು ಮಾಡಿಕೊಂಡು ಎಲ್ಲರೂ 'ಶಿವಾಜಿ ಪಾರ್ಕಿ'ಗೆ ಹೋದರು. ದಾದಾ, ಶಾಮಲಾಬಾಯಿ, ಮಾನಿಕ್ ಟೀ ಸ್ವೀಕರಿಸುತ್ತಿದ್ದರು. ದಾದಾ ಬಂದು ಅತಿಥಿಗಳಿಗೆ ಸ್ವಾಗತ ಬಯಸಿದ.

ದಾದರ್‌ಕರ್ ಮಾತು ಆರಂಭಿಸಿ

"ನೀವು ಇಪ್ಪತ್ತು ಸಾವಿರ ಹೇಳಿದರಂತೆ. ಅವರು ನಲವತ್ತು ಕೇಳಿದರಂತೆ."

"ಹೌದು. ಅಷ್ಟಕ್ಕೆ ಅವರು ಒಪ್ಪದಿದ್ದರೆ ನಾವು ಇಂದು ಊರಿಗೆ ಹಿಂದಿರುಗುತ್ತೇವೆ."

"ಇಪ್ಪತ್ತೂ ಬೇಡ, ನಲವತ್ತೂ ಬೇಡ– ಇಬ್ಬರೂ ಮೂವತ್ತು ಸಾವಿರಕ್ಕೆ ಒಪ್ಪುವುದಕ್ಕೆ ಸಾಧ್ಯವಿಲ್ಲವೇ?"

"ನಮಗೆ ಸಾಧ್ಯವಿಲ್ಲ ಸ್ವಾಮಿ."

ಎಂದು ಸಾಹುಕಾರರು ನುಡಿದರು.

ದಾದರ್‌ಕರ್ ತನ್ನ ಸಂಧಾನ ಬಿಡಲಿಲ್ಲ.

"ಹೇಗೂ ಬಂದಿದ್ದೀರಿ. ಸ್ವಲ್ಪ ಹೆಚ್ಚುಕಡಿಮೆ ಗೊತ್ತು ಮಾಡಿಕೊಳ್ಳಿ. ಇಷ್ಟೊಂದು ವ್ಯವಹಾರದ ಮಾತಾಡಿ ಅದನ್ನು ಈ ರೀತಿಯಾಗಿ ಮುಕ್ತಾಯ ಮಾಡುವುದು ಏನು ಚೆನ್ನ? ನಿಮ್ಮ ಕೊನೆಯ ಫಿಗರ್ (figure) ಎಷ್ಟು ಹೇಳಿ?"

ಸಾಹುಕಾರರು ಸ್ವಲ್ಪ ಆಲೋಚಿಸಿ, ಮನಸ್ಸಿನಲ್ಲಿಯೇ ಲೆಕ್ಕಹಾಕಿಕೊಂಡು

"ಆರು ತಿಂಗಳು ಕೆಲಸ. ತಿಂಗಳಿಗೆ ನಾಲ್ಕು ಸಾವಿರದಂತೆ ಆದರೆ ಒಪ್ಪಿಕೊಂಡು ಬಿಡುತ್ತೇನೆ– ಅಲ್ಲಿಗೆ ಇಪ್ಪತ್ತು ನಾಲ್ಕು ಸಾವಿರವಾದ ಹಂಗಾಯ್ತು."

ಎಂದರು. ದಾದರ್‌ಕರ್, ಶಾಮಲಾಬಾಯಿ, ದಾದಾ ಇವರಲ್ಲಿ ಮರಾಠಿಯಲ್ಲಿ ಚರ್ಚೆಯಾರಂಭವಾಯಿತು. ದಾದರ್‌ಕರ್ ಅವರನ್ನು ಒಪ್ಪಿಸುತ್ತಿರುವಂತೆಯೂ ಅವರು ಮೂಗೆಳೆಯುತ್ತಿರುವಂತೆಯೂ ಕಂಡು ಬಂತು. ಕೊನೆಗೆ ದಾದಾ

"ಆಗಲಿ, ದಾದರ್‌ಕರ್ ಮಾತಿಗೆ ಕಟ್ಟುಬಿದ್ದು ಒಪ್ಪಿಕೊಂಡಿದ್ದೇವೆ" ಎಂದ.

"ನೀವು ಮನಃಪೂರ್ತಿ ಒಪ್ಪಿಕೊಳ್ಳದಿದ್ದರೆ ಕೆಲಸ ನೇರವಾಗುವುದಿಲ್ಲ."

"ಒಪ್ಪಿಕೊಂಡ ಮೇಲೆ ಮನಸ್ಸು ಬದಲಿಸುವುದಕ್ಕಾಗುತ್ತದೆಯೇ? ನಾನು ಕಾಂಟ್ರ್ಯಾಕ್ಟ್ ಕರಡು ಸಿದ್ಧಮಾಡಿದ್ದೇನೆ – ನೋಡುತ್ತೀರೇನು?"

"ಆಗಬಹುದು. ಕಾಂಟ್ರ್ಯಾಕ್ಟ್ ಕೆಲಸ ಬೇಗ ಮುಗಿಸಿಬಿಡಬೇಕು. ನಾವು ಇಂದು ಪ್ರಯಾಣಮಾಡಲೇಬೇಕು."

ದಾದಾ ಟೈಪಾದ ಒಂದು ಹಾಳೆಯನ್ನು ಸಾಹುಕಾರರ ಕೈಗಿತ್ತ. ಸಾಹುಕಾರರು ಅದನ್ನು ಸುದರ್ಶನರ ಕೈಗಿತ್ತರು. ಸುದರ್ಶನರು ಓದಿಕೊಂಡು, ಸಾಹುಕಾರರಿಗೆ ಪ್ರತಿಯೊಂದು ವಾಕ್ಯ, ವಾಕ್ಯಾಂಗವನ್ನೂ ಬಿಡಿಸಿ ಬಿಡಿಸಿ ಅನುವಾದ ಮಾಡುತ್ತ ಹೇಳಿದರು. ಕೆಲವು ವಾಕ್ಯಾಂಗಗಳನ್ನು ಸಾಹುಕಾರರು ಮತ್ತೆ ಮತ್ತೆ ಓದಿಸಿ ಕೇಳಿ ಗುರುತು ಹಾಕಿಸಿದರು.

(೧) ಕಾಂಟ್ರ್ಯಾಕ್ಟಿನ ಅವಧಿ ಆರು ತಿಂಗಳು. ಆರು ತಿಂಗಳು ಕಳೆದ ಮೇಲೆ ಪ್ರೊರೇಟಾ ಕೊಡತಕ್ಕದ್ದು.

(೨) ಶಾಮಲಾಬಾಯಿಯವರ ಯಜಮಾನರಾದ ದಾದಾ ಸಾಹೇಬ್ ನಾಠೆಯವರಿಗೆ ಬೇಕಾದಾಗ ಸ್ಟೂಡಿಯೋ ಒಳಗೆ ಹೋಗಿ ರಷ್ – ಪ್ರಿಂಟ್ (Rush Print) ಗಳನ್ನು ನೋಡುವ ಅಧಿಕಾರವಿರತಕ್ಕದ್ದು.

(೩) ಷೂಟಿಂಗ್ ನಡೆಯುವ ವೇಳೆಯಲ್ಲಿ ದಾದಾ ಸಾಹೇಬರು ಬೇಕಾದಾಗ ತಮ್ಮ ಸ್ಟಿಲ್ ಕ್ಯಾಮೆರಾ (Still Camera) ದಿಂದ ಚಿತ್ರಗಳನ್ನು ತೆಗೆದುಕೊಳ್ಳುವ ಅಧಿಕಾರವಿರತಕ್ಕದ್ದು.

(೪) ಶಾಮಲಾಬಾಯಿಯವರ ವಾಸಕ್ಕೆ ಬಂಗಲೆ, ಇಬ್ಬರು ಆಳುಗಳನ್ನು ಮದರಾಸಿನಲ್ಲಿ ಕಂಪೆನಿಯವರು ಕೊಡತಕ್ಕದ್ದು.

(೫) ಶಾಮಲಾಬಾಯಿಯವರ ಅನುಕೂಲ ಕೇಳಿಕೊಂಡು ಡೈರೆಕ್ಟರು ಕಾಲ್ ಷೀಟ್ (Call Sheet) ತೆಗೆದುಕೊಳ್ಳತಕ್ಕದ್ದು.

(೬) ಶಾಮಲಾಬಾಯಿಯವರು ಮುಂಬಯಿಯಿಂದ ಮದರಾಸಿಗೆ ಮದರಾಸಿನಿಂದ ಮುಂಬಯಿಗೆ ಹೋಗಿಬರುವ ಕಾರ್ ವೆಚ್ಚವನ್ನು ಕಂಪೆನಿ ಪೂರೈಸತಕ್ಕದ್ದು. ಮದರಾಸಿನಲ್ಲಿ ಶಾಮಲಾಬಾಯಿಯವರ ಡ್ರೈವರಿಗೆ ಕಂಪೆನಿ

ಯವರು ತಿಂಗಳಿಗೆ ೭೫ ರೂಪಾಯಿ ಸಂಬಳ ಕೊಡತಕ್ಕದ್ದು.

(೭) ಶಾಮಲಾಬಾಯಿಯವರ ಮನೆಯ ಖರ್ಚಿಗೆ ಕಂಪೆನಿಯವರು ತಿಂಗಳಿಗೆ ಐದುನೂರು ರೂಪಾಯಿಗಳನ್ನು ಕೊಡತಕ್ಕದ್ದು.

(೮) ಕಾಂಟ್ರಾಕ್ಟ್ ಸಹಿಯಾಗುವ ದಿನ ಮುಂಗಡವಾಗಿ ಕಂಪೆನಿಯವರು ಅರ್ಧಭಾಗ ಹಣಕೊಡತಕ್ಕದ್ದು.

ಸಾಹುಕಾರರು ಒಂದೊಂದಾಗಿ ಕರಾರಿನ ವಾಕ್ಯಾಂಗಗಳನ್ನು ತೆಗೆದುಕೊಂಡು ತಮ್ಮ ಅಭಿಪ್ರಾಯ ಸೂಚಿಸಿ, ಅದನ್ನು ಇಂಗ್ಲಿಷಿನಲ್ಲಿ ಎಲ್ಲರಿಗೂ ತಿಳಿಯ ಹೇಳುವಂತೆ ಸುದರ್ಶನರಿಗೆ ತಿಳಿಸಿದರು.

"ಕಾಂಟ್ರ್ಯಾಕ್ಟಿನ ೧, ೨, ೩ ಅಂಶಗಳಿಗೆ ಒಪ್ಪಿಗೆ ಇದೆ. ೪ನೆಯ ಅಂಶದಲ್ಲಿ ಶಾಮಲಾಬಾಯಿಯವರ ವಾಸಕ್ಕೆ ಬಂಗಲೆಯನ್ನು ಕಂಪೆನಿ ಕೊಡುತ್ತಾರೆ. ಇಬ್ಬರು ಆಳುಗಳನ್ನು ಕೊಡಲು ಸಾಧ್ಯವಿಲ್ಲ. ೫ನೆಯ ಅಂಶ ಸುತರಾಂ ಸಾಧ್ಯವಿಲ್ಲ. ಶಾಮಲಾಬಾಯಿಯವರ ಆಜ್ಞಾನುವರ್ತಿಗಳಾಗಿರುವುದಕ್ಕೆ ನಮ್ಮ ಡೈರೆಕ್ಟರು ಒಪ್ಪುವುದಿಲ್ಲ. ೬ನೆಯ ಅಂಶ. ಮುಂಬಯಿ, ಮದರಾಸಿಗೆ ಹೋಗಿಬರುವ ಒಂದು ಖರ್ಚನ್ನು ಕಂಪೆನಿ ವಹಿಸಿಕೊಳ್ಳುತ್ತದೆ, ಡ್ರೈವರ್ ಸಂಬಳ ಶಾಮಲಾಬಾಯಿಯವರೇ ಕೊಟ್ಟುಕೊಳ್ಳಬೇಕು. ೭ನೆಯ ಅಂಶ ಸಾಧ್ಯವಿಲ್ಲ. ೮ನೆಯ ಅಂಶ. ಕಾಂಟ್ರ್ಯಾಕ್ಟ್ ಸಹಿಯಾಗುವ ದಿನ ನಾಲ್ಕುಸಾವಿರ ರೂಪಾಯಿ ಮುಂಗಡವಾಗಿ ಕೊಡಲಾಗುತ್ತದೆ."

ಸಾಹುಕಾರರ ನಿರ್ಧಾರದ ಮೇಲೆ ದಾದಾ, ಶಾಮಲಾಬಾಯಿ, ಮಾನಿಕ್ ದಾವರ್‌ಕರ್ ವಿಪುಲವಾಗಿ ಚರ್ಚೆಮಾಡಿದರು. ಇನ್ನು ಅಲ್ಪಸ್ವಲ್ಪವಾದರೂ ಕೆಸಿಯಬೇಕೆಂದು ದಾದಾ ಮಾಡಿದ ಪ್ರಯತ್ನ ಪೂರ್ಣವಾಗಿ ವಿಫಲವಾಯಿತು. ಸಾಹುಕಾರರು ತಮ್ಮ ಹಟವನ್ನೇ ಪಟ್ಟಾಗಿ ಹಿಡಿದರು.

ದಾದಾ ವಿಧಿಯಿಲ್ಲದೆ ಒಪ್ಪಿಗೆ ಕೊಟ್ಟ.

"ಹತ್ತು ನಿಮಿಷ ನೀವು ಕಾದರೆ ನಾನು ಕಾಂಟ್ರ್ಯಾಕ್ಟ್ ಟೈಪ್ ಮಾಡಿಸಿಕೊಂಡು ಬಂದುಬಿಡುತ್ತೇನೆ. ಈ ಕೆಲಸ ಇವತ್ತೇ ಮುಗಿಸಿಬಿಡಬಹುದು"

ಎಂದು ಹೇಳಿ ಎದ್ದು ಹೋದ.

ಸುದರ್ಶನರು ಸಾಹುಕಾರರಿಗೆ ಕೊನೆಯ ಎಚ್ಚರಿಕೆ ಮಾತನ್ನು ಸೂಚಿಸಿದರು.

"ಇವರ ಕಾಂಟ್ರ್ಯಾಕ್ಟ್ ಇಪ್ಪತ್ತುನಾಲ್ಕು ಸಾವಿರಕ್ಕೆ ಇದ್ದರೂ ಇದು ಅಲ್ಲಿಗೆ ಮುಗಿಯುವುದಿಲ್ಲ. ಇಷ್ಟೊಂದು ಹಣ ತೆತ್ತು ಈಕೆಯನ್ನು ಕರೆದುಕೊಂಡು ಹೋಗಬೇಕೇ ಈಗಲೂ ಆಲೋಚಿಸಿ."

" ನೋಡಿ ಸ್ವಾಮಿ. ನಾವು ಷ್ಟಾರ್ ಗೊತ್ತು ಮಾಡಿಕೊಂಡು ಬರೋಕೆ ಇಲ್ಲಿಗೆ ಬಂದಿರೋ ಸಂಗ್ತಿ ಬೆಂಗಳೂರಿನಲ್ಲಿ ಟಾಮ್ ಟಾಮ್ ಆಗ್ಬಿಟ್ಟಿರುತ್ತೆ. ನಾವು ಬರೀಗೈಲಿ ಹೋದರೆ ಎಷ್ಟು ಔಮಾನಾ ನೋಡಿ. ನಾಲ್ಕು ಕಾಸಿನ ಮಕ ನೋಡ್ಕೊಂಡು ಗೌರವ ಆಳುಮಾಡಿಕೊಳ್ಳೋದೆ ? "

ಎಂದರು. ಸುದರ್ಶನರು ಶಾಮಲಾಬಾಯಿಯನ್ನು ಕನ್ನಡದಲ್ಲಿ ಮಾತ ನಾಡಿಸುವ ಪ್ರಯತ್ನ ಮಾಡಿದರು. ಶಾಮಲಾಬಾಯಿ

" ಚಿತ್ರದ ಕಥೆ ಹೇಳಿ "

ಎಂದಳು. ಸುದರ್ಶನರು ಹೇಳುತ್ತಿದ್ದ ಕಥೆ ಕೇಳುತ್ತ ಕೈಕಟ್ಟಿ ಬಾಯಿ ಕುಳಿತಳು. ತುಟಿ ಪಿಟಕ್ಕೆನ್ನಲಿಲ್ಲ.

ದಾದಾ ಟೈಪಾದ ಕಾಂಟ್ರ್ಯಾಕ್ಟ್ ಹಾಳೆಗಳನ್ನು ಹಿಡಿದು ಧಾವಿಸಿ ಬಂದ. ಸಹಿ ಪ್ರಕರಣ ಮುಗಿಯಿತು. ಕಂಪೆನಿ ಪರವಾಗಿ ಸುದರ್ಶನರೂ, ಶಾಮಲಾ ಬಾಯಿ ಪರವಾಗಿ ಮಾನಿಕ್ ದಾದರ್‌ಕರ್ ಅವರೂ ಸಾಕ್ಷಿ ಹಾಕಿದರು. ಚಿನ್ನಪ್ಪ ನಾಲ್ಕು ಸಾವಿರಕ್ಕೆ ಚೆಕ್ ಬರೆದು ಸಾಹುಕಾರರ ಸಹಿಮಾಡಿಸಿ ಶಾಮಲಾಬಾಯಿಗೆ ಕೊಟ್ಟು ರಸೀತಿ ಪಡೆದ.

ದಾದಾ ಸಂತೋಷದಿಂದ ಎಲ್ಲರ ಕೈಕುಲುಕಿ

" ಸ್ವಲ್ಪ ಚಹಾ ತೆಗೆದುಕೊಳ್ಳುವುದಿಲ್ಲವೇ ? "

ಎಂದು ಕೇಳಿದ. ಸಾಹುಕಾರರು ಕಹಿಮೋರೆ ಮಾಡಿಕೊಂಡು

" ನಮಗೆ ಚಹಾ ಕುಡಿಯುವ ಅಭ್ಯಾಸವಿಲ್ಲ "

ಎಂದರು.

ಮದರಾಸಿನ ವ್ಯವಸ್ಥೆಯೆಲ್ಲಾ ಮುಗಿದ ಮೇಲೆ ತಾವು ಕಾಗದ ಬರೆದು ತಿಳಿಸುವುದಾಗಿಯೂ, ಹೊರಟು ಬರಬೇಕೆಂದು ಚಿನ್ನಪ್ಪ ಶಾಮಲಾಬಾಯಿಗೆ ತಿಳಿಸಿದ.

ಎಲ್ಲರೂ ದಾದರ್‌ಕರ್ ಅವರ ಶ್ರಮೆಗೆ ವಂದನೆಯನ್ನರ್ಪಿಸಿದರು.

ಅದೇ ರಾತ್ರಿ ಸಾಹುಕಾರರು, ಚಿನ್ನಪ್ಪ, ಸುದರ್ಶನರು ಹತ್ತೂಕಾಲು ಗಂಟೆಗೆ ಹೊರಡಲಿದ್ದ ಮದರಾಸು – ಮುಂಬಯಿ ಮೆಯಿಲ್ ಗಾಡಿಯಲ್ಲಿ ಬೆಂಗಳೂರಿಗೆ ಪ್ರಯಾಣ ಮಾಡಿದರು.

## ೧೫

ಶಾಮಲಾಬಾಯಿಯ ಜತೆಯಲ್ಲಿ ಸಾಹುಕಾರರು ಮಾಡಿಕೊಂಡು ಬಂದ ಕಾಂಟ್ರ್ಯಾಕ್ಟ್ ವಿವರಗಳನ್ನು ಕೇಳಿ ಭೂಪೇನ್ ಬಾಬು ತನ್ನ ಅಭಿಪ್ರಾಯ

ವ್ಯಕ್ತಗೊಳಿಸಲಿಲ್ಲ. ಸ್ಟಾರಿನ ಸಂಬಳ ತಮ್ಮ ಸಂಬಳಕ್ಕೆ ನಾಲ್ಕರಷ್ಟಾಯಿತಲ್ಲಾ ಎಂದು ಅವರ ಮನಸ್ಸು ಹಳಹಳಿಸಿತು. ಅಸಮಾಧಾನವನ್ನು ಅವರು ವ್ಯಕ್ತಪಡಿಸಲಿಲ್ಲ.

ಭಾಗ್ಯಮ್ಮ ಮಾತ್ರ ಒಪ್ಪಂದದ ವಿವರ ಕೇಳಿ ಕಿಡಿಕಿಡಿಯಾದಳು.

" ನಿನಗೂ ಅಷ್ಟೇ ಕೊಡುತ್ತೇನೆಂದರೆ ಪಾರ್ಟು ಮಾಡು ಸರೋಜ ಇಲ್ಲದಿದ್ದರೆ ಶಾಮಲೆ ಉಂಟು, ಅವರುಂಟು."

" ಶಾಮಲಾಬಾಯಿಯನ್ನು ಅವರು ಕರೆದುಕೊಂಡು ಬಂದಿರುವುದು ನನಗಾಗಿಯೇ ಅಲ್ಲವೇನಮ್ಮ."

" ಸಾಕು ಸುಮ್ಮನಿರೇ, ಗಿಣಿಯ ಹಾಗೆ ಮಾತಾಡಬೇಡ. ನಿನ್ನ ಕೀರ್ತಿ ಬೆಳಸೋಕೇ ಹೊರಗಿನವಳನ್ನು ಕರೆದುಕೊಂಡು ಬರುವುದು ಎಂದು ಆಯಪ್ಪ ಹೇಳಿದ – ನೀನು ನಂಬಿದೆ. ಅವಳು ಮೊದಲೇ ಹೆಸರುವಾಸಿ ಪಡೆದವಳು. ಅವಳ ಕೆಲಸ ಚೆನ್ನಾಗಿ ಆಗೇ ಆಗುತ್ತೆ. ಫಿಲ್ಮ ಪ್ರಪಂಚಕ್ಕೆ ನೀನು ಹೊಸಬಳು–ನೀನು ಎಷ್ಟೇ ಚೆನ್ನಾಗಿ ಮಾಡಿದರೂ ಜನ ಅವಳನ್ನೇ ಮೆಚ್ಚುತ್ತಾರೆ."

" ಹಾಗೇನಿಲ್ಲಮ್ಮ. ದೊಡ್ಡ ಸ್ಟಾರ್ ಜತೆ ಪಾರ್ಟು ಮಾಡಿದೆನೆಂದು ನನಗೇ ಕೀರ್ತಿ ಬರುತ್ತದೆ. ನೀನೇ ಯೋಚನೆ ಮಾಡು – ಈ ಪಿಕ್ಚರ್ ಮಾಡುವ ಯೋಚನೆ ಅವರಿಗಿತ್ತೇ. ಚಿನ್ನಪ್ಪ, ನೀನೂ ಇದನ್ನು ಕುದುರಿಸಿದಿರಿ. ನನ್ನ ಸಲುವಾಗಿ ಅವರು ಪಿಕ್ಚರ್ ಮಾಡುವುದಕ್ಕೆ ಒಪ್ಪಿಕೊಂಡದು. ಚಿತ್ರದಲ್ಲಿ ಅವಳು ಮಾಡುವುದು ಕೌಸಲ್ಯೆ ಪಾರ್ಟು, ನಾನು ಮಾಡುವುದು ಕೈಕೆ ಪಾರ್ಟು. ನನಗೇ ಕೆಲಸ ಹೆಚ್ಚಲ್ಲವೇ ? "

ಮಗಳ ವಾದಸರಣಿ ತಾಯಿಯ ಮನ ಹೊಗದಿರಲಿಲ್ಲ ಮಗಳ ಪಾತ್ರ ಪೂರ್ಣ ಕಳೆಗಟ್ಟುವುದಕ್ಕೆ ಏನು ಮಾಡಬೇಕೆಂದು ಭಾಗ್ಯಮ್ಮ ಆಲೋಚಿಸುತ್ತಾ

" ನನ್ನ ಮಂಕುಬುದ್ಧಿಗೆ ಹೊಳೆಯಲೇ ಇಲ್ಲ ನೋಡು."

" ಏನಮ್ಮ ಅದು–ಅಪರೂಪದ ಶೋಧನೆ ಮಾಡಿದ್ದ ಹಾಗಿದೆಯಲ್ಲಾ ! "

ಪಿಕ್ಚರಿನಲ್ಲಿ ಡೈರೆಕ್ಟರೇ ಸರ್ವಾಧಿಕಾರಿ ಕಣೇ ಹುಚ್ಚಿ. ಡೈರೆಕ್ಟರು ನಮ್ಮವರಾಗಿದ್ದರೆ ಜಯ ನಮ್ಮದು. ಅವನ ಕಿವಿ ತಿರುವಿ ನಮ್ಮ ಕೆಲಸ ನಾವು ಮಾಡಿಕೊಳ್ಳಬಹುದು. ಇರಲಿ ಸುಮ್ಮನಿರು, ನಾನು ನೋಡಿಕೊಳ್ಳುತ್ತೇನೆ " ಎಂದು ಮಾರ್ಮಿಕವಾಗಿ ನುಡಿದಳು.

ಆಲಸ್ಯಕ್ಕೆ ಎಡೆಕೊಡುವುದು ಭಾಗ್ಯಮ್ಮನ ಜಾಯಮಾನಕ್ಕೇ ಬಂದಿರಲಿಲ್ಲ. ಅಂದೇ ಬಂದ ಚಿನ್ನಪ್ಪನಿಗೆ ತಿಳಿಸಿ, ಮಾರನೆಯ ದಿನ ಸಂಜೆಗೆ

ಡೈರೆಕ್ಟರನ್ನು ತಮ್ಮ ಮನೆಗೆ ಉಪಾಹಾರಕ್ಕೆ ಕರೆದುಕೊಂಡು ಬರಬೇಕೆಂದು ತಿಳಿಸಿದಳು.

"ನಾನು ಬರಬಹುದೋ ಬಾರದೋ ಭಾಗ್ಯಮ್ಮ ?"

ಎಂದು ಚಿನ್ನಪ್ಪ ಕೇಳಿದ. ಭಾಗ್ಯಮ್ಮ ಅವನ ಕೆಣಕು ಮಾತಿಗೆ ಹುಸಿಮುನಿಸು ತೋರುತ್ತ

"ಆ ಶಾಮಲೆ ಪಕ್ಷ ನೀನು ಸೇರದಿದ್ದರೆ ಬಾ" ಎಂದಳು.

"ಪ್ರಮಾಣವಾಗಿ ಹೇಳುತ್ತೇನೆ ಭಾಗ್ಯಮ್ಮ. ಶಾಮಲೆಯನ್ನು ಬುಕ್ ಮಾಡೋದಿಕ್ಕೆ ನನಗೂ ಮನಸ್ಸಿಲ್ಲ ಸುದರ್ಶನರಿಗೂ ಮನಸ್ಸಿಲ್ಲ. ಅಣ್ಣಾವರು, ಅದೇನು ಲೆಕ್ಕ ಹಾಕುತ್ತಿದ್ದಾರೆಯೋ ಅವಳನ್ನು ಬುಕ್ ಮಾಡಲೇ ಬೇಕೆಂದು ಹಟ ಹಿಡಿದರು. ಕಾಂಟ್ರ್ಯಾಕ್ಟು ಸೈನಾಗುವ ವೇಳೆಯಲ್ಲಿ ಕೂಡ ನಾವು ಬೇಡವೆಂದೆವು. ಅವರು ನಮ್ಮ ಮಾತು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ."

"ಊರಿಗೆ ಬಂದವಳು ನೀರಿಗೆ ಬರದೇ ಹೋಗುತ್ತಾಳೆಯೇ? ಬರಲಿ ಸುಮ್ಮನಿರು ನೋಡೋಣ – ಏನೇನು ಕಡಿದು ಕಟ್ಟಿಹಾಕುತ್ತಾಳೋ ಎನ್ನೋದ್ನ – ಹೋಗಲಿ – ಅವಳು ಹೇಗಿದ್ದಾಳೋ ಚಿನ್ನಪ್ಪ."

"ಅದನ್ನು ಯಾಕೆ ಕೇಳ್ತೀ ಭಾಗ್ಯಮ್ಮ. ಆ ಗಂಟಲು ಮುಖದ ಚಂದಣದ ಬೊಂಬೆ ನೋಡಿದ ಕೂಡಲೆ ನಾನು ಭೂಮಿಗೇ ಇಳಿದುಹೋದೆ. ಸಾಹುಕಾರರೂ ಸುಸ್ತಾದರು. ಈ ಕಥೆ ಮುಗೀತು ಎಂದುಕೊಂಡೆ, ಸಾಹುಕಾರರು ಬಿಡಬೇಕಲ್ಲ. ಹೆಸರು – ಮುಖ್ಯ ಭಾಗ್ಯಮ್ಮ."

"ಸದ್ಯ ಸಾಹುಕಾರರೇನೂ ಸರೋಜನ ಕೈಬಿಡುವಹಾಗಿಲ್ಲವಲ್ಲ!"

"ನಿನಗೆಲ್ಲೋ ಹುಚ್ಚು. ಆ ರಂಭೆ ಬರುತ್ತಾಳೆ, ನೀನೇ ನೋಡುವೆಯಂತೆ ಸುಮ್ಮನಿರು"

ಎಂದು ಹೇಳಿದ. ಚಿನ್ನಪ್ಪನ ವಿಮರ್ಶೆ ಕೇಳಿ ಭಾಗ್ಯಮ್ಮನ ಹೊಟ್ಟೆಗೆ ಹಾಲು ಹುಯಿದಂತಾಯಿತು.

ಮಾರನೆಯ ದಿನ ಡೈರೆಕ್ಟರ್ ಸಾಹೇಬರಿಗೆ ಭಾಗ್ಯಮ್ಮ ರಾಜ ಔತಣ ಸಿದ್ಧಪಡಿಸಿದಳು. ಮನೆಯಲ್ಲಿ ಬಗೆಬಗೆಯ ಭಕ್ಷ್ಯಗಳನ್ನು ಮಾಡಿಸಿ, ಹೋಟಲಿನಿಂದ ತಿಂಡಿತಿನಿಸು ತರಿಸಿ ಸೊಗಸಾದ ವ್ಯವಸ್ಥೆ ಮಾಡಿದಳು.

ಚಿನ್ನಪ್ಪ ಭೂಪೆನ್ ಬಾಬುಗಳೊಂದಿಗೆ ಸಂಜೆ ಐದು ಗಂಟೆಗೆ ಬಂದ, ಭಾಗ್ಯಮ್ಮ ಅವರಿಗೆ ಆತಿಥ್ಯಮಾಡಿ ಮಾತಿಗೆ ಕುಳಿತುಕೊಂಡಳು. ನಾಚಿಕೊಂಡು ರೂಮಿನಲ್ಲಿ ಅಡಗಿಕೊಂಡಿದ್ದ ಸರೋಜನನ್ನೂ ಎಳೆದುಕೊಂಡು ಬಂದು ಪಕ್ಕದಲ್ಲಿ ಕುಳ್ಳಿರಿಸಿಕೊಂಡಳು.

ಭೂಪೆನ್ ಬಾಬು ಉಪಾಹಾರವನ್ನು ಬಹುವಾಗಿ ಮೆಚ್ಚಿಕೊಂಡು ತಮ್ಮ ಸಂತೋಷ ವ್ಯಕ್ತಪಡಿಸಿದರು.

"ಕಥೆಯೆಲ್ಲಾ ಸಿದ್ಧವಾಯಿತೇ ಸ್ವಾಮಿ" ಎಂದು ಭಾಗ್ಯಮ್ಮ ಕೇಳಿದಳು.

"ಸುದರ್ಶನರು ಊರಿನಲ್ಲಿರಲಿಲ್ಲವಲ್ಲಾ. ಇನ್ನು ಮೇಲೆ ಅದಕ್ಕೇ ಕುಳಿತು ಕೊಳ್ಳುತ್ತೇವೆ".

"ನಮ್ಮ ಸರೋಜನ ಕೈಯಲ್ಲಿ ಚೆನ್ನಾಗಿ ಪಾರ್ಟುಮಾಡಿಸಿ ಅವಳನ್ನು ಮುಂದಕ್ಕೆ ತರುವ ಭಾರ ನಿಮ್ಮದು."

"ಅವರ ಪ್ರತಿಭೆಯೇ ಅವರನ್ನು ಮುಂದಕ್ಕೆ ತರುತ್ತದೆ. ನಾನೇನು ಮಾಡಬಲ್ಲೆನಮ್ಮ."

"ಶಾಮಲಾಬಾಯಿಯ ಪಾರ್ಟು ನೋಡಿರುವಿರಾ?"

"ನೋಡಿದ್ದೇನೆ. ಆಕೆ ಒಳ್ಳೆಯ ಕಲಾವಿದೆ. ಪಾತ್ರ ಚೆನ್ನಾಗಿ ಅರ್ಥ ಮಾಡಿಕೊಂಡು ಮಾಡುತ್ತಾರೆ. ಕನ್ನಡ ಆಕೆ ಹೇಗೆ ಮಾತನಾಡುತ್ತಾರೆ ಚಿನ್ನಪ್ಪನವರೇ?"

"ಮಹಾರಾಯಿತಿ : ಬಾಯೇ ಬಿಡಲಿಲ್ಲ ಸ್ವಾಮಿ. ಅವಳ ಕೈಯಲ್ಲಿ ಕನ್ನಡದಲ್ಲಿ ಮಾತನಾಡಿಸಬೇಕೆಂದು ಪ್ರಯತ್ನಿಸಿ ಸುದರ್ಶನರು ಬೇಸತ್ತರು. ಈ ಮರಾಟಿ ಮಹಾಲಕ್ಷ್ಮಿ ನಮ್ಮ ಪಿಕ್ಚರನ್ನು ಏನು ಮಾಡಿಬಿಡುತ್ತಾಳೋ?"

"ಆಕೆಗೆ ಭಾಷಾಜ್ಞಾನವಿಲ್ಲದಿದ್ದರೆ ನಾವು ಮಾತು ಕಡಿಮೆಹಾಕಬೇಕು."

"ಹೇಗೆ ಸ್ವಾಮಿ ಮಾಡುತ್ತೀರಿ. ಕೌಸಲ್ಯೆ ಪಾತ್ರ ದೊಡ್ಡ ಪಾತ್ರ. ರಾಮ ಕೌಸಲ್ಯೆ, ದಶರಥ ಕೌಸಲ್ಯೆ ಇವರ ಮಧ್ಯೆ ಎಷ್ಟೋ ಮಾತು ಕತೆಯಾಗಬೇಕು."

"ಅದು ನಮಗಿರಲಿ – ಫಿಲಂ ವ್ಯವಸಾಯದಲ್ಲಿ ಏನು ಬೇಕಾದರೂ ಮಾಡಲು ಸಾಧ್ಯ. ಸುದರ್ಶನರ ಸಹಕಾರ ಸ್ಥಿರವಾಗಿದ್ದುಬಿಟ್ಟರೆ ನಾನು ಕಲ್ಲುಗಳ ಕೈಯಲ್ಲಿ ಪಾರ್ಟು ಮಾಡಿಸಬಲ್ಲೆ."

"ನಮ್ಮ ಹುಡುಗಿ ಪಾರ್ಟು ಯಾವದು ಹೇಳಲಿಲ್ಲವಲ್ಲ!"

ಎಂದು ಭಾಗ್ಯಮ್ಮ ಏನೂತಿಳಿಯದಂತೆ ಕೇಳಿದಳು.

"ಬಹಳ ದೊಡ್ಡ ಪಾರ್ಟಮ್ಮ – ಕೈಕಾದೇವಿಯ ಪಾತ್ರ. ನಮ್ಮ ಕಥೆಯ ಜೀವಾಳವೇ ಕೈಕಾ. ಕಥೆಯೆಲ್ಲಾ ಅವಳನ್ನೇ ಅವಲಂಬಿಸಿರುತ್ತದೆ."

"ಕೈಕೆಗೆ ಹಾಡು ಹಸೆ ಹಾಕಿದ್ದೀರೋ ಇಲ್ಲವೋ?"

"ಹಾಡಿದೆ, ನಾಟ್ಯವಿದೆ. ದಶರಥನನ್ನು ಕೈಕಾದೇವಿ ಹೇಗೆ ಮೆಚ್ಚಿಸಿ, ಒಲಿಸಿಕೊಂಡು ತನ್ನ ಅಧೀನ ಮಾಡಿಕೊಂಡಿರುತ್ತಾಳೆ ಎಂಬುದನ್ನು ನಾವು ತೋರಿಸಲೇಬೇಕು. ನಿಮ್ಮ ಮಗಳು ಶ್ರದ್ಧೆವಹಿಸಿ ಈ ಪಾರ್ಟು ಮಾಡಿದರೆ

ಒಂದೇ ಚಿತ್ರದಲ್ಲಿ ಅವರು ಆಲ್ ಇಂಡಿಯಾ ಸ್ಟಾರ್ ಆಗಿ ಬಿಡುತ್ತಾರೆ."

"ಏನೋಪ್ಪ. ಎಲ್ಲಾ ನಿಮ್ಮ ಕೈಯಲ್ಲಿದೆ. ನೋಡಿಕೊಳ್ಳಿ. ನಾನು ಹೇಳಿಕೊಳ್ಳುವ ಮಾತಲ್ಲ – ಸರೋಜನ ಶ್ರದ್ಧೆ ಬೇರೆ ಯಾರಿಗೂ ಬರುವುದಕ್ಕೆ ಸಾಧ್ಯವಿಲ್ಲ."

ಚಿನ್ನಪ್ಪನೂ ಭಾಗ್ಯಮ್ಮನ ಮಾತನ್ನು ಅನುಮೋದಿಸಿ ಸರೋಜನ ಶ್ರದ್ಧೆ, ಅವಳ ಕಷ್ಟಸಹಿಷ್ಣುತಾದಿ ಗುಣಗಳನ್ನು ಪ್ರಶಂಸೆಮಾಡಿದ.

ಭೂಪೆನ್ ಬಾಬು, ಚಿನ್ನಪ್ಪ ಮನೆಗೆ ಹಿಂದಿರುಗುವಾಗ ಚಿನ್ನಪ್ಪ ಸೂಕ್ಷ್ಮವಾಗಿ

"ಬಾಬುಗಳೇ, ಈ ಮುದುಕಿಯನ್ನು ಸ್ವಲ್ಪ ಲಕ್ಷ್ಯದಲ್ಲಿಟ್ಟುಕೊಂಡಿರಿ. ಇವಳೇ ನಮ್ಮ ಚಿತ್ರದ ಆಧಾರಸ್ತಂಭ. ಇವಳಿಗೆ ಅಸಮಾಧಾನವಾದರೆ ನೀವೂ ನಾನೂ ಯಾರೂ ಉಳಿಯುವ ಹಾಗಿಲ್ಲ."

ಎಂದು ಸೂಚಿಸಿದ. ಭೂಪೆನ್ ಬಾಬು ತಲೆಯಲ್ಲಿ ಸುಳಿಯುತ್ತಿದ್ದ ವಿಚಾರಲಹರಿಗೆ ಚಿನ್ನಪ್ಪ ಇಂಬುಗೊಟ್ಟಂತಾಯಿತು.

"ಸುದರ್ಶನರ ವಿಷಯ ಬೇಗ ಇತ್ಯರ್ಥ ಮಾಡಿಬಿಡಬೇಕು, ಚಿನ್ನಪ್ಪ ನವರೇ. ನಾವು ಇನ್ನು ಬರವಣಿಗೆ ಕೆಲಸ ಆರಂಭಿಸಬೇಕು."

"ಅವರು ಏನಾದರೂ ಹೇಳಿದರೇನು?

"ಸ್ವಲ್ಪ ತೊಂದರೆಯಲ್ಲಿ ಇರುವ ಹಾಗೆ ಕಾಣುತ್ತದೆ – ಕಾಂಟ್ರ್ಯಾಕ್ಟ್ ಮಾಡಿಕೊಟ್ಟು ಸ್ವಲ್ಪ ಮುಂಗಡ ಹಣಕೊಟ್ಟರೆ ಅವರೂ ಏಕಾಗ್ರಚಿತ್ತದಿಂದ ಕೆಲಸಕ್ಕೆ ಕೂಡುತ್ತಾರೆ."

"ಕೆಲಸ ಆರಂಭಿಸಿ ಬಿಡಿ. ನಾನು ಕಾಂಟ್ರ್ಯಾಕ್ಟ್ ಒಂದೆರಡು ದಿನ ಗಳಲ್ಲಿ ಮಾಡಿಸಿಬಿಡುತ್ತೇನೆ. ಶನಿವಾರ ಕಛೇರಿಯಲ್ಲಿ ಎಲ್ಲರೂ ಸೇರಿ ಚಿತ್ರದ ಕೆಲಸದ ಕಾರ್ಯಕ್ರಮ ನಿರ್ಧರಿಸುವುದೆಂದು ಸಾಹುಕಾರರು ಹೇಳಿದ್ದಾರೆ."

ಶನಿವಾರ ಸೇರಿದ ಕಾರ್ಯಕಾರಿ ಸಮಿತಿಯ ಅಧ್ಯಕ್ಷತೆಯನ್ನು ಸಾಹು ಕಾರರು ವಹಿಸಿದರು. ಚಿನ್ನಪ್ಪ, ಮುರುಗೆಯ್ಯ, ಮಹಾದೇವಯ್ಯ, ಭೂಪೆನ್ ಬಾಬು, ಶಿವಾನಂದ, ಸುದರ್ಶನ ಅದರ ಸದಸ್ಯರಾದರು.

"ಏನೇನಾಗಬೇಕು ಒಂದೊಂದಾಗಿ ಹೇಳು ಚಿನ್ನಪ್ಪ"

ಎಂದು ಸಾಹುಕಾರರು ಸೂಚಿಸಿದರು.

"ಮೊದಲನೆಯ ಸೆಟ್ಟು ದಶರಥನ ಅಂತಃಪುರ. ಅದರ ವಿಷಯವನ್ನೆಲ್ಲಾ ಡೈರೆಕ್ಟರು ಬರೆದು ತಿಳಿಸಿದ್ದಾರೆ. ಸ್ಟೂಡಿಯೋದವರು ಸೆಟ್ಟು ಪೂರೈಸುವುದರೊಳ ಗಾಗಿ ನಾವು ಮದರಾಸಿಗೆ ಹೋಗಿ ಕೆಲಸ ಆರಂಭಿಸಲು ಸಿದ್ಧರಾಗಬೇಕು."

" ನಾಟಕಾನೇ ಸಿದ್ಧವಾಗಿಲ್ಲ."

" ಒಂದು ವಾರದಲ್ಲಿ ಪೂರೈಸುವುದಾಗಿ ಸುದರ್ಶನರು ಹೇಳಿದ್ದಾರೆ."

" ನಾವು ಚಿತ್ರ ಆರಂಭಿಸುವ ದಿನ ನಿಶ್ಚಯಿಸಿ ಸ್ಟೂಡಿಯೋದವರಿಗೆ ತಿಳಿಸ ಬೇಕು. ಆ ದಿನ 'ಮುಹೂರ್ತ' ಇಟ್ಟುಕೊಂಡು ಊರಿನ ಗಣ್ಯ ಮಹನೀಯ ರನ್ನು ಮಹಿಳೆಯರನ್ನು ಕರೆದು ಪಾರ್ಟಿ ಕೊಡಬೇಕಾಗುತ್ತದೆ."

" ಖರ್ಚಿನ ಬಾಬ್ತಾಯಿತಲ್ಲೋ ಚಿನ್ನಪ್ಪ."

" ಅದು ಸ್ಟೂಡಿಯೋ ಸಂಪ್ರದಾಯ ಸ್ವಾಮಿ. ನಮಗೆ ಒಳ್ಳೆ ಪಬ್ಲಿ ಸಿಟಿ ಸಿಕ್ಕುತ್ತೆ."

" ಆಗಲಿ ಇಟ್ಟುಕೊಳ್ಳಪ್ಪ."

" ಇನ್ನು ಮದರಾಸಿನಲ್ಲಿ ನಮ್ಮ ಕಛೇರಿ ವ್ಯವಸ್ಥೆ."

" ಆಫೀಸು ಮುರಿಗೆಯ್ಯ ನೋಡಿಕೋತಾನೆ. ನೀನು ಪಿಕ್ಚರ್ ಕೆಲಸ ನೋಡಿಕೋ."

" ಆರ್ಟಿಸ್ಟುಗಳ ವಿಷಯ."

" ಪಾರ್ಟುಗಳು ಯಾವ ಯಾವದಿದೆ ಹೇಳಿ ಸ್ವಾಮಿ."

ಎಂದು ಸಾಹುಕಾರರು ಕೇಳಲು ಸುದರ್ಶನರು ತಮ್ಮ ಫೈಲ್ ಬಿಚ್ಚಿ ಪಾತ್ರಗಳನ್ನು ಓದಿದರು.

" ಮೊದಲು ದಶರಥನ ಪಾತ್ರ. ಇದು ಬಹಳ ದೊಡ್ಡ ಪಾತ್ರ."

" ನಮ್ಮ ಕಂಪೆನೀಲಿ ರಾಜಾಪಾರ್ಟು ಮಾಡುತ್ತಿದ್ದನಲ್ಲಾ ಸಿದ್ದವೀರಪ್ಪ, ಅವನು ಎಲ್ಲವನೆ ಚಿನ್ನಪ್ಪ."

" ತಲಕಾಡಿನಲ್ಲಿದ್ದಾನೆ ಸ್ವಾಮಿ. ಒಂದು ಕಾರ್ಡು ಹಾಕಿದರೆ ಬರುತ್ತಾನೆ."

" ನಾಟಕದ ಹಳೇ ಆಕ್ಟರುಗಳು ಸಿನೀಮಾಕ್ಕೆ ಆಗುವುದಿಲ್ಲ ಸ್ವಾಮಿ. ನಾಟಕದಲ್ಲಿ ಮಾತನಾಡುವ ರೀತಿಗೂ ಸಿನೀಮಾದಲ್ಲಿ ಮಾತನಾಡುವ ರೀತಿಗೂ ತುಂಬ ವ್ಯತ್ಯಾಸವಿದೆ."

ಎಂದು ಸುದರ್ಶನರು ಎಚ್ಚರಕೊಟ್ಟರು.

" ಸಿದ್ದವೀರಪ್ಪ ತುಂಬ ಗಟ್ಟಿಗ ಸ್ವಾಮಿ. ಪಾರ್ಟು ಬಲೆ ಪಸಂದಾಗಿ ಮಾಡ್ತಾ ಇದ್ದ. ಆಳೂ ಸೈಂಧವ ಇದ್ದ ಹಾಗಿದ್ದಾನೆ. ದಶರಥನ ಪಾರ್ಟಿಗೆ ಒಪ್ಪುತ್ತಾನೆ."

" ಕೈಕೇಯಿ ಅಷ್ಟೇ ಮುಖ್ಯವಾದ ಪಾತ್ರ."

" ಅದನ್ನು ಸರೋಜಮ್ಮ ಮಾಡುತ್ತಾರೆ"

" ಎಂದು ಚಿನ್ನಪ್ಪ ಸೂಚಿಸಿದ.

" ಕೌಸಲ್ಯೆ."

" ಶಾಮಲಾಬಾಯಿ ಮಾಡಲಿ "

ಎಂದು ಸಾಹುಕಾರರು ಹೇಳಿದರು.

ಇನ್ನುಳಿದ ಪಾತ್ರಗಳಲ್ಲಿ ಸುಮಿತ್ರೆಯನ್ನು ಚೂಡಾಮಣಿ, ಸೀತೆಯನ್ನು ಪಾರ್ವತಿ ಮಾಡುವುದೆಂದೂ, ರಾಮನ ಪಾತ್ರವನ್ನು ಮೇಲುಕೋಟೆ ಚಕ್ರವರ್ತಿ, ಲಕ್ಷ್ಮಣನ ಪಾತ್ರವನ್ನು ಪದ್ಮರಾಜು, ಭರತನ ಪಾತ್ರವನ್ನು ಶಿವಾನಂದರು, ಶತ್ರುಘ್ನನ ಪಾತ್ರವನ್ನು ಮಹಂತಯ್ಯ ಮಾಡುವುದೆಂದು ನಿಶ್ಚಯವಾಯಿತು. ಮಂಥರೆ, ಗುಹನ ಪಾತ್ರಗಳ ಬಗ್ಗೆ ಜಿಜ್ಞಾಸೆಯೆದ್ದಿತು.

ಮಂಥರೆ ಪಾತ್ರದ ಬಗ್ಗೆ ತಾವು ಸಾವಕಾಶವಾಗಿ ಸೂಚಿಸುವುದಾಗಿ ಭೂಪೆನ್ ಬಾಬು ಹೇಳಿದರು. ಗುಹನ ಪಾತ್ರದ ಬಗ್ಗೆ ಸಮಸ್ಯೆ ಏರ್ಪಟ್ಟಿತು. ಮುರಿಗೆಯ್ಯ ಸುಮ್ಮನೆ ಕುಳಿತಿದ್ದವನು ಧೈರ್ಯತಂದುಕೊಂಡು

" ನಮ್ಮ ಚಿನ್ನಪ್ಪ ಯಾಕೆ ಮಾಡಬಾರದು ಅಣ್ಣಾವರೇ. ಅಂಥ ಪಾಲ್ಟು ಮಾಡೋದರಲ್ಲಿ ಅವನು ಎತ್ತಿದ ಕೈ."

ಸಾಹುಕಾರರ ಮನಸ್ಸಿನ ಮೇಲೆ ಬೆಳಕು ಬಿತ್ತರಿಸಿದಂತಾಯಿತು.

" ಹೌದ್ಲೇ! ಮನೇಲಿ ಬೆಣ್ಣೆ ಮಡಕ್ಕೊಂಡು ತುಪ್ಪದ ಸಾಲಕ್ಕೆ ಓದರು ಅಂದಾಗೆ ಆಯ್ತು ನಮ್ಮ ಸಮಾಸಾರ. ನೀನೇ ಮಾಡಿಬುಡು ಚಿನ್ನಪ್ಪ."

"ನನಗೆ ಪುರಸತ್ತಿಲ್ಲಿರುತ್ತದೆ ಸಾಹುಕಾರರೇ. ಪ್ರೊಡಕ್ಷನ್, ಸ್ಟೂಡಿಯೋ ಎಲ್ಲಾ ನೋಡಿಕೊಂಡು, ಆರ್ಟಿಸ್ಟುಗಳ ಯೋಗಕ್ಷೇಮ ವಿಚಾರಿಸಿಕೊಂಡು ಪಾರ್ಟು ಮಾಡುವುದು ಸಾಧ್ಯವೇ?"

" ಒಪ್ಪಿಕೊಂಡು ಬಿಡಿ ಚಿನ್ನಪ್ಪನವರೇ. ನೀವು ಮಾಡಿದರೆ ಪಾರ್ಟು ಚೆನ್ನಾಗುತ್ತದೆ."

ಎಂದು ಶಿವಾನಂದ ಪಿರುಕಣಿ ಹೇಳಿದ. ಚಿನ್ನಪ್ಪ ಗೊಣಗುಟ್ಟಿಕೊಂಡು ಸಮ್ಮತಿ ಸೂಚಿಸಿದ.

ಸಮಿತಿಯ ಕಾರ್ಯಕಲಾಪ ಮುಗಿದಂತಾಯಿತು. ಸದಸ್ಯರು ಒಬ್ಬೊಬ್ಬರಾಗಿ ಎದ್ದರು. ಚಿನ್ನಪ್ಪ, ಭೂಪೆನ್ ಬಾಬು, ಸುದರ್ಶನರನ್ನು ಸಾಹುಕಾರರೇ ಉಳಿಸಿಕೊಂಡರು.

" ಮಹಾದೇವನ ವಿಷಯ ಏನಾದರೂ ನಿಶ್ಚಯ ಮಾಡಿಬಿಡಿ ಸ್ವಾಮಿ. ಮುರಿಗೆಯ್ಯ ಬೇಜಾರು ಮಾಡಿಕೊಳ್ಳುತ್ತಾನೆ."

ಅವನನ್ನು ಕಟ್ಟಿಕೊಂಡು ಏನು ಮಾಡೋದೋ ಚಿನ್ನಪ್ಪ.

" ಚಿತ್ರಕ್ಕೆ ಹಾಡು ಬರೆದುಕೊಡುವುದಕ್ಕೆ ಒಬ್ಬರು ಬೇಕಲ್ಲ ಸ್ವಾಮಿ. "

" ಮಾದೇವನ ಕೈಯಲ್ಲಿ ಆಗ್ತೈತಾ ? "

" ಎಂದು ಸಾಹುಕಾರರು ಸುದರ್ಶನರನ್ನು ಕೇಳಿದರು. ಅವರು ತಮ್ಮ ಮೇಲೆ ಯಾವ ಮಾತೂ ಬರದಂತೆ

" ಅವರ ವಿಷಯ ನನಗೇನೂ ಗೊತ್ತಿಲ್ಲ, ನಾನು ಹೇಗೆ ಹೇಳಲಿ. ಚಿನ್ನಪ್ಪನವರಿಗೆ ಒಪ್ಪಿಗೆಯಾಗಿದ್ದರೆ ಸರಿ."

" ಸಿನೀಮಾ ಹಾಡು ಮ್ಯೂಸಿಕ್ ಡೈರೆಕ್ಟರು ಹೇಳಿದ ಹಾಗೆ ಬರೆದು ಕೊಡುವುದು ತಾನೆ. ಅಷ್ಟು ಕೆಲಸ ಮಹಾದೇವ ಮಾಡಲಾರನೇ ? "

" ಹೂ – ಆಗಲಪ್ಪಾ. ನಿಂಗೇಕೆ ಮನಸ್ಸಿಗೆ ಕಿರಿಕಿರಿ. ಹಾಡು ಬರೆಯೋರಿಗೆ ಸಿನೀಮಾದಲ್ಲಿ ಎಷ್ಟು ಕೊಡ್ತಾರೆ ಸ್ವಾಮಿ."

ಎಂದು ಸಾಹುಕಾರರು ಭೂಪೇನ್ ಬಾಬುಗಳನ್ನು ಕೇಳಿದರು.

" ಹೀಗೇಯೆಂದು ನಿಖರವಾಗಿ ಹೇಳಲು ಸಾಧ್ಯವಿಲ್ಲ ಯಜಮಾನ್. ಸಾಧಾರಣ ಚಿತ್ರವಾದರೆ ಸಾವಿರ ರೂಪಾಯಿ ಕೊಡುತ್ತಾರೆ. ಪ್ರದೀಪರಂಥ ಪ್ರಸಿದ್ಧರ ಕೈಯಲ್ಲಿ ಬರೆಸಿದರೆ ಹಾಡಿಗೆ ಸಾವಿರ ರೂಪಾಯಿ ಕೊಡುತ್ತಾರೆ."

" ಸಾವಿರ ರೂಪಾಯಿ ಗೊತ್ತುಮಾಡಿಬಿಡು ಚಿನ್ನಪ್ಪ."

" ಹಾಡಿಗೆ ಸಾವಿರವೇ ಸ್ವಾಮಿ."

" ಹುಚ್ಚಾ ! ಮಾದೇವನ ಅಪ್ಪನ ಕಾಲದಿಂದ ಸಾವಿರ ರೂಪಾಯಿ ಕಂಡಿಲ್ಲ, ಹಾಡಿಗೆ ಸಾವಿರವೆಂದ್ರೆ ಕೇಳ್ದೋರು ನಕ್ಕಾರು. ಒಟ್ಟು ಸಾವಿರ. ಮುರಿಗೆಯ್ಯನ ಜತೇಲಿ ಆಫೀಸಿನಲ್ಲೂ ಕೆಲಸ ಮಾಡ್ಬೇಕೂಂತ ಏಳ್ಬೇಕು."

ಚಿನ್ನಪ್ಪ ಗೊಣಗುಟ್ಟಿಕೊಂಡೇ ಒಪ್ಪಿಕೊಂಡು,

" ಸುದರ್ಶನರ ವಿಷಯವನ್ನೂ ಇತ್ಯರ್ಥ ಮಾಡಿಬಿಡಿ ಸ್ವಾಮಿ."

ಎಂದ. ಸಾಹುಕಾರರು ಸುದರ್ಶನರ ಕಡೆ ತಿರುಗಿ ದೇಶಾವಾರದ ನಗೆ ಬೀರುತ್ತ

" ಏಳಿ ಸೋಮಿ – ನಿಮಗೇನು ಕೊಡ್ಬೇಕು."

" ನಾನು ಏನು ಹೇಳಲಿ ಸಾಹುಕಾರರೇ. ನೀವೇ ನಿಶ್ಚಯಿಸಿಬಿಡಿ."

" ಈ ಪಿಕ್ಚರ್ ನಿಮ್ಮದು. ಇದೊಂದು ಜಯ ಪಡೆದ್ರೆ ನಾನು ಒಂದಾಗುತ್ತಲೊಂದು ಪಿಕ್ಚರ್ ಮಾಡಿಕೊಂಡು ಓಗ್ತೇನೆ. ನೀವೂ ಬಾಬುಗಳೂ ಎಲ್ಲಾ ಪಿಕ್ಚರ್‌ಗಳಲ್ಲಿಯೂ ಇರಬೇಕು."

" ನನಗೂ ಈ ಕೆಲಸ ಮಾಡಬೇಕೆನ್ನುವ ಆಸೆಯಿದೆ. ಕನ್ನಡದಲ್ಲಿ ನಾಲ್ಕು ಒಳ್ಳೆಯ ಚಿತ್ರಗಳು ಬರಲಿ ಎಂದು ನಾನು ಉತ್ಸುಕನಾಗಿದ್ದೇನೆ."

" ಚೆನ್ನಾಗಿ ಮನಸ್ಸಿಟ್ಟು ನೀವೂ ಕೆಲಸ ಮಾಡಿ, ನಾವೂ ನಿಮ್ಮ ಯೋಗಕ್ಷೇಮ ನೋಡಿಕೊಳ್ತೇವೆ. ಏನು ಕೊಡ್ಬೇಕು ಹೇಳಿ. ವ್ಯವಹಾರದ ವಿಷ್ಯ ಖಂಡಿತವಾಗಿರಬೇಕು."

ಸುದರ್ಶನರು ಮಾತನಾಡಲಿಲ್ಲ. ಅವರು ಹೇಳಲಿ ಎಂದು ಸಾಹುಕಾರರು ಸುಮ್ಮನೆ ಕುಳಿತರು. ಈ ಬಿಕ್ಕಟ್ಟು ಪರಿಹರಿಸುವುದಕ್ಕೆ ಚಿನ್ನಪ್ಪ ಮುಂದುವರಿಯದೆ ವಿಧಿಯಿರಲಿಲ್ಲ.

" ಅವರು ಐದು ಸಾವಿರ ಕೇಳಿದರು ಸ್ವಾಮಿ. ನಾವು ಮೂರು ಸಾವಿರ ಹೇಳಿದೆವು."

" ಮೂರು ಸಾವಿರಕ್ಕಿಂತ ಇನ್ನೇನು ಸ್ವಾಮಿ."

ಎಂದು ಸಾಹುಕಾರರು ಸುದರ್ಶನರಿಗೆ ಸವಾಲು ಹಾಕಿದರು.

" ಇದು ಒಂದು ವರ್ಷದ ಕೆಲಸ. ಚಿತ್ರ ನಾಟಕ ರಚನೆಯಲ್ಲದೆ ಅದರ ಇಂಗ್ಲಿಷ್ ಅನುವಾದವೂ ನಾನು ಮಾಡಿಕೊಡಬೇಕಾಗಿದೆ. ನಟನಟಿಯರ ರಿಹರ್ಸಲ್ ನೋಡಿಕೊಂಡು ಅವರ ಬಾಯಲ್ಲಿ ಶುದ್ಧವಾದ ಭಾಷೆ ಹೊರಡುವಂತೆ ಮಾಡುವ ಕೆಲಸವೂ ನನ್ನದು. ಇವುಗಳ ಜತೆಗೆ ಸ್ಟೂಡಿಯೋ ಜನಗಳಿಗೆ ಚಿತ್ರದ ಪರಿಚಯ ಮಾಡಿಕೊಡುವ ಹೊಣೆಗಾರಿಕೆಯೂ ನನ್ನದು. ಉಳಿದವರು ದಿನಕ್ಕೆ ಎಂಟು ಗಂಟೆ ದುಡಿದರೆ ಸಾಕಾಗಿದೆ– ನನ್ನ ದುಡಿಮೆ ಅವರ ಮೂರರಷ್ಟಾಗುತ್ತದೆ. ಒಂದು ವರ್ಷಕಾಲ ನಾನು ನನ್ನ ಕೆಲಸಬಿಟ್ಟು ಚಿತ್ರಕ್ಕೆ ಕುಳಿತುಕೊಂಡರೆ ನನ್ನ ಪಥ ಹೇಗೆ ಸಾಕಬೇಕು. ಚಿತ್ರದ ಕೆಲಸವೂ ಮಾಡಿಕೊಟ್ಟು ನನ್ನ ಸಾಹಿತ್ಯ ಸೇವೆಯನ್ನು ಮುಂದುವರಿಸುತ್ತೇನೆನ್ನುವುದು ಆಗದ ಮಾತು. ನನ್ನ ಜೀವನ, ಸಾಹಿತ್ಯ ಎರಡನ್ನೂ ಈ ಚಿತ್ರದ ಸಲುವಾಗಿ ನಾನು ಒಂದು ವರ್ಷಕಾಲ ಬಲಿದಾನ ಮಾಡಬೇಕಾಗಿದೆ. ಈ ಕಾರಣಗಳಿಂದ ನಾನು ಕೇಳಿರುವುದು ತೀರ ಸ್ವಲ್ಪವೆಂದು ಹೇಳಿದರೆ ತಪ್ಪಾಗುವುದಿಲ್ಲ."

" ಕೊನೆಯ ಮಾತು ನಾನು ಹೇಳ್ಬಿಡ್ತೇನೆ. ನೀವು ಒಪ್ಕೊಂಡು ಬಿಡಬೇಕು ಸ್ವಾಮಿ. ನಿಮ್ಮ ಯೋಗ್ಯತೆಗೆ ಸರಿಯಾಗಿ ಕೊಡುವುದು ನಮ್ಮಿಂದ ಸಾಧ್ಯವೇ? ಈ ಚಿತ್ರಕೆಲ್ಸದಿಂದ ನಿಮಗೇನೂ ಬರಲಿಲ್ಲವೆಂತಾಲೆ ತಿಳ್ಕೊಂಡು ನೀವು ಕೆಲಸ ಮಾಡಿಕೊಡಬೇಕು. ನಾನೂ ಹೊಸದಾಗಿ ಇದಕ್ಕೆ ಕಾಲಿಟ್ಟಿದ್ದೀನಿ. ನಿಮ್ಮಂಥವರ ಸಹಾಯ ಇದೆ ಎನ್ನೋದೆ ನನ್ನ ಧೈರ್ಯ. ಡೈರೆಕ್ಟರಿಗೆ ನಮ್ಮ ಭಾಷೆ ತಿಳಿಯೋಕಿಲ್ಲ. ಅವರಿಗೆ ಎಲ್ಲಾ ಸರಿಯಾಗಿ ತಿಳಿಸ್ಕೊಂಡು ಕೆಲಸ ತೂಗಿಸೋ ಜವಾಬ್ದಾರಿ ನಿಮ್ದು. ನೀವು ನಮ್ಮವರಾಗಿ ಈ ಕೆಲಸ ಚಂದಾಗಿ ಮಾಡ್ಕೊಡಿ, ನಿಮ್ಮ ಮನಸ್ಗೆ ಸಂತೋಷ ಮಾಡೋದು ನಂಗೆ ಬುಟ್ಬುಬಿಡಿ."

ಭಾವನಾಪರರಾದ ಸುದರ್ಶನರು ಸಾಹುಕಾರರ ನಿವೇದನೆಗೆ ಮರು ಳಾದರು. ಯಾವ ಪ್ರತಿಫಲವನ್ನೂ ನಿರೀಕ್ಷಿಸದೆ ಕೆಲಸ ಮಾಡಿಕೊಡಬೇಕೆಂದು ಅವರ ಮನಸ್ಸಿಗೆ ಹೊಳೆಯಿತು. ಆದರೆ–ಅವರಿಗೂ ಸಂಸಾರ ಗಂಟು ಬಿದ್ದಿತ್ತು. ಸಾಹಿತ್ಯದಿಂದಲೇ ಅವರ ಸಮಸ್ತ ಖರ್ಚುವೆಚ್ಚವೂ ನಡೆಯ ಬೇಕಾಗಿತ್ತು. ಪ್ರಾಪಂಚಿಕ ಪರಿಸ್ಥಿತಿ ತಮ್ಮ ಪ್ರಗತಿಗೂ, ಉದಾತ್ತ ಭಾವ ನೆಗೂ ಅಡ್ಡಿ ಬರುತ್ತಿದ್ದುದಕ್ಕೆ ಸುದರ್ಶನರ ಮನಸ್ಸಿಗೆ ಅತೀವ ಯಾತನೆ ಯಾಯಿತು. ಹೊಟ್ಟೆಯ ಪಾಡನ್ನು ಮರೆತು ಮನಸ್ಸು ತುಂಬಿ ಬಂದಂತೆ ಸಾಹಿತ್ಯ, ಕಲಾ ಸೇವೆಯನ್ನು ಮಾಡಲು ಸಾಧ್ಯವಾಗುವುದಿಲ್ಲವಲ್ಲಾ ಎಂದು ವಿಷಾದಪಟ್ಟುಕೊಂಡರು. ತಮ್ಮೆಲ್ಲ ಸ್ಥಿತಿಗತಿಯನ್ನು ಅಳೆದು ತೂಗಿ

"ಹೇಳಿ ಸಾಹುಕಾರರೇ. ನೀವು ಏನು ಹೇಳಿದರೂ ಒಪ್ಪಿಕೊಳ್ಳು ತ್ತೀನೆ. ಅಲ್ಪ ಹಣಕ್ಕೋಸ್ಕರ ನಿಮ್ಮ ಚಿತ್ರದ ಕೆಲಸ ಕೆಡಬಾರದು."

"ಮೂರೂ ಬೇಡ, ಐದೂ ಬೇಡ–ನಾಲ್ಕು ಸಾವಿರಕ್ಕೆ ಒಪ್ಪಿಕೊಂಡು ಬಿಡಿ ಸ್ವಾಮಿ. ಮದರಾಸಿನ ನಮ್ಮ ಕ್ಯಾಂಪ್ ಮನೆಯಲ್ಲಿ ನಿಮಗೆ ರೂಮು ಬಿಡಿಸಿಕೊಡ್ತೇನೆ ನಿಶ್ಚಿಂತೆಯಿಂದ ನಿಮ್ಮ ಕೆಲಸ ಮಾಡಿಕೊಳ್ಳಿ."

ಸುದರ್ಶನರು ಮರುಮಾತಾಡದೆ ಸಾಹುಕಾರರ ಸಲಹೆಯನ್ನಂಗೀಕರಿ ಸಿದರು. ಅವರಿಗೆ ಐದು ನೂರು ರೂಪಾಯಿ ಅಡ್ವಾನ್ಸ್ ಕೊಡುವಂತೆ ಚಿನ್ನಪ್ಪನಿಗೆ ಸಾಹುಕಾರರು ಸೂಚಿಸಿದರು.

ಸಾಹುಕಾರರ ಮನಸ್ಸಿನಲ್ಲಿ ಕುತೂಹಲ ಕೊರೆಯುತ್ತಿತ್ತು. ಭೂಪೇನ್ ಬಾಬುಗಳ ಕಡೆ ತಿರುಗಿ

"ಮಂಥರೆ ಪಾರ್ಟಿಗೆ ನಾನು ಯೋಚ್ನೆ ಮಾಡಿವ್ನಿ ಎಂದರಲ್ಲಾ ಬಾಬು –ಯಾರನ್ನ ಯೋಚ್ನೆ ಮಾಡಿದ್ರಿ ?"

"ಎಲ್ಲರೆದುರಿಗೂ ಆ ಮಾತು ಬೇಡವೆಂದು ಸುಮ್ಮನಿದ್ದೆ ಸಾಹುಕಾರ್‌ಜೀ. ನಮ್ಮ ಸ್ಟಾರ್ ಸರೋಜಾದೇವಿಯವರ ತಾಯಿಯವರನ್ನು ನೋಡಿದೆ. ಅವ ರಿಗೆ ಒಳ್ಳೆಯ ವ್ಯಕ್ತಿತ್ವ (Personality) ಇದೆ–ಧ್ವನಿಯಲ್ಲಿ ಗಾಂಭೀರ್ಯ ವಿದೆ. ಅವರನ್ನು ಒಪ್ಪಿಸಿದರೆ ಈ ಪಾರ್ಟು ಬಹಳ ಚೆನ್ನಾಗುತ್ತದೆಂದು ಕಾಣುತ್ತದೆ."

ಎಂದು ಹೇಳಿದರು. ಚಿನ್ನಪ್ಪ ಬಾಬುಗಳ ವ್ಯವಹಾರ ಕೌಶಲ್ಯ ಕಂಡು ಬೆಕ್ಕಸ ಬೆರಗಾದ, ಹೊಸದಾಗಿ ಬಂದ ಈ ಮನುಷ್ಯ ತುರುಫ್ ಹೊಡೆದು ಬಿಟ್ಟ ಎಂದು ಭಾವಿಸಿದ.

ಸಾಹುಕಾರರು ಮನಸ್ಸಿನಲ್ಲಿಯೇ ಗುಣಾಕಾರ ಹಾಕಿಕೊಂಡರು. ಭಾಗ್ಯಮ್ಮ ಒಪ್ಪಿಕೊಂಡು ಮಂಥರೆ ಪಾರ್ಟ್ ಮಾಡಿದರೆ ಖರ್ಚೂ ಮಿಕ್ಕ ಹಾಗಾಯಿತು. ಅವಳ ಮೇಲೆ ಒಂದು ಹೇಸಾನು ಹೊರೆಸಿದ ಹಾಗೂ ಆಯಿತು. ಡೈರೆಕ್ಟರ್ ಪರವಾಯಿಲ್ಲ, ಮನುಷ್ಯನಿಗೆ ತಲೆಯಿದೆ ಎಂದು ಸಂತೋಷಪಟ್ಟುಕೊಂಡು

"ಅವರ್ನ ಕೇಳಿ ನೋಡ್ಬೇಕು ಸ್ವಾಮಿ. ಅವರು ಒಪ್ಪಿದ್ರೆ ಸರಿ– ಇಲ್ದಿದ್ರೆ ಬೇರೆಯವರನ್ನು ತಲಾಷ್ ಮಾಡ್ಬೇಕು. ಅದೂ ಅಲ್ಲದೆ ಯಾವಾಗಲೂ ಪಾರ್ಟ್‌ಮಾಡಿ ಅವರಿಗೆ ಅಭ್ಯಾಸವಿಲ್ಲ."

"ಚಿತ್ರ ಕೆಲಸಕ್ಕೆ ಅನುಭವವಿರುವವರಿಗಿಂತ ಅನುಭವವಿಲ್ಲದೆ ಇರುವವರಿಂದ ಹೆಚ್ಚಿನ ಸೇವೆಯಾಗುತ್ತದೆ ಸಾಹುಕಾರ್‌ಜೀ. ಏನೂ ಬರದೇ ಇರುವವರ ಕೈಯಿಂದ ನಾವು ಬೇಕಾದ ಕೆಲಸ ಮಾಡಿಸಿಕೊಳ್ಳಬಹುದು. ನಾಟಕದಲ್ಲಿ ಪಾರ್ಟ್‌ಮಾಡಿ ಕೈ, ಕಾಲು, ಮೂತಿ ತಿರುಗಿಸುವವರ ಕೈಯಿಂದ ಪಾರ್ಟ್ ಮಾಡಿಸುವುದು ಕಷ್ಟ. ಚಿತ್ರಗೆಲಸಕ್ಕೆ ಬೇಕಾದುದೆಲ್ಲಾ ಕ್ಯಾಮರಾಗೆ ಹೊಂದಿಕೆಯಾಗುವ ಮುಖ, ದೇಹಲಕ್ಷಣ; ರಿಕಾರ್ಡಿಂಗಿಗೆ ಅನುಕೂಲವಾಗುವ ಧ್ವನಿ – ಇಷ್ಟಿದ್ದರೆ ಸಾಕು."

"ಆಗಲಿ– ಅವರನ್ನೇ ಒಪ್ಪಿಸೋದಕ್ಕೆ ಪ್ರಯತ್ನಿಸುತ್ತೇನೆ– ಸ್ವಾಮಿ, ನೀವು ಬರೆವಣಿಗೆಗೆ ಇವತ್ತೇ ಶ್ರೀಕಾರ ಹಾಕಿಬಿಡಿ. ಸ್ಥಿರವಾರ– ಚೆನ್ನಾಗಿದೆ."

"ಶ್ರೀಕಾರ ಹಾಕುತ್ತೇನೆ ಸಾಹುಕಾರರೇ. ಬಾಬುಗಳು ಒಪ್ಪುವ ಹಾಗಿದ್ದರೆ ನಾನು ನಿಯೋಜಿಸಿಕೊಂಡಿರುವಂತೆ ಕಾರ್ಯ ನಿರ್ವಹಿಸುತ್ತೇನೆ."

"ಹೇಳಿ ಸುದರ್ಶನ್‌ಜೀ."

"ನನಗೆ ಒಂದು ವಾರ– ಅಥವಾ ಹತ್ತು ದಿವಸ ವಿರಾಮ ಕೊಟ್ಟುಬಿಡಿ. ನಾನು ಬೆಂಗಳೂರು ಬಿಟ್ಟು ಬೇರೆ ಕಡೆಗೆ ಹೋಗುತ್ತೇನೆ. ಇಲ್ಲಿನ ಗಡಿಬಿಡಿ – ಬರುವವರು ಹೋಗುವವರು– ಈ ಗಲಾಟೆಯಲ್ಲಿ ಚಿತ್ತಶುದ್ಧಿಯಿಂದ ಕೆಲಸ ಮಾಡುವುದಕ್ಕಾಗುವುದಿಲ್ಲ."

"ಬಹಳ ದೂರಹೋಗುವಿರೇನು?"

"ಇಲ್ಲ. ಮಾಗಡಿಗೆ ಹೋಗುತ್ತೇನೆ. ಅಲ್ಲಿ ನನ್ನ ಗುರುಗಳು ಇದ್ದಾರೆ. 'ಶ್ರೀರಾಮ ಪಾದುಕಾ ಪಟ್ಟಾಭಿಷೇಕ' ಬರೆಯುವುದು ಬಹಳ ಜವಾಬ್ದಾರಿ ಕೆಲಸ. ನಾನು ಮಾಗಡಿಯಲ್ಲಿ ಕುಳಿತುಕೊಂಡು, ನನ್ನ ಗುರುಗಳ ಸಹಾಯವನ್ನು ತೆಗೆದುಕೊಂಡು ಕಥೆ ಮುಗಿಸಿ, ಸಂಭಾಷಣೆಗಳನ್ನು ಸಿದ್ಧಗೊಳಿಸಿಕೊಂಡು ಇಲ್ಲಿಗೆ ಬರುತ್ತೇನೆ."

"ಅನುವಾದ?"

"ಅದನ್ನೂ ಸಿದ್ಧಗೊಳಿಸುತ್ತೇನೆ."

"ಅದು ಟೈಪಾಗಿಯೇ ಬಂದರೆ ಒಳ್ಳೆಯದು."

"ನೀವು ಯೋಚನೆ ಮಾಡಬೇಡಿ ಬಾಬು. ನನ್ನ ಹತ್ತಿರ ಹಳೆಯ ಕೊರೋನಾ ಪೋರ್ಟಬಲ್ ಟೈಪ್‌ರೈಟರ್ ಇದೆ. ನಾನೇ ಟೈಪು ಮಾಡಿ ನಿಮಗೆ ತಂದು ಕೊಡುತ್ತೇನೆ. ಚಿತ್ರ ನಾಟಕ ಕೈಯಲ್ಲಿಟ್ಟುಕೊಂಡು ಭೂಪೆನ್ ಬಾಬುಗಳು ಅದನ್ನು ಸಿನೀಮಾ ತಂತ್ರಕ್ಕೆ ಅಳವಡಿಸಿಕೊಳ್ಳಲಿ. ಅವರ ಸಲಹೆಯಂತೆ ನಾನು ನಾಟಕವನ್ನು ಪರಿಷ್ಕರಿಸಿ, ಷೂಟಿಂಗಿಗೆ ಅನುಕೂಲ ಮಾಡಿಕೊಡುತ್ತೇನೆ."

"ಬಹಳ ಸೊಗಸಾದ ಯೋಜನೆ. ಹಾಗೇ ಮಾಡಿ ಸುದರ್ಶನ್‌ಜೀ"

ಎಂದು ಭೂಪೆನ್ ಬಾಬು ತಿಳಿಸಿದರು. ಸಾಹುಕಾರರೂ ಚಿನ್ನಪ್ಪ ಇಬ್ಬರೂ ಸುದರ್ಶನರ ಸಲಹೆಯನ್ನಂಗೀಕರಿಸಿದರು.

"ನಿಮ್ಮ ಗುರುಗಳು ಎಂದು ಹೇಳಿದಿರಲ್ಲಾ. ಅವರು ಯಾರು ಸ್ವಾಮಿ."

ಎಂದು ಸಾಹುಕಾರರು ಕುತೂಹಲದಿಂದ ಕೇಳಿದರು.

"ಅವರೇನು ಪ್ರಖ್ಯಾತರಲ್ಲ."

"ಶಿಷ್ಯರು, ನೀವು ಪ್ರಖ್ಯಾತರಾಗಿರುವುದರಿಂದ ಗುರುಗಳು ಪ್ರಖ್ಯಾತ ರಾದ ಹಂಗೇ ಆಯ್ತು."

"ಅವರಲ್ಲಿ ನಾನೆಲ್ಲಿ? ಹಿಮಾಲಯದ ಮುಂದೆ ಗುಂಡುಕಲ್ಲು ಇದ್ದ ಹಾಗೆ!"

"ಯಾರು ಸ್ವಾಮಿ ಅವರು?"

"ಹಳ್ಳಿ ಸ್ಕೂಲು ಮೇಸ್ಟರು. ಎ. ವಿ. ಸ್ಕೂಲಿನಲ್ಲಿ ಪಂಡಿತರಾಗಿದ್ದರು. ಈಗ ನಿವೃತ್ತರಾಗಿದ್ದಾರೆ. ನಾನು ಬಾಲ್ಯವನ್ನು ಮಾಗಡಿಯಲ್ಲಿ ಕಳೆದೆ. ಅವರೇ ನನಗೂ ಉಪಾಧ್ಯಾಯರಾಗಿದ್ದರು. ಕನ್ನಡ ಸಾಹಿತ್ಯದ ರುಚಿ ನನಗೆ ತೋರಿಸಿದವರು ಅವರೇ. ಪಂಪನ ಕಾವ್ಯದಿಂದ, ಮುದ್ದಣನ ಕಾವ್ಯದ ವರೆಗೆ ನಮ್ಮ ಗುರುಗಳಿಗೆ ಕರತಲಾಮಲಕ. ಕಾವ್ಯ ಸೌಂದರ್ಯ ಅವರು ವರ್ಣಿಸುತ್ತಾ ಕುಳಿತರೆ ಅವರೂ ಮೈಮರೆತುಬಿಡುತ್ತಾರೆ–ನಮ್ಮನ್ನೂ ಮೈ ಮರೆಸಿಬಿಡುತ್ತಾರೆ–ರಾಮಾಯಣ, ಭಾರತಗಳ ಮೂಲೆಮೂಲೆಗಳನ್ನೂ ಶಾಸ್ತ್ರಿಗಳು ಬಲ್ಲರು."

"ಇಂಥ ವಿದ್ವಾಂಸರು ಬೆಂಗಳೂರು ಮೈಸೂರಿನಲ್ಲಿದ್ದು ಅರಮನೆ ಪಂಡಿತರಾಗೋದು ಬಿಟ್ಟುಬಿಟ್ಟು ಹಳ್ಳಿಯಲ್ಲೇ ಇದ್ದಾರಲ್ಲಾ!"

" ಅದು ಅವರ ಸ್ವತಂತ್ರ ಮನೋವೃತ್ತಿಯ ಪ್ರಭಾವ. ನಾನೂ ಒಂದು ಸಲ ಗುರುಗಳನ್ನೂ ಇದೇ ಮಾತು ಕೇಳಿದೆ, ಎಂತೆಂಥವರು ಅರಮನೆ ಪಂಡಿತರಾಗುತ್ತಿದ್ದಾರೆ, ಪಂಡಿತರತ್ನರಾಗುತ್ತಿದ್ದಾರೆ – ನೀವು ಸ್ವಲ್ಪ ಪ್ರಯತ್ನಪಟ್ಟರೆ ನಿಮಗೂ ಆ ಸ್ಥಾನ ಖಂಡಿತ ಸಿಕ್ಕುತ್ತದೆ. ನನಗೆ ಅಪ್ಪಣೆ ಕೊಡಿ, ನಾನು ನಿಮ್ಮ ಪರವಾಗಿ ಪ್ರಯತ್ನ ಮಾಡುತ್ತೇನೆ ಎಂದು ಹೇಳಿದೆ. ಶಾಸ್ತ್ರಿಗಳು ಅದಕ್ಕೆ ಕೊಟ್ಟ ಉತ್ತರ ನನ್ನ ಚಿತ್ತಭಿತ್ತಿಯ ಮೇಲೆ ಅಚ್ಚೊತ್ತಿದಂತಾಗಿದೆ– 'ಮಗೂ, ತಾಯಿ ಸರಸ್ವತಿ, ನನ್ನ ಯಾವ ಜನ್ಮದ ಪುಣ್ಯವಿಶೇಷದಿಂದಲೋ ಬಂದು ನನ್ನಲ್ಲಿ ನೆಲಸಿದ್ದಾಳೆ. ನನ್ನ ಅಂತರಂಗದಲ್ಲಿ ಜಿಹ್ವೆಯಲ್ಲಿ ಆಕೆ ನರ್ತಿಸುತ್ತಿದ್ದಾಳೆ. ಆ ತಾಯಿಯ ದೇವಸ್ಥಾನ ಈ ದೇಹ. ಇದನ್ನು ಕುಗ್ಗಿಸಿಕೊಂಡು ಕಂಡವರ ಕಾಲಿನ ಮೇಲೆ ಬಿದ್ದು ನನಗೆ ಹಣಕೊಡಿ, ಕೀರ್ತಿಕೊಡಿ ಎಂದು ಬೇಡಲೆ? ಭಗವಂತ ಶ್ರೀ ರಾಮಚಂದ್ರನ ದಿವ್ಯಚರಿತ್ರೆ ಓದುವಾಗ, ಪುರುಷೋತ್ತಮ ಶ್ರೀಕೃಷ್ಣನ ದಿವ್ಯರೂಪವನ್ನು ಮನಸ್ಸಿನ ಕಣ್ಣುಗಳಿಂದ ನೋಡುವಾಗ ಆಗುವ ಆನಂದಕ್ಕೆ ಎಷ್ಟು ಕೀರ್ತಿ, ಎಷ್ಟು ಹಣ ಸಾಟಿಯಾದೀತು. ನನ್ನ ಬಡತನ ಶಾಶ್ವತವಾಗಿ ಉಳಿಯುವಂತೆ ಭಗವಂತ ನನ್ನನ್ನು ಅನುಗ್ರಹಿಸಿದರೆ ಸಾಕು' – ಎಂದರು."

" ಆ ಗುರುವಿಗೆ ತಕ್ಕ ಶಿಷ್ಯರು ಸ್ವಾಮಿ ನೀವು. ಆ ಕೆಚ್ಚು ನಿಮ್ಮಲ್ಲಿಯೂ ಇದೆ."

ಎಂದು ಚಿನ್ನಪ್ಪ ತನ್ನ ಮೆಚ್ಚುಗೆ ವ್ಯಕ್ತಪಡಿಸಿದ. ಸಾಹುಕಾರರಿಗೆ ಸುದರ್ಶನರು ಹೇಳಿದ ವಿಷಯ ಅತ್ಯಾಶ್ಚರ್ಯವನ್ನುಂಟುಮಾಡಿತು. 'ಇಂಥವರು ಈ ಪ್ರಪಂಚದಲ್ಲಿ ಇನ್ನೂ ಇದ್ದಾರೆಯೇ' ಎಂದು ವಿಚಾರಮಾಡಲಾರಂಭಿಸಿದರು.

## ೧೭

ಕಛೇರಿ ಬಿಟ್ಟೊಡನೆಯೇ ಸಾಹುಕಾರರು ನೇರವಾಗಿ ಭಾಗ್ಯಮ್ಮನ ಮನೆಯ ಕಡೆ ಹೊರಟರು.

ಭಾಗ್ಯಮ್ಮನ ಮನೆಯಲ್ಲಿ ಊಟ ಮುಗಿಸಿದ ಮೇಲೆ ಸರೋಜ ಮಡಿಸಿಕೊಡುತ್ತಿದ್ದ ತಾಂಬೂಲ ಸವಿಯುತ್ತ ಸಾಹುಕಾರರು

" ನಮ್ಮತ್ರೆ ಏನೋಂತಿದ್ದೆ, ಮಹಾಘಾಟಿ "

ಎಂದರು. ಸರೋಜ ಚಕಿತಳಾದಳು. 'ಇದೇನು ಬಂತು' ಎಂದು ಭಾಗ್ಯಮ್ಮನೂ ಬೆದರಿ,

" ಯಾಕೆ ಸ್ವಾಮಿ, ನಾನೇನು ಮಾಡಬಾರದ್ದು ಮಾಡಿದೆ."

" ಮಾಡಬಾರದ್ದೇನಲ್ಲ. ಮಾಡಬೇಕಾದ್ದೇ ಮಾಡಿದೆ. ನಮ್ಮ ಡೈರೆಕ್ಟರನ್ನು ಮೆಲ್ಲಗೆ ಗೋಲ್‌ಮಾಲ್ ಮಾಡಿ ಬುಟ್ಟಿಗೆ ಹಾಕ್ಕೊಂಡುಬಿಟ್ಟೆ."

" ನೀವು ಹೇಳುವುದು ನನಗೆ ಅರ್ಥವೇ ಆಗಲ್ಲವಲ್ಲಾ ಸಾಹುಕಾರರೇ. ನಾನು ಅವರ ಮುಖ ನೋಡಿರುವುದು ಒಂದೇ ಸಾರಿ– ಅದೂ ಅವರು ನಮ್ಮ ಮನೆಗೆ ತಿಂಡಿಗೆ ಬಂದಿದ್ದಾಗ."

" ಅಷ್ಟೇ ಸಾಕು."

" ಸುಮ್ಮನಿರಿ ಸ್ವಾಮಿ. ನಿಮ್ಮ ಮಾತು ಕೇಳಿದ ಯಾರಾದರೂ ಇವಳು ಡೈರೆಕ್ಟರನ್ನು ಕೈಹಿಡಿದು ಲಗ್ನವಾದಳೇನೋ ಎಂದು ತಿಳಿದುಕೊಳ್ಳುತ್ತಾರೆ."

" ಕೊಂಚ ವಯಸ್ಸು ಕಡಿಮೆಯಿದ್ದಿದ್ರೆ ಅದನ್ನೂ ಮಾಡದೆ ನೀನು ಬಿಡುತ್ತಿದ್ದೆಯಾ ಪುಣ್ಯಾತ್ಗಿತ್ತಿ."

ಎಂದು ಸಾಹುಕಾರರು ನಕ್ಕರು. ತಾಯಿ ಮಗಳೂ ಅವರ ನಗೆಯ ಹೊನಲಿನಲ್ಲಿ ಬೆರೆತರು.

" ಅಮ್ಮ ಏನು ಮಾಡಿದಳು ಸ್ವಾಮಿ "

ಎಂದು ಸರೋಜ ಕೊಂಕುತ್ತ ಕೇಳಿದಳು.

" ಇವತ್ತು ಕಂಪೆನೀಲಿ ಪಿಕ್ಚರಿನ ಪಾರ್ಟು ಲೀಸ್ಟು ಹಾಕಿದೆವು."

" ಯಾರು ಯಾರಿಗೆ ಯಾವ ಯಾವ ಪಾರ್ಟು ? "

" ನಿನ್ನ ಕೈಯಲ್ಲೇ ಕೈಕೆ ಪಾರ್ಟು ಮಾಡಿಸ್ತೀನಿ ಸುಮ್ಕಿರು ಚಿನ್ನಾ–ಗಾಬರಿಯಾಗಬೇಡ."

ಸರೋಜನ ಮನಸ್ಸಿಗಾದ ಆನಂದ ಅವಳ ಮುಖದಲ್ಲಿ ಹೊರಹೊಮ್ಮಿ ಅದಕ್ಕೆ ನರುಗೆಂಪೇರಿಸಿತು."

" ಮಂಥರೆ ಪಾರ್ಟಿನ ವಿಷ್ಯ ಬಂತು. ಯಾರಕೈಲಿ ಮಾಡ್ಸೋದು ಎಂತಾ ನಾವೆಲ್ಲಾ ತಲೆ ಕೆರಕೊಂತ ಕುಂತೆವು. ಡೈರೆಕ್ಟರು ಮೋಗಂ ಆಗಿ 'ಆ ವಿಷಯ ಆಮ್ಯಾಕೆ ಆಗಲಿ' ಎಂದರು. ಎಲ್ಲರೂ ಹ್ವಾದ ಮ್ಯಾಕೆ ಡೈರೆಕ್ಟರು 'ಸರೋಜಮ್ಮನ ತಾಯಿ ಕೈಲಿ ಮಾಡ್ಸಿದರೆ ಚಂದಾಕೆ ಆಗ್ತೈತೆ ಸಾಹುಕಾರರೇ' ಎಂದರು.

ತನ್ನ ಪಾಲಿಗೆ ಅನಿರೀಕ್ಷಿತವಾಗಿ ಬರುತ್ತಿದ್ದ ಭಾಗ್ಯವಿಶೇಷವನ್ನು ಕಂಡು ಭಾಗ್ಯಮ್ಮ ಹಿರಿಹಿರಿ ಹಿಗ್ಗಿದಳು. ತನ್ನ ಸಂತೋಷ ವ್ಯಕ್ತಗೊಳಿಸದೆ ಬಿಗುಮಾನದಿಂದಲೇ

" ನಾನೊಲ್ಲೆ ಸಾಹುಕಾರರೇ. ಪಾರ್ಟೆ ಗೀರ್ಟೆ ನಾನು ಮಾಡುವುದಿಲ್ಲ. ಸಾಯೋ ಕಡೆಗಾಲದಲ್ಲಿ ನನಗ್ಯಾಕೆ ಈ ತಾಪತ್ರಯ."

" ನಾನು ಪಿಕ್ಚರ್ ಮಾಡೋಕೆ ಹೊಂಟಿದ್ದೇ ನೀನೂ ಚಿನ್ನಪ್ಪ ಹೇಳಿದ್ದ ರಿಂದ – ನಮ್ಮ ಸರೋಜನಿಗೆ ಸಂತೋಸ ಮಾಡಬೇಕೂಂತ. ಅವಳಮ್ಮ ನಿಂಗೇ ಬೇಡದಿದ್ರೆ ಹೋಗಲಿ ಬಿಡು – ಗೋಪಾಳದ್ದು ಹತ್ತಿಪ್ಪತ್ತು ಸಾವಿರ ಖರ್ಚಾಗಿದೆ – ಓದರೆ ಓಯಿತು. ಪಿಕ್ಚರ್ ನಿಲ್ಲಿಸಿಬಿಡ್ತೇನೆ."

ಸರೋಜ ಗಾಬರಿಯಾದಳು. ತಾಯಿಯ ಬಳಿ ಬಂದು ದೈನ್ಯದಿಂದ

" ಮಾಡ್ತೀನಿ ಎಂತಾ ಹೇಳಮ್ಮ ಸಾಹುಕಾರರ ಮನಸ್ಸಿಗೆ ಬೇಜಾರು ಮಾಡಬಾರದು. ನೀನು ಒಲ್ಲೆಯೆಂದರೆ ಅವರು ಪಿಕ್ಚರೇ ಮಾಡೋದಿಲ್ಲವಂತೆ!"

ಭಾಗ್ಯಮ್ಮ ಸಾಹುಕಾರರ ಕಡೆ ಕೃಪಾಕಟಾಕ್ಷ ಬೀರಿ

" ಆಗಲಿ. ಇದೊಂದು ಕಿತ ಮಾಡಿಬಿಡ್ತೇನೆ. ನನ್ನ ಪಾರ್ಟು ಕೆಟ್ಟು ಹೋದರೆ ನನ್ನ ಬಯ್ಯಬೇಡಿ."

" ಅದರ ಜವಾಬ್ದಾರಿ ಡೈರೆಕ್ಟರು ತೊಗೊಂಡವ್ರೆ ಬುಡು – ನಮಗೇನು ಭಯ."

ಎಂದು ಸಾಹುಕಾರರು ಹೇಳಿದರು.

ಸರೋಜ ಬಿಡಿಸಿಬಿಡಿಸಿ ಪಾತ್ರ ವಿವರ ತಿಳಿದುಕೊಂಡಳು. ಭಾಗ್ಯಮ್ಮ ನಸುನಗುತ್ತಾ

" ಎಲ್ಲಾ ಮನೇಯವರೇ ಆದಂಗೆ ಆಯ್ತು."

ಎಂದಳು.

ಸುದರ್ಶನರು ಕಥಾನಾಟಕ ಸಿದ್ಧಗೊಳಿಸುವುದಕ್ಕೆ ಮಾಗಡಿಗೆ ಹೋಗುವ ವಿಷಯ ಕೇಳಿ ತಾಯಿ ಮಗಳಿಬ್ಬರಿಗೂ ನೂರ್ಮಡಿ ಸಂತೋಷವಾಯಿತು.

ಸುದರ್ಶನರು ಸಾಹುಕಾರರಿಗೆ ತಿಳಿಸಿದಂತೆ ಮಾಗಡಿಗೆ ಪ್ರಯಾಣ ಬೆಳಸಿದರು. ಗುರುಗಳು ತಿಪ್ಪಾಶಾಸ್ತ್ರಿಗಳ ಮನೆಯಲ್ಲಿಯೇ ಬಿಡಾರವಾಯಿತು. ತಾವು ಬಂದಿದ್ದ ವಿಷಯ ಗುರುಗಳಲ್ಲಿ ನಿವೇದಿಸಿಕೊಂಡರು. ಶಾಸ್ತ್ರಿಗಳು ಸಾವಧಾನವಾಗಿ ಕೇಳಿ

" ಈ ಫಿಲ್ಮ್‌ಗಿಲ್ಮ್ ವಿಷಯ ನನಗೇನೂ ಗೊತ್ತಿಲ್ಲಪ್ಪ. ನಾನು ಹಳೆಯ ಕಾಲದ ಮನುಷ್ಯ. ನಾನು ಹೆಚ್ಚು ನಾಟಕಗಳನ್ನು ನೋಡಿದವನಲ್ಲ. ಆದರೆ ಶ್ರೀರಾಮ, ಜಗನ್ಮಾತೆ ಸೀತಾದೇವಿ, ಮಹಾತ್ಮಾ ಭರತ ಇಂಥವರನ್ನು ಸಿನೀಮಾಕ್ಕೆ ಎಳೆಯುವುದು ನ್ಯಾಯವೇ? ಬೆಳಿಗ್ಗೆಯಿಂದ ಸಂಜೆಯವರೆಗೆ ಚುಟ್ಟಾ ಸೇದಿಕೊಂಡು ಹೆಂಡ ಕುಡಿಯೋರೆಲ್ಲಾ ರಾಮ ಭರತರ ಪಾರ್ಟು ಮಾಡುತ್ತಾ ಬಂದರೆ ನಾವೇ ನಮ್ಮ ಪುರಾಣ ಪುಣ್ಯಕಥೆಗಳ ಗೌರವ ಕುಂದಿಸಿದ ಹಾಗೆ ಆಗುತದೆ."

"ನೀವು ಹೇಳುವುದು ನಿಜ ಶಾಸ್ತ್ರಿಗಳೇ. ನಮ್ಮ ಆಸ್ತಿಕ್ಯ, ಧರ್ಮಾಭಿಮಾನ ಬಹಳ ಟೊಳ್ಳಾಗಿದೆ ಎಂದು ನನಗೂ ಅನಿಸುತ್ತೆ, ಜರ್ಮನಿಯಲ್ಲಿ 'ಆಬೆರಾಮೆರಗೌ' ಎಂತಾ ಒಂದು ಹಳ್ಳಿಯಿದೆ. ಅಲ್ಲಿ ಹತ್ತು ವರ್ಷಕ್ಕೊಂದು ಸಾರಿ ಭಗವಾನ್ ಯೇಸು ಸ್ವಾಮಿಯ ಜೀವನವನ್ನು ನಾಟಕರೂಪವಾಗಿ ಆಡುತ್ತಾರೆ. ಆಬೆರಾಮೆರಗೌ ಹಳ್ಳಿಯವರು, ಸುತ್ತಮುತ್ತಲಿನ ಹತ್ತಾರು ಹಳ್ಳಿಯವರು ಆ ನಾಟಕದಲ್ಲಿ ಪ್ರತಿಫಲಾಪೇಕ್ಷೆಯಿಲ್ಲದೆ ಭಾಗವಹಿಸುತ್ತಾರೆ. ಆ ನಾಟಕದಲ್ಲಿ ಪಾತ್ರವಹಿಸುವುದು ತಮ್ಮ ಸುಕೃತ ವಿಶೇಷ ಎಂದು ಜರ್ಮನಿ ಜನ ಭಾವಿಸುತ್ತಾರೆ. ಪಾತ್ರಗಳ ಹಂಚಿಕೆ ಕೂಡ ಬಹಳ ಸ್ವಾರಸ್ಯವಾಗಿದೆ. ಯೇಸು ಸ್ವಾಮಿಯ ಪಾತ್ರ ಮಾಡುವವನು ಯೇಸುವಿನ ಹಾಗೆ ಬಡಗಿಯಾಗಿರಬೇಕು – ತುಂಬ ಶೀಲವಂತನಾಗಿರಬೇಕು. ಯೇಸು ಸ್ವಾಮಿಯ ಜೀವನದಂಥ ಪರಿಶುದ್ಧ ಜೀವನ ನಡೆಸುವವನಿಗೇ ಆ ಪಾತ್ರ ಮೀಸಲು. ಹಾಗೇ ಮೇರಿ ತಾಯಿಯ ಪಾತ್ರ. ಹಳ್ಳಿಗಳ ಹಿರಿಯರ ಸಭೆ ಸೇರಿ ಎಲ್ಲ ಉಮೇದುವಾರರ ಗುಣ ಧರ್ಮಗಳನ್ನು ವಿಮರ್ಶಿಸಿ ಪಾತ್ರ ನಿಯೋಜಿಸುತ್ತಾರೆ. ಆ ಹಳ್ಳಿಗರ ಭಕ್ತಿಯ ಸೇವೆ ನೋಡುವುದಕ್ಕೆ ಇಂಗ್ಲೆಂಡ್, ಅಮೆರಿಕಾ, ಫ್ರಾನ್ಸ್ ದೇಶಗಳಿಂದ ಜನ ಹೋಗುತ್ತಾರೆ. ಅಮೇರಿಕಾದ ಒಂದು ಫಿಲಂ ಕಂಪೆನಿಯವರು, ಚಿತ್ರ ತೆಗೆಯಲು ಅನುಮತಿ ಕೇಳಿ ಹತ್ತು ಲಕ್ಷ ರೂಪಾಯಿ ಕೊಡಲು ಮುಂದಾದರು. ಆಬೆರಾಮೆರಗೌವಿನ ಬಡ ಹಳ್ಳಿಗರು 'ನಾವು ಭಗವಂತನ ಕೀರ್ತಿಕಥನವನ್ನು ಮಾರುವುದಿಲ್ಲ' ಎಂದು ನಿರಾಕರಿಸಿದರು."

ಶಾಸ್ತ್ರಿಗಳ ಕಣ್ಣುಗಳಲ್ಲಿ ನೀರು ಕೋಡಿ ಹರಿದಿತ್ತು.

"ಮಹಾನುಭಾವರಪ್ಪಾ. ನಿಜವಾದ ಧರ್ಮ, ತ್ಯಾಗ ಅಲ್ಲಿದೆ ನೋಡು."

"ನಾನೂ ಬಹಳ ಯೋಚನೆ ಮಾಡಿ ಈ ಚಿತ್ರಕ್ಕೆ ಸಹಕಾರ ನೀಡಲು ಒಪ್ಪಿಕೊಂಡೆ ಶಾಸ್ತ್ರಿಗಳೇ. ನಿಮಗೇ ತಿಳಿದಿರುವಂತೆ ಈಗ ನಮ್ಮ ಜನಕ್ಕೆ ಭಾರತ, ಭಾರತ ದರ್ಶನ, ಭಾರತದ ಪುರಾಣ ಪುಣ್ಯಕಥೆಗಳು ಎಂದರೆ ತಿರಸ್ಕಾರ ಬಂದುಬಿಟ್ಟಿದೆ. ಪ್ರತಿಯೊಂದಕ್ಕೂ ನಮ್ಮ ಜನ ಇಂಗ್ಲೆಂಡು, ಅಮೇರಿಕಾ, ರಷ್ಯಾ ಕಡೆ ನೋಡುತ್ತಿದ್ದಾರೆ. ನಮ್ಮ ಚಿತ್ತದಾಸ್ಯ ಹೀಗೆ ಬೆಳೆದರೆ ನಮ್ಮ ಗತಿಯೇನು? ಹೊರಗಿನವರಲ್ಲಿ ಇರುವ ಒಳ್ಳೆಯ ಗುಣಗಳನ್ನು ನಾವು ಅವಶ್ಯಕವಾಗಿ ಕಲಿತುಕೊಳ್ಳೋಣ. ಆದರೆ ನಮ್ಮ ಆತ್ಮಗೌರವವನ್ನು ತೂರಿಯಲ್ಲ! ರಾಮ, ಭರತ, ಹನುಮಂತ, ಕೃಷ್ಣ, ಧರ್ಮರಾಯ, ಭೀಷ್ಮ, ವಿದುರ ಇಂಥ ಮಹಾ ವ್ಯಕ್ತಿಗಳು ಯಾವ ದೇಶದ ಸಾಹಿತ್ಯದಲ್ಲಿ ನಮಗೆ

ದೊರೆಯುತ್ತಾರೆ. ನಮ್ಮ ಸಂಸ್ಕೃತಿಯ ಹೆಚ್ಚಳದ ಕಡೆಗೆ ನಮ್ಮ ಜನರ ಲಕ್ಷ್ಯ ಸೆಳೆಯಬೇಕಾದುದಗತ್ಯ. ಈ ಕೆಲಸ ಇಂದು ಸಿನೀಮಾ ಮಾಡುವ ಹಾಗೆ ಬೇರೆ ಯಾವ ಸಾಧನವೂ ಮಾಡಲಾರದು. ವಿಹಾರದ ಹಾದಿಯಲ್ಲಿ ಜನತೆಯ ಮನೋವಿಕಾಸಕ್ಕೆ ಸಿನೀಮಾ ಕಲೆಯನ್ನು ಉಪಯೋಗಿಸಿಕೊಳ್ಳಬಹುದು. ಪಂಡಿತ ಪಾಮರರು, ಸಹಸ್ರಾರು ಜನ ಸಿನೀಮಾ ನೋಡುತ್ತಾರೆ. ಅದರ ಉಪಯೋಗ ನಾವೇಕೆ ತೆಗೆದುಕೊಳ್ಳಬಾರದೆಂದು ಈ ಚಿತ್ರಕ್ಕೆ ನಾಟಕ ಬರೆದುಕೊಡಲು ಒಪ್ಪಿಕೊಂಡೆ."

"ಒಳ್ಳೆಯದರ ಜತೆಗೆ ಕೆಟ್ಟದ್ದು ಇದ್ದ ಹಾಗೆ ಕೆಟ್ಟದ್ದರ ಜತೆಗೆ ಒಳ್ಳೆಯದೂ ಇರುತ್ತದೆ."

"ಪ್ರಕೃತಿಯೇ ಅಂಥ ವ್ಯಾಪಾರ ನಡೆಸಿದೆ ಶಾಸ್ತ್ರಿಗಳೇ. ದುರ್ವಾಸನೆ ಹೊಡೆಯುವ ಗೊಬ್ಬರದ ನೆರವು ಪಡೆದೇ ಅಲ್ಲವೆ ಸೊಗಸಾದ ಮಲ್ಲಿಗೆ ಹೂ ಅರಳುವುದು."

"ಆಗಲಪ್ಪ. ದೇವರು ನಿನ್ನ ಪ್ರಯತ್ನಕ್ಕೆ ಒಳ್ಳೆಯದು ಮಾಡಲಿ. ನನ್ನಿಂದ ಏನಾಗಬೇಕು ಹೇಳು ಅವಶ್ಯಕವಾಗಿ ಮಾಡಿಕೊಡುತ್ತೇನೆ."

ಎಂದರು. ಸುದರ್ಶನರಿಗೆ ಬೇಕಾಗಿದ್ದುದೂ ಅಷ್ಟೇ – ಗುರುಗಳ ಆಶೀರ್ವಾದ.

ಸುದರ್ಶನರು ಶಾಸ್ತ್ರಿಗಳ ಮನೆಯಿಂದ ಅಲುಗಾಡಲಿಲ್ಲ. ಹಗಲೂ ರಾತ್ರಿ ಒಂದೇ ಸಮನಾಗಿ ಕುಳಿತು, ಶಾಸ್ತ್ರಿಗಳ ಪುಸ್ತಕ ಭಂಡಾರದ ಪೂರ್ಣ ಪ್ರಯೋಜನ ಪಡೆದುಕೊಂಡು 'ಶ್ರೀರಾಮ ಪಟ್ಟಾಭಿಷೇಕ'ದ ನಾಟಕ ಸಿದ್ಧಗೊಳಿಸಿದರು.

ಕಥೆಯನ್ನು ಶಾಸ್ತ್ರಿಗಳಿಗೆ ಓದಿದಾಗ ಅವರ ಶಿಷ್ಯನ ಸಾಮರ್ಥ್ಯವನ್ನು ಮನಸಾರೆ ಮೆಚ್ಚಿಗೊಂಡರು. ಲಕ್ಷ್ಮಣನ ಪಾತ್ರ ನಿರೂಪಣೆ, ಕೈಕಾದೇವಿಯ ಮಾನಸಿಕ ಪರಿವರ್ತನಗಳನ್ನು ವಿಪುಲವಾಗಿ ಚರ್ಚಿಸಿ ಅನೇಕ ಉಪಯುಕ್ತ ಸಲಹೆಗಳನ್ನಿತ್ತರು. ಸುದರ್ಶನರು ಗುರುಗಳ ಸಲಹೆಗಳನ್ನು ಭಕ್ತಿಯಿಂದ ಸ್ವೀಕರಿಸಿದರು. ಶಾಸ್ತ್ರಿಗಳು ಕಥೆಯ ಬೆಳವಳಿಗೆಯನ್ನು ವಿಮರ್ಶಿಸುತ್ತಾ

"ಭಾಸಕವಿ ತನ್ನ 'ಪ್ರತಿಮಾ ನಾಟಕ'ದಲ್ಲಿ ಒಂದು ಸ್ವಾರಸ್ಯವಾದ ಮಾರ್ಪಾಟುಮಾಡಿದ್ದಾನೆ. ನಿನಗೆ ಸೂಕ್ತ ಕಂಡರೆ ಅದನ್ನು ಸೇರಿಸಿಕೊಳ್ಳಬಹುದು ಸುದರ್ಶನ"

ಎಂದರು.

"ಹೇಳಿ ಗುರುಗಳೇ."

" ಮಾವನ ಮನೆಯಿಂದ ಹಿಂದಿರುಗಿದ ಭರತನಿಗೆ ತಂದೆಯ ಸಾವು ಗೊತ್ತಾದ ಬಗೆಯನ್ನು ಭಾಸ ಬಹಳ ಸ್ವಾರಸ್ಯವಾಗಿ ವಿನೂತನವಾಗಿ ನಿರೂಪಿಸಿದ್ದಾನೆ. ಅಯೋಧ್ಯೆಯ ಹೊರವಲಯಕ್ಕೆ ಬಂದ ಭರತನನ್ನು ದೂತ ಕಂಡು ಕೃತ್ತಿಕಾ ನಕ್ಷತ್ರ ಕಳೆಯುವವರೆಗೆ ಪುರಪ್ರವೇಶ ಮಾಡಬಾರದೆಂದು ತಿಳಿಸುತ್ತಾನೆ– ಭರತ ಕಾಲ ದೂಡಲು ಸಮೀಪದಲ್ಲಿದ್ದ ಪ್ರತಿಮಾಗೃಹ ಪ್ರವೇಶಿಸಿ, ಅಲ್ಲಿಟ್ಟ ತನ್ನ ವಂಶದ ದೊರೆಗಳ ಮೂರ್ತಿಗಳ ಜತೆಯಲ್ಲಿ ತಂದೆ ದಶರಥನ ಮೂರ್ತಿಯೂ ಸ್ಥಾಪಿತವಾಗಿದ್ದುದನ್ನು ಕಂಡು ಮೂರ್ಛೆ ಹೋಗುತ್ತಾನೆ."

" ಈ ಸನ್ನಿವೇಶ ಅವಶ್ಯಕವಾಗಿ ಉಪಯೋಗಿಸಿಕೊಳ್ಳುತ್ತೇನೆ. ನಿಃ ದೃಷ್ಟಿಯಿಂದಲೂ ದೃಶ್ಯ ಚಿತ್ತಾಕರ್ಷಕವಾಗಿದೆ."

ಮಾಗಡಿಗೆ ಬಂದ ಕೆಲಸ ಮುಗಿಯಲು ಸುದರ್ಶನರು ಊರಿಗೆ ಹಿಂದಿರುಗಲು ಶಾಸ್ತ್ರಿಗಳ ಅಪ್ಪಣೆ ಕೇಳಿದರು. ಒಂದು ದಿನ ನಿಲ್ಲಬೇಕೆಂದು ಶಾಸ್ತ್ರಿಗಳು ಅಪ್ಪಣೆಮಾಡಿದರು.

ಮಾರನೆಯ ದಿನ ಶಾಸ್ತ್ರಿಗಳು ರುದ್ರಾಭಿಷೇಕಮಾಡಿ, ಅನ್ನಪೂರ್ಣೇಶ್ವರಿಗೆ ಕುಂಕುಮಾರ್ಚನೆ ಮಾಡಿ, ಶಿಷ್ಯನ ನಾಟಕವನ್ನು ಭಗವಂತನಿಗೆ ನಿವೇದಿಸಿದರು. ಶಾಸ್ತ್ರಿಗಳ ಕುಟುಂಬ ಹೋಳಿಗೆ ಪಾಯಸದ ಅಡಿಗೆ ಮಾಡಿದರು. ಶಾಸ್ತ್ರಿಗಳು ಇಬ್ಬರು ಬ್ರಾಹ್ಮಣರನ್ನು ಕರೆದು ಅವರಿಗೆ ಊಟಹಾಕಿ ದಕ್ಷಿಣೆ ತಾಂಬೂಲ ಕೊಟ್ಟರು. ಅಂದೇ ಮೂರು ಗಂಟೆಯ ಬಸ್ಸಿನಲ್ಲಿ ಬೆಂಗಳೂರಿಗೆ ಹೊರಡಲು ಸುದರ್ಶನ ಅನುವಾದರು. ಶಾಸ್ತ್ರಿಗಳವರ ಮತ್ತು ಅವರ ಕುಟುಂಬದ ಪಾದಮುಟ್ಟಿ ನಮಸ್ಕರಿಸಿದಾಗ ಶಾಸ್ತ್ರಿಗಳ ಕಣ್ಣಲ್ಲಿ ಆನಂದ ಭಾಷ್ಪ ಉಕ್ಕಿ ಹರಿಯಿತು. ಸುದರ್ಶನರ ಹೃದಯ ಕೃತಜ್ಞತೆಯಿಂದ ತುಂಬಿ ಹೋಗಿತ್ತು. ಆಡಲು ಬಾಯಲ್ಲಿ ಮಾತೇ ಉಳಿಯಲಿಲ್ಲ.

ಸಂಜೆ ಬಸ್ ಇಳಿದವನೇ ನೇರವಾಗಿ ಚಿನ್ನಪ್ಪನ ಕಛೇರಿಗೆ ಹೋದ. ಸಾಹುಕಾರರು, ಚಿನ್ನಪ್ಪ, ಭೊಪೆನ್ ಬಾಬು, ಶಿವಾನಂದರು ಅಲ್ಲಿ ಸೇರಿದ್ದರು. ಸುದರ್ಶನರು ಹೇಳಿದ ವೇಳೆಗೆ ಸರಿಯಾಗಿ ಬಂದುದನ್ನು ಕಂಡು ಸಾಹುಕಾರರು ಆಶ್ಚರ್ಯಗೊಂಡು

" ನಾಟಕ ಬರದಾಯ್ತಾ ಸ್ವಾಮಿ "

ಎಂದರು. ಸುದರ್ಶನರು ಮರುಮಾತಾಡದೆ ಹಸ್ತಪ್ರತಿಯನ್ನು ಸಾಹುಕಾರರ ಕೈಯಲ್ಲಿಟ್ಟರು. ಸಾಹುಕಾರರು ಕನ್ನಡ ಪ್ರತಿಯ ಪುಟ ತಿರುವಿಹಾಕಿದರು ; ಭೂಪೆನ್ ಬಾಬು ಇಂಗ್ಲಿಷ್ ಪ್ರತಿಯ ಪುಟ ತಿರುವಿ ಹಾಕಿದರು.

" ನೀವೇ ಒಂದ್ಸಲ ಓದಿಬಿಟ್ಟರೆ ಚೆನ್ನಾಗಿತ್ತು "

"ನನಗೆ ತುಂಬ ಆಯಾಸವಾಗಿದೆ. ಬೆಳಿಗ್ಗೆ ಬಂದು ಓದುತ್ತೀನೆ."

"ಹಂಗೇ ಮಾಡಿ ಸ್ವಾಮಿ."

"ಅಣ್ಣಾ, ಬೆಳಿಗ್ಗೆ ಭಾಗ್ಯಮ್ಮ ಸರೋಜಮ್ಮಂಗೂ ಹೇಳಿಕಳಿಸಿದರೆ ಒಳ್ಳೆಯದಲ್ಲವೇ ?"

"ಅವರೂ ಕೇಳಿದರೆ ಒಳ್ಳೇದೇ. ಆಫೀಸಿಗೆ ಅವರು ಎಂಗೆ ಬತ್ತಾರೆ ಚಿನ್ನಪ್ಪ. ಒಂದು ಕೆಲಸ ಮಾಡು. ಬೆಳಿಗ್ಗೆ ಎಲ್ಲಾರನ್ನ ಕರ್ಕೊಂಡು ಅಲ್ಲೀಗೆ ಬಂದುಬಿಡು. ಸ್ವಾಮಿಯೋರು ಅಲ್ಲೇ ಓದಲಿ."

"ಹಾಗೂ ಆಗಬಹುದು."

ಎಂದು ಚಿನ್ನಪ್ಪ ಒಪ್ಪಿಗೆ ಕೊಟ್ಟ.

ಬೆಳಿಗ್ಗೆ ಸಾಹುಕಾರರ ಕಾರು ಆಫೀಸಿನ ಬಳಿ ಸಿದ್ಧವಾಗಿತ್ತು. ಚಿನ್ನಪ್ಪ ಎಲ್ಲರ ದಾರಿ ನೋಡುತ್ತಿದ್ದ. ಶಿವಾನಂದ ಬಂದ. ಅವನ ಹಿಂದೆಯೇ ಸುದರ್ಶನರು ಬಂದರು. ಸ್ವಲ್ಪ ಹೊತ್ತಿನಲ್ಲಿ ಭೂಪೇನ್ ಬಾಬು ಅವರ ಸವಾರಿ ಚಿತ್ತೈಸಿತು.

ಬಾಬು ಸುದರ್ಶನರನ್ನು ಕಂಡಕೂಡಲೆ ಹಾರಿಬಂದು ಅಪ್ಪಿಬಿಟ್ಟರು. ಆನಂದಾತಿಶಯದಿಂದ ಅವರ ಕಣ್ಣುಗಳಲ್ಲಿ ಹನಿಗಳು ಮಿಡಿಯುತ್ತಿದ್ದವು.

"ಸುದರ್ಶನ್‌ಜೀ, ಮಹಾಕಾವ್ಯ ಬರೆದುಬಿಟ್ಟದ್ದೀರಿ. ನಿಮ್ಮ ಹಸ್ತಪ್ರತಿ ರಾತ್ರಿ ಕೈಯಲ್ಲಿ ಹಿಡಿದವನು ಮುಗಿಸುವವರೆಗೆ ಮೇಲಕ್ಕೇಳಲಿಲ್ಲ. ತರುವಾಯ ಹೋಗಿ ಮಲಗಿದೆ. ನಿದ್ರೆ ಹತ್ತಲಿಲ್ಲ – ರಾತ್ರಿಯೆಲ್ಲಾ ನಿಮ್ಮ ರಾಮ, ಭರತ, ಕೈಕೇಯಿ ನನ್ನ ಒಂದೇ ಸಮನಾಗಿ ಕಾಡಿಬಿಟ್ಟರು. ನಿಮ್ಮ ಇಂಗ್ಲಿಷ್ ಅನುವಾದವೇ ಇಷ್ಟು ಚೆನ್ನಾಗಿರಬೇಕಾದರೆ ಕನ್ನಡದ ಮೂಲ ಇನ್ನು ಹೇಗಿರಬೇಕು ?"

"ಗುರುಗಳ ಆಶೀರ್ವಾದ. ಶ್ರೀರಾಮಚಂದ್ರನ ಅಮರ ಕಥೆ ಬರೆಯುವುದಕ್ಕೆ ನಾನೆಷ್ಟರವನು ?"

"ಸುದರ್ಶನ್‌ಜೀ, ನೀವು ನನ್ನ ಕ್ಷಮಿಸಬೇಕು. ನಿಮ್ಮ ವಿಷಯದಲ್ಲಿ ನಾನು ಮಹಾಪರಾಧ ಮಾಡಿದ್ದೇನೆ."

"ಅದೇನು ಅಪರಾಧ ಬಾಬೂ. ನೀವು ಅಪರಾಧ ಮಾಡಿರುವುದು ನನಗೆ ಗೊತ್ತಿಲ್ಲ. ಇಲ್ಲಿಗೆ ಬಂದ ದಿವಸದಿಂದ ನಮ್ಮ ಅಣ್ಣತಮ್ಮಂದಿರ ಹಾಗೆ ಇದ್ದೀರಿ."

"ಇಲ್ಲ ಬಾಬು – ನಾನು ನಿಮಗೆ ಮೋಸ ಮಾಡಿದೆ. ಆದರೆ ಅದು ಉದ್ದೇಶಪೂರ್ವಕವಾಗಿ ಆದುದಲ್ಲ – ಅಜ್ಞಾನದಿಂದಾದುದು. ನನ್ನ ಮನಸ್ಸು

ಒಪ್ಪುವಂತೆ ನೀವು ಚಿತ್ರನಾಟಕ ಬರೆಯಬಹುದೆಂದು ನಾನೆಣಿಸಿರಲಿಲ್ಲ, ಕನ್ನಡ ಮನುಷ್ಯ – ಏನು ಬರೆಯಬಲ್ಲ ಎನ್ನುವ ಬಂಗಾಳಿ ಅಹಂಕಾರ ನನ್ನ ತಲೆಯಲ್ಲಿ ತುಂಬಿತ್ತು. ನಿಮ್ಮ ಹಸ್ತಪ್ರತಿ ಓದಿದ ಮೇಲೆ ನನ್ನ ಅಹಂಕಾರ ಮಂಜುಗೆಡ್ಡೆಯಂತೆ ಕರಗಿಹೋಯಿತು. ನಿಮ್ಮ ಇಂಗ್ಲಿಷ್ ಶೈಲಿ ಎಷ್ಟು ಚೆನ್ನಾಗಿದೆ; ಎಷ್ಟು ಹರಿತವಾಗಿದೆ. ಇಂಗ್ಲಿಷಿನಲ್ಲಿ ಏನಾದರೂ ಬರೆದಿರು ವಿರಾ ?"

"ಬಹಳ ಸ್ವಲ್ಪ. ನನ್ನ ಕೆಲವು ಲೇಖನಗಳು, ಕಥೆಗಳನ್ನು ಇಂಗ್ಲಿಷಿಗೆ ಅನುವಾದ ಮಾಡಿದ್ದೇನಷ್ಟೆ."

"ಸುದರ್ಶನ್‌ಜೀ, ಕನ್ನಡ ಓದುವವರು ಬಹಳ ಸ್ವಲ್ಪ ಮಂದಿ. ಇಂಗ್ಲಿಷಿನಲ್ಲಿ ನೀವು ಬರೆದರೆ ಇಡಿಯ ಜಗತ್ತೇ ಓದುತ್ತದೆ. ಸುಮ್ಮನೆ ಕನ್ನಡ ಬರೆದುಕೊಂಡು ನಿಮ್ಮ ಅಮೌಲ್ಯ ವೇಳೆ, ಪ್ರತಿಭೆಯನ್ನೇಕೆ ದುರ್ವ್ಯಯ ಮಾಡುವಿರಿ ?"

ಭೂಪೆನ್ ಬಾಬುಗಳ ಮಾತು ಕೇಳಿ ಸುದರ್ಶನರಿಗೆ ಹೇಳಲಾಗದಷ್ಟು ವ್ಯಥೆಯಾಯಿತು. ಹಣೆಯ ಮೇಲೆ ಗೆರೆಗಳು ಮೂಡಿದವು, ಹುಬ್ಬು ಗಂಟಿಕ್ಕಿ ದವು, ಕಣ್ಣು ಅರ್ಧನಿಮೀಲಿತವಾಯಿತು. ಧ್ವನಿಯಲ್ಲಿ ವಿನಯ ತುಂಬಿದ ಕಾಠಿಣ್ಯ ಕಾಣಿಸಿಕೊಂಡಿತು.

"ಬಾಬು, ಈ ಪ್ರಶ್ನೆಯನ್ನು ಬಹಳ ಜನ ಕೇಳಿದ್ದಾರೆ, ಕೇಳುತ್ತ ಲಿದ್ದಾರೆ. ಇವತ್ತು ಸಾಹಿತ್ಯಸೇವೆಯಿಂದ ನಾನು ಹೊಟ್ಟೆ ಹೊರೆದುಕೊಳ್ಳಲು ಯತ್ನಿಸುತ್ತಿದ್ದೇನೆ. ಕನ್ನಡ ನನಗೆ ಹೊಟ್ಟೆತುಂಬ ಅನ್ನ ಕೂಡ ಕೊಡುತ್ತಿಲ್ಲ. ಕನ್ನಡದ ಕೈಬಿಟ್ಟು ನಾನು ಇಂಗ್ಲಿಷಿನಲ್ಲಿ ಬರೆಯಲಾರಂಭಿಸಿದರೆ ಇಷ್ಟೇ ಸಿದ್ಧಿ ಯನ್ನು ಪಡೆಯಬಲ್ಲೆ ಎನ್ನುವ ಧೈರ್ಯವಿದೆ. ನನ್ನ ಕನ್ನಡ ಶೈಲಿಯಷ್ಟೇ ನನ್ನ ಇಂಗ್ಲಿಷ್ ಶೈಲಿಯೂ ಚೆನ್ನಾಗಿದೆ ಎನ್ನುವುದನ್ನೂ ನಾನು ಬಲ್ಲೆ. ಆದರೆ ಹೊಟ್ಟೆ ಹೊರೆದುಕೊಳ್ಳುವುದು, ಹಣ ಸಂಪಾದಿಸುವುದು, ಕೀರ್ತಿ ಗಳಿಸುವುದು ಇಷ್ಟೇ ನಮ್ಮ ಜೀವನದ ಗುರಿಯಾಗಬೇಕೇ? ಧನ, ಕೀರ್ತಿ ಕೆಲವರಿಗೆ ತೃಪ್ತಿಯನ್ನುಂಟುಮಾಡಬಹುದು. ನನಗೆ ಅವುಗಳಿಂದ ತೃಪ್ತಿ ಯುಂಟಾಗುವುದಿಲ್ಲ. ನನ್ನ ದೇಶಕ್ಕೆ ನನ್ನದೇ ಆದ ಅಲ್ಪ ಸೇವೆಯನ್ನು ಮಾಡಿರುವೆನಲ್ಲಾ ಎನ್ನುವ ತೃಪ್ತಿ ನನಗೆ ಬೇಕಾಗಿದೆ. ಬೇರೆ ಭಾಷೆಯ ಮರೆಹೋಗುವುದರಿಂದ ಈ ತೃಪ್ತಿ ದೊರೆಯುವುದಿಲ್ಲ. ಸಂಸ್ಕಾರ, ಸ್ವಾನು ಭವದಿಂದ ಭಾವ ವಿಕಾಸವಾಗುತ್ತದೆ. ವಿಕಸಿತ ಭಾವಕ್ಕೆ ಯೋಗ್ಯ ಉಚ್ಚಾರಣೆ ಕೊಡಬಲ್ಲುದು ಸ್ವಭಾಷೆಯೇ ವಿನಾ ಅನ್ಯ ಭಾಷೆಯಲ್ಲ. ನೋಡಿ ಬಾಬು –

ನಮ್ಮ ದೇಶ ಇಂದು ನವಯುಗದ ಹೊಸ್ತಿಲ ಮೇಲೆ ನಿಂತಿದೆ. ಈ ದೇಶ ವನ್ನು ನಾವು ಸಾಹಿತ್ಯದಿಂದ, ಕಲೆಗಳಿಂದ, ಕೈಗಾರಿಕೆಗಳಿಂದ, ವ್ಯಾಪಾ ರೋದ್ಯಮಗಳಿಂಡ, ವಿಜ್ಞಾನದಿಂಡ ಕಟ್ಟಬೇಕು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ವೈಯಕ್ತಿಕ ತೇಜಸ್ಸನ್ನು ಬೆಳಸಿಕೊಂಡು ಅದನ್ನು ದೇಶದ ಕಲ್ಯಾಣಕ್ಕೆ ಧಾರೆಯೆರೆಯಬೇಕು. ಸ್ವಧರ್ಮವನ್ನು ಮರೆತವನಿಂದ ಇದು ಸಾಧ್ಯವೇ? ಇಂಗ್ಲಿಷಿನಲ್ಲಿ ನಾನು ಬರೆಯದಿದ್ದರೆ ಇಂಗ್ಲಿಷ್ ಪ್ರಪಂಚಕ್ಕೆ ಏನೂ ಹಾನಿ ಯಾಗುವುದಿಲ್ಲ, ನಷ್ಟವಾಗುವುದಿಲ್ಲ. ಇಂಗ್ಲಿಷನ್ನೇ ಮಾತೃಭಾಷೆಯಾಗಿ ಪಡೆದ ನೂರಾರು ತೇಜಸ್ವಿಗಳು ಅನುಪಮರೀತಿಯಲ್ಲಿ ಇಂಗ್ಲಿಷಿನ ಸೇವೆಮಾಡುತ್ತಿ ದ್ದಾರೆ. ರವೀಂದ್ರರು, ಶರತ್ ಬಾಬುಗಳು ಬಂಗಾಳಿಯಲ್ಲಿ ಬರೆಯದೆ ಇಂಗ್ಲಿಷಿನಲ್ಲಿ ಬರೆದಿದ್ದರೆ ಬಂಗಾಳಿಗೆ ಎಷ್ಟು ನಷ್ಟವಾಗುತ್ತಿತ್ತು ಆಲೋಚಿಸಿ. ನಾವು ಇಂಗ್ಲಿಷು, ಹಿಂದಿಯೆಂದು ಹಾತೊರೆಯುವುದು ನಮ್ಮ ದಾಸ್ಯದ ಚಿಹ್ನೆ. ರವೀಂದ್ರರ ದಿವ್ಯಕೃತಿಗಳನ್ನು ಇಂಗ್ಲಿಷ್ ಜನರಿಗೆ ಪರಿಚಯಮಾಡಿ ಕೊಡಬೇಕೆಂದು ಎಡ್ವರ್ಡ್ ಥಾಮ್‌ಸನ್ ಬಂಗಾಳಿ ಕಲಿತು ಆ ಕೆಲಸ ನಿರ್ವ ಹಿಸಲಿಲ್ಲವೇ! ಹಾಗೇ, ನನ್ನ ಕೃತಿಗಳಲ್ಲಿ ಜೀವಾಳವಿದ್ದರೆ ಬೇರೆ ಬೇರೆ ಭಾಷೆ ಮಾತನಾಡುವ ಜನ ಕನ್ನಡ ಕಲಿತು ತನ್ನ ಕೃತಿಗಳನ್ನು ತಮ್ಮ ಭಾಷೆಗೆ ಅನುವಾದ ಮಾಡಿಕೊಳ್ಳುತ್ತಾರೆ. ಷೇಕ್ಸ್‌ಪಿಯರ್, ಬಾಲ್‌ಜಾಕ್, ಟಾಲಸ್ಟಾಯ್ ಇವರ ಕೃತಿಗಳು ಕನ್ನಡಕ್ಕೆ ಅನುವಾದವಾಗಿರುವ ಹಾಗೆ ಕನ್ನಡ ಕೃತಿಗಳು ಇಂಗ್ಲಿಷಿಗೆ, ಫ್ರೆಂಚಿಗೆ, ರಷ್ಯನ್ ಭಾಷೆಗೆ, ಇತರ ಭಾಷೆ ಗಳಿಗೆ ಅನುವಾದವಾಗಿ ಕನ್ನಡನಾಡಿನ ಸಾಹಿತ್ಯ ಪ್ರಭಾವವನ್ನು ವಿಸ್ತರಿಸ ಬೇಕೆಂದು ನನ್ನ ಆಸೆ."

ಸುದರ್ಶನರ ಮಾತು ಕೇಳಿ ಭೂಪೇನ್ ಬಾಬು ವಿಸ್ಮಯಗೊಂಡರು. ಶಿವಾನಂದ ಮಾರ್ಮಿಕವಾಗಿ ಚಿನ್ನಪ್ಪನ ಕಡೆ ತಿರುಗಿ 'ನಾನು ಹೇಳಲಿಲ್ಲವೇ. ಇದು ಭಾರೀ ಘಟ' ಎನ್ನುವ ರೀತಿಯಲ್ಲಿ ದೃಷ್ಟಿಬೀರಿದ.

ಚಿನ್ನಪ್ಪ ಸುದರ್ಶನರನ್ನು ನೋಡಿ

"ಹೋಗೋಣವೋ – ಹೊತ್ತಾಗುತ್ತದೆ. ಸಾಹುಕಾರರು ನಮ್ಮ ದಾರಿ ನೋಡುತ್ತಿರುತ್ತಾರೆ"

ಎಂದ. ಎಲ್ಲರೂ ಕಾರು ಹತ್ತಿ ಕುಳಿತು ಭಾಗ್ಯಮ್ಮನ ಮನೆಗೆ ಬಂದರು. ಸಾಹುಕಾರರು ಅವರಿಗೆ ಕಾಯುತ್ತ ಕುಳಿತಿದ್ದರು.

ಭಾಗ್ಯಮ್ಮನಿಗೆ ಸುದರ್ಶನರನ್ನುಳಿದು ಎಲ್ಲರ ಪರಿಚಯವೂ ಇತ್ತು. ಚಿನ್ನಪ್ಪ ಸುದರ್ಶನರ ಪರಿಚಯಮಾಡಿಕೊಟ್ಟ.

ಸಾಹುಕಾರರು ಡೈರೆಕ್ಟರವರನ್ನು ಕುರಿತು

" ಸ್ವಾಮಿಯೋರ ನಾಟಕ ಓದಿದಿರಾ ? " ಎಂದು ಕೇಳಿದರು.

" ಓದಿದೆ. ಅವರ ನಾಟಕ ನನ್ನ ನಿದ್ರೆ ಕೆಡಿಸಿಬಿಟ್ಟಿತು."

" ಹ್ಯಾಗೈತೆ ? "

" ಈಗ ನೀವೇ ಕೇಳುವಿರಲ್ಲಾ. ಕನ್ನಡದ ಮೂಲ ಕೇಳಿದ ಮೇಲೆ ನೀವು ಹೇಳಿ."

" ನಮ್ಗೇನು ಗೊತ್ತಾಗ್ತೈತೆ ಸ್ವಾಮಿ. ನಾನೊಬ್ಬ ನಿರಕ್ಷರಕುಕ್ಷಿ. ತಿಳಿದೋರು ನೀವು ಏಳಿದರೆ ನಮ್ಗೆ ಅದೇ ಜಂಗಮವಾಣಿ."

" ಸುದರ್ಶನ್‌ಜೀ ಬರೆದಿರುವಂತೆ ತೆರೆಯಮೇಲೆ ನಾವು ಈ ಕಥೆ ತರುವುದಕ್ಕೆ ಸಾಧ್ಯವಾದರೆ ನಮ್ಮನ್ನು ಹಿಡಿಯುವವರು ಯಾರು ಸಾಹುಕಾರ್‌ಜೀ."

ಭಾಗ್ಯಮ್ಮ ಸಿದ್ಧಗೊಳಿಸಿದ್ದ ಸೊಗಸಾದ ತಿಂಡಿ, ಕಾಫಿ, ಬಂದವು. ಎಲ್ಲರೂ ಸಾವಕಾಶವಾಗಿ ಸಂತೋಷವಾಗಿ ಉಪಾಹಾರ ಮಾಡಿದರು. ಭಾಗ್ಯಮ್ಮನ ಮನೆ ಅಡಿಗೆಯಾಳು ರೇವಣ್ಣ ಬಂದು ತಟ್ಟೆ, ಲೋಟ ತೆಗೆದುಕೊಂಡು ಹೋದ ಮೇಲೆ ಭಾಗ್ಯಮ್ಮ ಬಂದು ಗೋಡೆಯ ಮಗ್ಗುಲಲ್ಲಿ ಕುಳಿತುಕೊಂಡಳು. ಒಳಗಿನಿಂದ ತಿರುಮಕೂಡಲ ಮನೆಯವರ ಪಾರ್ವತಿ, ಇನ್ನು ನಾಲ್ಕು ಹೆಣ್ಣು ಮಕ್ಕಳು, ಸರೋಜ ಬಂದು ಭಾಗ್ಯಮ್ಮನ ಬಳಿಯಲ್ಲಿ ಕುಳಿತರು.

ಭಾಗ್ಯಮ್ಮ ತಮ್ಮ ಮುಂದೆ ತಳ್ಳಿದ ತಟ್ಟೆಯಲ್ಲಿದ್ದ ಬೀಡ ಬಾಯಿಗೆ ಹಾಕಿಕೊಂಡು ಸಾಹುಕಾರರು

" ಓದಿ ಸ್ವಾಮಿ " ಎಂದರು.

ಚಿನ್ನಪ್ಪ ಕೈಗೆ ಕೊಟ್ಟ ಹಸ್ತಪ್ರತಿಯನ್ನು ತೆಗೆದುಕೊಂಡು ಸುದರ್ಶನರು

" ನಾನು ಸದ್ಯಕ್ಕೆ ಕಥೆಯನ್ನು ಸಿನೀಮಾ ತಂತ್ರಕ್ಕೆ ಅಳವಡಿಸಿಲ್ಲ. ಉದ್ದಕ್ಕೆ ನಾಟಕದಂತೆ ಕಥೆಯನ್ನು ನಿರೂಪಿಸಿಕೊಂಡು ಹೋಗಿದ್ದೇನೆ. ಡೈರೆಕ್ಟರ್ ಯಾವ ರೀತಿಯಲ್ಲಿ ಚಿತ್ರಗ್ರಹಣ ಮಾಡುವರೋ ಎಂಬುದನ್ನು ತಿಳಿದುಕೊಂಡು ಈ ನಾಟಕವನ್ನು ಪುನಃ ಬರೆಯಬೇಕಾಗುತ್ತದೆ.

೧

ದಶರಥ, ಕೈಕಯಿ ಇವರ ಅಂತಃಪುರದಲ್ಲಿ ಕಥೆ ಆರಂಭವಾಗುತ್ತದೆ. ಕೈಕಯಿಯ ತಾರುಣ್ಯ, ಸೌಂದರ್ಯ, ಕಲಾಭಿಜ್ಞತೆಗಳಿಗೆ ಮನತೆತ್ತ ದಶರಥ ಮಹಾರಾಜ ಅವಳ ದಾಸಾನುದಾಸನಾಗಿದ್ದಾನೆ. ವೃದ್ಧನಾದ ದೊರೆ

ಯನ್ನು ಕೈಕೆಯಿಯ ಮೋಹಪಾಶ ಬಲವಾಗಿ ಬಿಗಿದಿರುತ್ತದೆ. ಕೈಕೆಯಿ ನೃತ್ಯ, ಗೀತೆಗಳಿಂದ ದೊರೆಯ ಮನಸ್ಸನ್ನು ಸಂತೋಷಪಡಿಸುತ್ತಿರುತ್ತಾಳೆ. ನೃತ್ಯ, ಗೀತೆ ಮುಗಿದ ಮೇಲೆ ದೊರೆ ಕೈಕೆಯಿಗೆ 'ಭರತ, ಶತ್ರುಘ್ನರು ಮಾವನ ಮನೆಗೆ ಹೋಗಿ ಬಹಳ ದಿವಸವಾಯಿತು. ಇನ್ನೂ ಹಿಂದಿರುಗಿಲ್ಲ. ನನ್ನ ಈ ವೃದ್ಧಾಪ್ಯದೆಸೆಯಲ್ಲಿ ನನ್ನ ಮಕ್ಕಳೆಲ್ಲರೂ ನನ್ನ ಬಳಿಯಲ್ಲಿರುವುದು ಒಳ್ಳೆಯ ದಲ್ಲವೇ? ರಾಮನ ಮೇಲಿನ ಪ್ರೇಮದಿಂದ ನೀನು ಹೊಟ್ಟೆಯಲ್ಲಿ ಹುಟ್ಟಿದ ಮಗ ಭರತನನ್ನೇ ಮರೆತುಬಿಟ್ಟಿರುವೆ.' ಎಂದು ಹೇಳುತ್ತಾನೆ. ದೊರೆ ಹೇಳಿದ್ದು ಯಥಾರ್ಥವಾದ ಮಾತು. ಭುವನೈಕರಾಮನಾದ ರಾಮನನ್ನು ಕಂಡರೆ ಕೈಕೆಯಿಗೆ ಅನಿರ್ವಚನೀಯವಾದ ಪ್ರೇಮ. ತನ್ನ ಮಗ ಭರತನನ್ನು ಕಾಣದೆ ಅವಳು ಇರಬಲ್ಲಳು– ಭರತನನ್ನು ಬಿಟ್ಟಿರಬಲ್ಲಳು; ಆದರೆ ರಾಮ ನನ್ನು ಕಾಣದೆ ಇರಲಾರಳು– ರಾಮನನ್ನು ಬಿಟ್ಟಿರಲಾರಳು. ರಾಮನ ಕಲ್ಯಾಣಗುಣವೇ ಇದಕ್ಕೆ ಕಾರಣವಾಗಿತ್ತು. ಹಡೆದ ತಾಯಿಯಾದ ಕೌಸಲ್ಯೆ ಯಲ್ಲಿ ಅವನಿಗೆಂಥ ಪ್ರೇಮ, ಗೌರವಗಳಿದ್ದವೋ ಅಷ್ಟೇ ಕೈಕಾದೇವಿ, ಸುಮಿತ್ರೆ ಯರಲ್ಲಿಯೂ ಇದ್ದವು. ನಡೆಯಲ್ಲಿ ನುಡಿಯಲ್ಲಿ ಕಿಂಚಿತ್ತಾದ ಅವಿನಯ ತೋರದ, ಸದಾಸ್ಮಿತವದನನೂ ದಯಾಪೂರ್ಣನೂ ಆದ ರಾಮಚಂದ್ರನನ್ನು ಇಡಿಯ ಅಯೋಧ್ಯೆಯೇ ಪ್ರೀತಿಸುತ್ತಿತ್ತು; ಪೂಜಿಸುತ್ತಿತ್ತು. ಹಾಗೇ ಕೈಕಾ ದೇವಿಯೂ ಅವನನ್ನು ಹಾರ್ದಿಕವಾಗಿ ಆದರಿಸುತ್ತಿದ್ದಳು.

೨

ತನ್ನ ಕಾಲ ಸಮೀಪಿಸುತ್ತ ಬಂದಿರುವುದನ್ನು ತಿಳಿದ ದಶರಥ ಮಹಾ ರಾಜನು ಪ್ರಜಾ ಪ್ರಮುಖರು ನೆರೆದ ಸಭೆಯಲ್ಲಿ ಹಿರಿಯ ಮಗನಿಗೆ ಯುವ ರಾಜ್ಯಾಭಿಷೇಕ ಮಾಡಿ ತಾನು ವಿಶ್ರಾಂತಿ ಸುಖವನ್ನನುಭವಿಸಬೇಕೆಂಬ ಆಸೆ ಯನ್ನು ವ್ಯಕ್ತಪಡಿಸುತ್ತಾನೆ. ಮಹಾರಾಜನ ಸೂಚನೆ ಪ್ರಜಾಸ್ತೋಮಕ್ಕೆ ಅತ್ಯಂತ ಆಪ್ಯಾಯಮಾನವಾಗುತ್ತದೆ. ಈ ಶುಭಕಾರ್ಯವನ್ನು ಸಮೀಪ ದಲ್ಲಿದ್ದ ಲಗ್ನದಲ್ಲಿಯೇ ಮುಗಿಸಬೇಕೆಂದೂ, ಈ ಲಗ್ನಬಿಟ್ಟರೆ ಬಹಳ ದೂರ ಕಾಯಬೇಕಾಗುತ್ತದೆಂದು ವಶಿಷ್ಠರು ತಿಳಿಸುತ್ತಾರೆ. ದಶರಥ ಕುಲಪುರೋ ಹಿತರಾದ ವಶಿಷ್ಠರಿಗೆ ಎಲ್ಲ ವ್ಯವಸ್ಥೆ ಮಾಡುವಂತೆ ತಿಳಿಸುತ್ತಾನೆ.

೩

ಅರಮನೆಯಲ್ಲಿ ಸುದ್ದಿ ಬಹಳ ಬೇಗ ವ್ಯಾಪಿಸುತ್ತದೆ. ಕೌಸಲ್ಯೆಯ ಅಂತಃಪುರದಲ್ಲಿ ಅರಮನೆಯ ಹೆಣ್ಣುಮಕ್ಕಳು ಸುಮಿತ್ರೆಯೊಂದಿಗೆ ನೆರೆದು

ಆಕೆಯನ್ನು ಅಭಿನಂದಿಸುತ್ತಾರೆ. ಕೌಸಲ್ಯೆಯ ಪರಿವಾರಜನಕ್ಕಂತೂ ಮಿತಿ ಮೀರಿದ ಸಂತೋಷ. ಕೌಸಲ್ಯೆಯ ಆಪ್ತಸಖಿಯಾದ ಮಾಲಿನಿಗಂತೂ ಎಲ್ಲರಿಗಿಂತ ಹೆಚ್ಚಿನ ಉತ್ಸಾಹ. ಅವಳು ಅರಮನೆಯ ಒಂದು ಭಾಗದಲ್ಲಿ ಸಡಗರದಿಂದ ಹೋಗುತ್ತಿದ್ದಾಗ ಎದುರಿಗೆ ಕೈಕಾದೇವಿಯ ಆಪ್ತಸಖಿಯಾದ ಮಂಥರೆಯನ್ನು ಸಂಧಿಸುತ್ತಾಳೆ.

ದೊರೆಯ ಮೆಚ್ಚಿನ ಮಡದಿಯಾದ ಕೈಕಾದೇವಿಗೆ ಇಡಿಯ ರಾಣಿವಾಸವೇ ಹೆದರುತ್ತಿತ್ತು. ತಮ್ಮ ಒಡತಿಯ ಪ್ರಭಾವ ತಿಳಿದ ಕೈಕಾದೇವಿಯ ಸಖಿಯರು, ದಾಸಿಯರು, ಊಳಿಗದವರು ಇತರರ ಮೇಲೆ ದರ್ಪ ತೋರಿಸುತ್ತಲೇ ಬಂದಿದ್ದರು. ಅಂಥವರಲ್ಲಿ ಮಂಥರೆ ಅಗ್ರಗಣ್ಯಳು. ಅವಳ ರೂಪದಷ್ಟೇ ಬುದ್ಧಿಯೂ ಕೊಂಕು.

ನಿತ್ಯವೂ ತನ್ನನ್ನು ಕಂಡರೆ ಹೆದರಿ ನಡುಗುತ್ತಿದ್ದ ಕೌಸಲ್ಯೆಯ ದಾಸಿ ಇಂದು ಉದ್ದಟತನದಿಂದ ಹೋಗುತ್ತಿರುವುದನ್ನು ನೋಡಿ ಮಂಥರೆಗೆ ಸಹಿಸದಾಯಿತು. ಕಾರಣವನ್ನು ತಿಳಿಯಬೇಕೆಂಬ ಕುತೂಹಲವೂ ಅವಳನ್ನು ಪೀಡಿಸಿತು. ತಾನೇ ಕೈಬೀಸಿ ಮಾಲಿನಿಯನ್ನು ಕರೆದು

**ಮಂಥರೆ:** ಏನೇ ಮಾಲಿನಿ, ಅರಮನೆಯ ಮರ್ಯಾದೆ ಮರೆತುಹೋಯಿತೇನು? ಅಥವಾ ಸುಖಜೀವನದ ಪಿತ್ಥ ನೆತ್ತಿಗೇರಿತೋ? ಎದುರಿಗೆ ಯಾರು ಬರುತ್ತಿದ್ದಾರೆಂಬುದನ್ನೂ ಲಕ್ಷಿಸದೆ ಗಂಡುಬೀರಿಯಂತೆ ಹೋಗುತ್ತಿರುವೆಯಲ್ಲಾ.

**ಮಾಲಿನಿ:** ಮಂಥರೆ, ನಿನ್ನ ದರ್ಪದ ಮಾತು, ಸೊಕ್ಕಿದ ನಡತೆಯ ಕಾಲ ಮುಗಿಯುತ್ತ ಬಂತು. ಇನ್ನು ನಿನ್ನ ಹಾರಾಟ ಚೀರಾಟಕ್ಕೆ ಪುರಸ್ಕಾರ ತೋರಿಸುವವರು ಈ ಅರಮನೆಯಲ್ಲಿ ಯಾರೂ ಇಲ್ಲ.

**ಮಂಥರೆ:** ಏನು ಬಂತೇ ನಿನಗೆ—ಸೂರ್ಯ ಪಶ್ಚಿಮದಲ್ಲಿ ಹುಟ್ಟಿದನೇನು? ತೊತ್ತಿನ ಹೆಣ್ಣಿನ ನಾಲಗೆ ಉದ್ದವಾಗಬಾರದು.

**ಮಾಲಿನಿ:** ಅದನ್ನು ನೀನೂ ನೆನಪಿನಲ್ಲಿಟ್ಟುಕೊಳ್ಳಬೇಕು. ಅತ್ತೆಗೊಂದು ಕಾಲ ಸೊಸೆಗೊಂದು ಕಾಲ. ನಿನ್ನ ಕಾಲ ಮುಗಿಯಿತು. ಇನ್ನು ನಮ್ಮ ಕಾಲ.

**ಮಥಂರೆ:** ನಿನ್ನ ಮಾತೇ ನನಗೆ ಅರ್ಥವಾಗುತ್ತಿಲ್ಲ. ನಿನ್ನ ವಿಪರೀತಾಚರಣೆಯನ್ನು ನೋಡಿದರೆ ನನ್ನ ಕಣ್ಣೇ ನನಗೆ ಮೋಸಮಾಡುತ್ತಿದೆಯೋ ಎನಿಸುತ್ತಿದೆ.

**ಮಾಲಿನಿ:** ನಿನ್ನ ಕಣ್ಣು ನಿನಗೆ ಮೋಸಮಾಡಿಲ್ಲವೆನ್ನುವುದಕ್ಕೆ ನಾಳೆ ಪೂರ್ಣ ನಿರ್ಧರಿಸಿಕೊಳ್ಳುವೆಯಂತೆ! ನಾಳೆ ಶ್ರೀರಾಮಚಂದ್ರನ ಪಟ್ಟಾಭಿಷೇಕವಾಗುವಾಗ ನನ್ನಮಾತು ನಿನಗೆ ಅರ್ಥವಾಗುತ್ತದೆ.

**ಮಂಥರೆ:** ನಾಳೆ ಶ್ರೀರಾಮಚಂದ್ರನಿಗೆ ಪಟ್ಟಾಭಿಷೇಕ! ಯಾರ ಮಗ್ಗುಲಿನಲ್ಲಿ ಎದ್ದು ಬರುತ್ತಿರುವೆಯೇ ಹುಚ್ಚು ಮಾಲಿನಿ, ಪಟ್ಟಾಭಿಷೇಕದ ಪ್ರಸ್ತಾಪವನ್ನು ಮಹಾರಾಜರೇ ಮಾಡದಿರುವಾಗ ಇಲ್ಲದ ಗುಲ್ಲೆಬ್ಬಿಸುವೆಯಾ?

**ಮಾಲಿನಿ:** ನಿನ್ನ ಹತ್ತಿರ ವಾದವಿವಾದ ಮಾಡುವುದಕ್ಕೆ ನನಗೆ ಕಾಲಾವಕಾಶವಿಲ್ಲ. ನನ್ನ ಮಾತಿನಲ್ಲಿ ನಿನಗೆ ಸಂಶೋಪವಿದ್ದರೆ ಕುಲಪುರೋಹಿತರಾದ ವಶಿಷ್ಠರನ್ನು ಹೋಗಿ ಕೇಳು.

[ಎಂದು ಮಂಥರೆಯನ್ನು ತಿರಸ್ಕಾರದಿಂದ ನೋಡುತ್ತ ಹೋಗುವಳು]

೪

ಮಂಥರೆಯ ಹೊಟ್ಟೆಗೆ ಕಿಚ್ಚಿಕ್ಕಿದಂತಾಗುತ್ತದೆ. ಅವಳ ಅಹಂಕಾರಕ್ಕೆ ಕೊಡಲಿ ಪೆಟ್ಟು ಬೀಳುತ್ತದೆ. ರಾಮನಿಗೆ ಪಟ್ಟಾಭಿಷೇಕವಾಗುವ ಮೊದಲೇ ತನ್ನ ಪಾಡು ಹೀಗಾದ ಮೇಲೆ ಮುಂದೇನು ಗತಿ? ಕೈಕಾದೇವಿಯ ಗತಿ ಯೇನು? ಕೈಕೆಯಿಂದ ಮೊದಲಿನಿಂದ ಅಪಮಾನವನ್ನು ಅನುಭವಿಸಿದ ಕೌಸಲ್ಯೆ ಈಗ, ತನ್ನ ಕೈ ಮೇಲಾದಾಗ ಸುಮ್ಮನೆ ಇರುವಳೇ ಎನ್ನುವ ಯೋಚನೆ, ಚಿಂತೆ, ದುಃಖ ಅವಳನ್ನು ಕಾಡುವುದಕ್ಕಾರಂಭಿಸಿದವು.

ಗರ ಹೊಡೆದವರಂತೆ ಮುಖವನ್ನು ಕೆಂಪಗೆ ಮಾಡಿಕೊಂಡು, ಕಣ್ಣುಗಳಿಂದ ಕಿಡಿಕಾರುತ್ತ ಶತಕುರೂಪಿ ಮಂಥರೆ ಕೈಕಾದೇವಿಯ ಅಂತಃಪುರ ಪ್ರವೇಶಿಸುತ್ತಾಳೆ. ತನ್ನ ಮೆಚ್ಚಿನ ಶುಕಮೊಂದಿಗೆ ವಿನೋದಕೇಳಿಯಲಿದ್ದ ಕೈಕಾದೇವಿಯ ಶಾಂತವೃತ್ತಿಯನ್ನು ನೋಡಿ ಮಂಥರೆಗೆ ಮತ್ತಷ್ಟು ಕೋಪ ಕೆರಳುತ್ತದೆ.

**ಮಂಥರೆ:** ಮೂಢೆ – ಮೂಢೆ – ಮಹಾಮೂಢೆ.

**ಕೈಕಾ:** ನನ್ನನ್ನು ಮೂಢೆಯೆನ್ನುವ ಎದೆಗಾರರು ಯಾರು? ಓಹೋ! ನೀನೋ ಮಂಥರಾ. ಏನಿಷ್ಟು ಸಡಗರದಲ್ಲಿ ಬಂದಿರುವೆ?

**ಮಂಥರೆ:** ಆಕಾಶವೇ ಕಳಚಿ ತಲೆಯ ಮೇಲೆ ಬೀಳುತ್ತಿರುವಾಗ, ಮೇರು ಪರ್ವತ ಹತ್ತಿಕೊಂಡು ಉರಿಯುತ್ತಿರುವಾಗ, ಸೂರ್ಯಚಂದ್ರರು ನೃತ್ಯನೃತ್ಯಮಾಡುತ್ತಿರುವಾಗ ನಮ್ಮ ರಾಣಿ ಕೈಕಾದೇವಿ ಪ್ರಶಾಂತವಾಗಿ ಮುದ್ದಿನ ಗಿಣಿಯೊಂದಿಗೆ ಚಲ್ಲಾಟವಾಡುತ್ತಿದ್ದಾಳೆ,

**ಕೈಕಾ :** ಏನಾಯಿತೇ ಮಂಥರಾ, ಏಕಿಷ್ಟು ಉದ್ವಿಗ್ನಳಾಗಿರುವೆ. ಅರಮನೆಯಲ್ಲಿ ಯಾರಾದರೂ ನಿನ್ನನ್ನು ಅಪಮಾನಗೊಳಿಸಿದರೇನು?

**ಮಂಥರೆ :** ನಾನು ದಾಸಿ – ನನಗೆ ಅಪಮಾನವಾದರೂ ಒಂದೇ – ಸನ್ಮಾನವಾದರೂ ಒಂದೇ. ಇಂದು ನೀನು ರಾಣಿ – ದಶರಥ ರಾಜೇಂದ್ರನ ಮೆಚ್ಚಿನ, ಮುದ್ದಿನ ಕಿರಿಯರಾಣಿ – ನಾಳೆ, ನನ್ನಂತೆಯೇ ನೀನೂ ಅರಮನೆಯ ಒಬ್ಬ ದಾಸಿ – ತೊತ್ತು!

**ಕೈಕಾ :** ನಾನು ದಾಸಿ! ತೊತ್ತು!! ಮಂಥರಾ, ನಿನ್ನ ಬುದ್ಧಿಗೆ ಇಂದು ಯಾವದೋ ಸಿಡಿಲು ಬಡಿದಿದೆ. ಮನಸ್ಸು ಬಂದಂತೆ ಗಳುಹುತ್ತಿರುವೆ. ನನ್ನನ್ನು ದಾಸಿಯಾಗಿ ಮಾಡಬಲ್ಲವರು ಯಾರು?

**ಮಂಥರೆ :** ಯಾರೂ ಅಲ್ಲ – ನಿನ್ನ ಸವತಿ ಕೌಸಲ್ಯೆ. ಮೂರ್ಧಾಭಿಷಿಕ್ತನಾಗುವ ರಾಮಚಂದ್ರನ ಜನನಿ.

**ಕೈಕಾ :** ರಾಮಚಂದ್ರನಿಗೆ ಮೂರ್ಧಾಭಿಷೇಕವೇ? ಎಂದು – ಎಂದು ಮಂಥರಾ?

**ಮಂಥರೆ :** ನಾಳೆ – ನಾಳೆ – ನಾಳೆ!

**ಕೈಕಾ :** ನನ್ನ ಕಣ್ಮಣಿಗೆ, ಶ್ರೀರಾಮಚಂದ್ರನಿಗೆ ಮೂರ್ಧಾಭಿಷೇಕವೇ. ಎಂಥ ಸಂತೋಷದ ಒಸಗೆ ತಂದೆ ಮಂಥರಾ. ಎಷ್ಟು ದಿವಸದ ನನ್ನ ಕನಸು ನೆನಸಾಯಿತು. ತೆಗೆದುಕೋ – ಈ ಮುತ್ತಿನ ಹಾರವನ್ನು.

[ಎಂದು ತನ್ನ ಕೊರಳಲ್ಲಿದ್ದ ಮುತ್ತಿನ ಹಾರವನ್ನು ತೆಗೆದು ಮಂಥರೆಯ ಕೈಯಲ್ಲಿಡುವಳು. ಮಂಥರೆ ಕೋಪದಿಂದ ಹಾರವನ್ನು ರೊಯ್ಯನೆ ಬಿಸುಟು)

**ಮಂಥರೆ :** ಸಿಂಹವಿಕ್ರಮನಾದ ಕೈಕಾಮೊರೆಯ ಹೊಟ್ಟೆಯಲ್ಲಿ ನಿನ್ನಂಥ ಸರಿ ಹುಟ್ಟಬಹುದೇ? ಕಂಡವರು ತಿಂದುಳಿದ ಎಂಜಲನ್ನೇ ಮೃಷ್ಟಾನ್ನವೆಂದು ಭಾವಿಸುವ ನಿನ್ನಂಥ ತಿಳಿಗೇಡಿ ಬೇರೆ ಯಾರಿದ್ದಾರೆ. ರಾಮನಿಗೆ ರಾಜ್ಯಾಧಿಕಾರ ಪ್ರಾಪ್ತಿಯಾಗುತ್ತೆಂದು ಈ ಮೂಢೆ ಹಿಗ್ಗುತ್ತಿದ್ದಾಳೆ. ನಾಳೆ ಅದೇ ರಾಮ–ಭುವನೈಕರಾಮ–ಕೌಸಲ್ಯಾ ತನಯ ರಾಮ ಇವಳಿಗೆ ಕೊಡುವ ಸದ್ಗತಿಯನ್ನು ಊಹಿಸಲಾರಳು. ರಾಜ್ಯ ಬೇಕೆನ್ನುವ ರಾಮನ ವಿನಯ, ಶೀಲ ರಾಜ್ಯ ದೊರಕಿಸಿಕೊಂಡ ರಾಮನಲ್ಲಿ ಉಳಿಯಲಾರದೆಂದು ಇವಳಿಗೆ ನಾನು ತಿಳಿಯಹೇಳಬೇಕಾಗಿದೆ.

**ಕೈಕಾ :** ಮಂಥರೆ, ರಾಮನನ್ನು ನಿಂದಿಸಬೇಡ. ಜಾಹ್ನವಿಯಂತೆ ನಿತ್ಯ ಪವಿತ್ರನಾದ ಅವನು ಕುಹಕ ಕುಟಿಲಗಳನ್ನರಿಯನು. ಹೆತ್ತ ತಾಯಿಯಾದ ಕೌಸಲ್ಯಗಿಂತ ನನ್ನ ಮೇಲೇ ಅವನಿಗೆ ಹೆಚ್ಚಿನ ಪ್ರೇಮ.

**ಮಂಥರೆ :** ಭದ್ರೆ, ರಾಮನ ಮೇಲೆ ನನಗೆ ಯಾವ ಕ್ರೋಧವೂ ಇಲ್ಲ, ನನ್ನ ವಿಷಯದಲ್ಲಿಯೂ ಅವನು ಪ್ರೀತಿ ಗೌರವಗಳಿಂದಲೇ ನಡೆದುಕೊಂಡಿದ್ದಾನೆ. ನಿನ್ನ ವಿಷಯದಲ್ಲಿ ಅವನು ಹೆಚ್ಚಿನ ಪ್ರೀತಿ ಗೌರವಗಳನ್ನಿಟ್ಟಿದ್ದಾನೆಂಬುದೂ ನಿಜ. ರಾಮನಿಗೆ ನಿನ್ನಲ್ಲಿರುವ ಪ್ರೇಮ ಅವನ ತಾಯಿ ಕೌಸಲ್ಯೆಗೆ ಹೇಗೆ ಬರಬೇಕು ಹೇಳು. ಕೌಸಲ್ಯೆಯ ವಿಷಯದಲ್ಲಿ ನೀನಾಗಲಿ, ಅವಳ ಸಖೀಜನದ ವಿಷಯದಲ್ಲಿ ನಾವಾಗಲಿ ಸೌಹಾರ್ದದಿಂದ ವರ್ತಿಸಿಲ್ಲ. ನಾಳೆ ಕೌಸಲ್ಯೆ ಪ್ರತೀಕಾರ ಕೈಗೊಳ್ಳದೆ ಸುಮ್ಮನಿರುತ್ತಾಳೆಯೇ ?

**ಕೈಕಾ :** ರಾಮನ ಸತ್ಯದೃಷ್ಟಿಯಲ್ಲಿ ನಂಬಿಕೆ ತಳೆದಿರುವ ನನಗೆ ಯಾರ ಭಯವೂ ಇಲ್ಲ. ಯಾರೂ ನನ್ನನ್ನು ಕಡೆಗಾಣಿಸಲು ರಾಮಭದ್ರನು ಅವಕಾಶಕೊಡುವುದಿಲ್ಲ.

**ಮಂಥರೆ :** ರಾಜಕಾರಣದಲ್ಲಿ ತಲ್ಲೀನನಾದ ರಾಮಭದ್ರ ಅಂತಃಪುರದೊಳಗೆ ಆಗುವುದನ್ನು ಗಮನಿಸಲು ಸಾಧ್ಯವೇ ? ಹೆಜ್ಜೆ ಹೆಜ್ಜೆಗೂ ನಮಗಾಗುವ ಭರ್ತ್ಸನೆಯನ್ನು ನಾವು ರಾಮನಲ್ಲಿ ಹೋಗಿ ದೂರುವುದಕ್ಕಾಗುತ್ತದೆಯೇ?

**ಕೈಕಾ :** ಮಂಥರಾ, ಲೋಕನೀತಿಯಂತೆ ರಾಮನೇ ಸಿಂಹಾಸನದ ಉತ್ತರಾಧಿಕಾರಿ. ಜೇಷ್ಠ ಪುತ್ರನಿಗೆ ತಾನೆ ರಾಜ್ಯ ಸಲ್ಲಬೇಕು.

**ಮಂಥರೆ :** ಕೌಸಲ್ಯೆಯಲ್ಲಿ ತನಗೆ ಮಕ್ಕಳಾಗಲಿಲ್ಲವೆಂದಲ್ಲವೇ ದಶರಥ ಮಹಾರಾಜನು ನಿನ್ನನ್ನು ವರಿಸಿದುದು. ಏನೋ ದೈವವಶಾತ್ ಕೌಸಲ್ಯೆಯಲ್ಲಿ ಮೊದಲು ಪುತ್ರ ಜನನವಾಯಿತು. ನಿನ್ನಲ್ಲಿ ಪುತ್ರನನ್ನು ಪಡೆದು ಅವನಿಗೆ ರಾಜ್ಯವಹಿಸಿಕೊಡಬೇಕೆಂದಲ್ಲವೇ ದೊರೆ ಉದ್ದೇಶಪಟ್ಟಿದುದು. ದೊರೆ ಮಿಕ್ಕ ರಾಣಿಯರಿಗಿಂತ ಹೆಚ್ಚಾಗಿ ನಿನ್ನಲ್ಲಿ ಸುಖಪಟ್ಟಿದ್ದಾನೆ. ನೀನು ನಿನ್ನ ಯೌವನವನ್ನು ಧಿಃಕರಿಸಿ ಮುದಿ ದೊರೆಯ ಸೇವೆ ಶಿಶ್ರೂಷೆಯನ್ನು ಪರಮಾದರದಿಂದ ಮಾಡಿರುವೆ. ಅದಕ್ಕಾದರೂ ದೊರೆ ನಿನಗೆ ಕೃತಜ್ಞತೆ ತೋರಿಸಬೇಡವೇ ?

**ಕೈಕಾ :** ಪತಿಸೇವೆ ಮಾಡುವುದು ಸತಿಯ ಧರ್ಮ.

**ಮಂಥರೆ :** ಸತಿಯ ಮನಸ್ಸಂತೋಷಪಡಿಸುವುದು ಪತಿಯಧರ್ಮ.

**ಕೈಕಾ :** ಪ್ರಭುಗಳು ನನ್ನ ಮನಸ್ಸಿಗೆ ಅಸಂತೋಷವಾಗುವ ಯಾವ ಕೆಲಸವನ್ನೂ ಇದುವರೆಗೆ ಮಾಡಿಲ್ಲ.

**ಮಂಥರೆ :** ಮಾಡಿಲ್ಲ ನಿಜ ಇದುವರೆಗೆ. ಈಗ ನಿನ್ನ ತಲೆಯ ಮೇಲೆ ದೊಡ್ಡ ಪರ್ವತವನ್ನು ಎತ್ತಿಹಾಕಲು ಸಿದ್ಧಮಾಡಿಕೊಳ್ಳುತ್ತಿದ್ದಾರೆ.

ಕೈಕಾ : ಯಾವ ಬಾಯಿಯಲ್ಲಿ ನಾನು ರಾಮನಿಗೆ ರಾಜ್ಯಾಧಿಕಾರ ವಹಿಸ ಬೇಡಿರೆಂದು ಹೇಳಲೇ ಮಂಥರಾ ?

ಮಂಥರೆ : (ಥಟ್ಟನೆ ಜ್ಞಾಪಿಸಿಕೊಂಡು) ಮರೆತಿದ್ದೆ ಕೈಕಾ ರಾಣಿ ಹಿಂದೆ ದೇವಾಸುರ ಯುದ್ಧಕಾಲದಲ್ಲಿ ದಶರಥ ಮಹಾರಾಜರು ದೇವೇಂದ್ರನಿಗೆ ಸಹಾಯಮಾಡಲು ಹೋಗಿದ್ದರಲ್ಲವೇ?

ಕೈಕಾ : ಹೌದು. ನಾನೂ ಅವರ ಜತೆಯಲ್ಲಿ ಹೋಗಿದ್ದೆ.

ಮಂಥರೆ : ಆಗ ದೊರೆಯ ಪ್ರಾಣವನ್ನು ನೀನು ರಕ್ಷಿಸಿದ್ದು ನೆನಪಿದೆಯೇ?

ಕೈಕಾ : ನೆನಪಿದೆ.

ಮಂಥರೆ; ಸಂತುಷ್ಟನಾದ ದಶರಥ ಮಹಾರಾಜರು ನಿನಗೆ ಎರಡು ವರಗಳನ್ನು ಕರುಣಿಸಿದರಲ್ಲವೇ ?

ಕೈಕಾ : ಹೌದು. ನಾನು ಆ ವರಗಳನ್ನು ಆಗ ಉಪಯೋಗಿಸಿಕೊಳ್ಳಲಿಲ್ಲ.

ಮಂಥರೆ : ಉಪಯೋಗಿಸಿಕೊಳ್ಳಲು ಈಗ ಕಾಲಬಂದಿದೆ.

ಕೈಕಾ : ಏನೆಂದು ಕೇಳಲಿ ಮಂಥರಾ ?

ಮಂಥರೆ : ರಾಮನ ಬದಲು ಭರತನಿಗೆ ಯುವರಾಜ ಪದವಿ ; ರಾಮನಿಗೆ ವನವಾಸ.

ಕೈಕಾ : (ಹೌಹಾರಿ) ಹಾ ! ರಾಮನಿಗೆ ವನವಾಸವೇ ?

ಮಂಥರೆ : (ಕೆರಳಿ) ನಿನ್ನಂಥ ಶತಮೂರ್ಖಳೊಂದಿಗೆ ವಾದಮಾಡಿ ಪ್ರಯೋಜನವಿಲ್ಲ. ಕೌಸಲ್ಯೆಯ ದಾಸಿ ನೀನಾಗಿ, ಭರತನನ್ನು ರಾಮನ ಉಳಿಗದಾಳು ಮಾಡಿ ನೀನು ಸುಖವಾಗಿ ಬಾಳಬಹುದು. ಆದರೆ ಈ ದುರಂತ ನೋಡಲು ನಾನು ಜೀವಂತಳಾಗಿರುವುದಿಲ್ಲ. ಇದೋ– ನಿನ್ನ ಕಣ್ಣುಮುಂದೆ ನಾನು ಪ್ರಾಣ ನೀಗಿಕೊಳ್ಳುತ್ತೇನೆ. ನಿನ್ನ ತವರಿನ ಹಂಗಿಗಾಗಿ ಇಷ್ಟು ದಿನ ನಿನ್ನ ಸೇವೆ ಮಾಡಿದೆ– ಇನ್ನು ಕೌಸಲ್ಯೆ ಸೇವೆಮಾಡಲು ನನ್ನಿಂದ ಸಾಧ್ಯವಿಲ್ಲ

[ತನ್ನ ಸೆರೆಗನ್ನು ಕುತ್ತಿಗೆಗೆ ಬಲವಾಗಿ ಬಿಗಿದುಕೊಳ್ಳುತ್ತಾಳೆ]

[ಕೈಕಾದೇವಿ ಬಿಡಿಸಲು ಯತ್ನಿಸುತ್ತಾಳೆ]

ಕೈಕಾ : ಕೈಬಿಡು ಮಂಥರಾ. ನೀನು ಹೇಳಿದಂತೆ ಮಾಡುತ್ತೇನೆ,

ಮಂಥರೆ : ಭರತನ ಮೇಲೆ ಆಣೆಯಿಟ್ಟು ಹೇಳು.

ಕೈಕಾ : ಭರತನಾಣೆಗೂ ನೀನು ಹೇಳಿದಂತೆ ಮಾಡುತ್ತೇನೆ,

[ಮಂಥರೆ ಕೈಬಿಡುವಳು.]

[ದೊಡ್ಡ ಬರಸಿಡಿಲೊಂದು ಎಲ್ಲಿಯೋ ಬಡಿಯುತ್ತದೆ. ಅದರ ಪ್ರಚಂಡ ಶಬ್ದಕ್ಕೆ ಕೈಕಾದೇವಿ ಬೆಚ್ಚುತ್ತಾಳೆ]

ಕೈಕಾ : ಮೋಡದ ಸೂಚನೆಯಿಲ್ಲದೆ ಸಿಡಿಲು ! ಯಾವ ಅನರ್ಥದ ಸಂಕೇತ ವಿದು ! ಜಗದೀಶ್ವರಾ, ಭರತ ಸುಕ್ಷೇಮದಿಂದಿರಲಿ.

೫

[ರಾತ್ರಿ ಅದೇ ಸಮಯದಲ್ಲಿ ಸೀತಾರಾಮರ ಅಂತಃಪುರದಲ್ಲಿ ನೃತ್ಯಗೀತೆಗಳು ನಡೆದಿರುತ್ತವೆ. ಯುವರಾಜ್ಯಾಭಿಷಿಕ್ತನಾಗುವ ರಾಮಚಂದ್ರನನ್ನು ಪರಿವಾರ ಆದರಿಸುತ್ತಿದೆ.

ಉತ್ಸವ ಮುಗಿಯುತ್ತ ಬರಲು ರಾಮ ಸೀತೆಗೆ ತನ್ನ ಕನಸಿನ 'ರಾಮರಾಜ್ಯ'ವನ್ನು ಚಿತ್ರಿಸುತ್ತಾನೆ. ಜನತಾ ಸೇವೆಗೆ ತಮ್ಮ ಜೀವವನ್ನು ಮುಡಿಪಿಡಲು ಸೀತಾರಾಮರು ನಿರ್ಧರಿಸುತ್ತಾರೆ.]

೬

[ಅದೇ ರಾತ್ರಿ. ಕೈಕಾದೇವಿಯ ಅಂತಃಪುರ. ಅಂತಃಪುರದ ಸಾಮಾನುಗಳೆಲ್ಲಾ ಗೂರಾಡಲ್ಪಟ್ಟು ಚೆಲ್ಲಾಪಿಲ್ಲಿಯಾಗಿವೆ. ದೇವಿ ಧರಿಸಿದ್ದ ಆಭರಣಗಳು ಸಿಕ್ಕುಸಿಕ್ಕಲ್ಲಿ ಬಿದ್ದಿವೆ. ದೇವಿ ತಲೆಗೆದರಿಕೊಂಡು ರೋದಿಸುತ್ತಾ ಮಲಿನವಸ್ತ್ರಧಾರಿಯಾಗಿ ನೆಲದ ಮೇಲೆ ಬಿದ್ದಿದ್ದಾಳೆ.

ದಶರಥ ಮಹಾರಾಜ ದಿವ್ಯಾಲಂಕಾರಭೂಷಿತನಾಗಿ ದೇವಿಯ ಅಂತಃಪುರದ ಬಳಿಗೆ ಬಂದಿದ್ದಾನೆ. ಅವನನ್ನು ಸ್ವಾಗತಿಸಲು ಕೈಕಾದೇವಿಯ ಸಖೀ ಜನರು ಯಾರೂ ಇಲ್ಲ. ದೊರೆ ಅಂತಃಪುರದೊಳಗೆ ಕೈಕಾದೇವಿಯ ಮುತ್ತಿನ ಸರದ ಮೇಲೇ ಕಾಲಿಡುತ್ತಾನೆ. ಅದನ್ನು ಕೈಗೆತ್ತಿಕೊಂಡು ಕುತೂಹಲದಿಂದ ನೋಡಿ ಮುಂದಡಿಯಿಟ್ಟು]

ದಶರಥ : ಕೈಕಾ........ಕೈಕಾ

[ಮಾರುತ್ತರವಿಲ್ಲ.
ದೂರದಲ್ಲಿ ಯಾರೋ ಅಳುತ್ತಿರುವಂತೆ ಧ್ವನಿ ಕೇಳಿಸುವುದು.]

ದಶರಥ : ನನ್ನ ಪ್ರೇಮರಾಣಿಯ ಮಂದಿರದಲ್ಲಿ ಇದೇನು ರೋದನದ ಧ್ವನಿ— ಅದೂ ಇಂದು !

[ಮುಂದಕ್ಕೆ ಹೋಗುತ್ತಾ ನೆಲದಮೇಲೆ ಬಿದ್ದಿರುವ ಕೈಕಾರಾಣಿಯನ್ನು ಕಂಡು ಕೈಯಲ್ಲಿದ್ದ ಮುತ್ತಿನ ಸರವನ್ನತ್ತ ಒಗೆದು ಮೊಂಡಿಯೂರಿ ಅವಳ ಬಳಿ ಕುಳಿತು.]

ದಶರಥ : ಕೈಕಾ. ಕೈಕಾರಾಣಿ

[ಅವಳ ಮೈಮುಟ್ಟಿಲೆಳಸುತ್ತಾನೆ]

ಕೈಕಾ : (ವೈಕೊಡವಿ) ನನ್ನನ್ನು ಮುಟ್ಟಬೇಡಿ.

ದಶರಥ : ಏನಾಯಿತು ಹೇಳಬಾರದೇ? ಯಾರು ನಿನಗೆ ಅಸಮಾಧಾನ ವನ್ನುಂಟುಮಾಡಿದವರು. ಅವರು ಯಾರೇ ಆಗಲಿ ಶಿಕ್ಷಿಸುತ್ತೇನೆ ಹೇಳು.

[ಕೈಕಾದೇವಿ ಹುಲಿಯಂತೆ ಎದ್ದು ಕುಳಿತು]

ಕೈಕಾ : ನೀವೇ ಆಗಿದ್ದರೆ...........

ದಶರಥ : ನಾನೂ ಶಿಕ್ಷಾರ್ಹನೇ! ಅಯೋಧ್ಯೆಯ ನ್ಯಾಯಸ್ಥಾನ ಪ್ರಭು, ಪ್ರಜೆ ಎಂಬ ಭೇದ ಮಾಡುವುದಿಲ್ಲ.

ಕೈಕಾ : ನಿಮ್ಮ ಅಯೋಧ್ಯೆಯ ನ್ಯಾಯಸ್ಥಾನ ಮೋಸಗಾರರಿಗೆ ಯಾವ ಶಿಕ್ಷೆ ವಿಧಿಸುತ್ತದೆ?

ದಶರಥ : ಈಗ ಮೋಸಮಾಡಿದವರು ಯಾರು?

ಕೈಕಾ : ನೀವು—ಅಯೋಧ್ಯೆಯ ಪ್ರಭುಗಳು.

ದಶರಥ : ನಾನು! ಮೋಸಗಾರ! ನಾನೇನು ಮೋಸಮಾಡಿದೆ ರಾಣಿ?

ಕೈಕಾ : ಏನು ಮೋಸವೇ? ರಾಮನಿಗೆ ನಾಳೆ ರಾಜ್ಯಾಭಿಷೇಕಮಾಡುವ ವಿಷಯವನ್ನು ನನಗೆ ಒಮ್ಮೆಯಾದರೂ ಹೇಳಿದಿರಾ?

ದಶರಥ : (ಗಹಗಹಿಸಿ ನಕ್ಕು) ಇಷ್ಟೇ ತಾನೆ! ನನ್ನಿಂದ ಯಾವ ಮಹಾಪರಾಧ ವಾಯಿತೋ ಎಂದು ಹೆದರಿದೆ. ಆ ಸಂತೋಷದ ಸುದ್ದಿಯನ್ನು ನಾನು ನಿನಗೇಕೆ ಹೇಳಲಿಲ್ಲ ಬಲ್ಲೆಯಾ? ಶುಭ್ರ ಸ್ನಾತನಾಗಿ, ದಿವ್ಯಾಲಂಕಾರ ಭೂಷಿತನಾಗಿ, ಸತೀದ್ವಿತೀಯನಾಗಿ ನಿನ್ನ ರಾಮಚಂದ್ರನೇ ಬಂದು ನಿನಗೆ ಸಂತೋಷದ ಒಸಗೆ ಹೇಳಲಿ ಎಂದು ಸುಮ್ಮನಿದ್ದೆ. ಏಳು— ಮನಃಕ್ಲೇಶವನ್ನು ದೂರಮಾಡಿಕೊಂಡು ಸಂತೋಷವಾಗಿರು. ಇಂದು ಅಯೋಧ್ಯೆಯ ಪ್ರಜರೆಲ್ಲ—ಇಡಿಯ ವಿಶ್ವವೇ ರಾಮನ ಯಶಸ್ಸಿನಲ್ಲಿ ಬೆರೆತು ಸುಖದಲ್ಲಿ ಓಲಾಡುತ್ತಿರುವಾಗ ರಾಮನ ಜನನಿ, ಅಯೋಧ್ಯೆಯ ರಾಣಿ ದುಃಖಿಯಾಗಿರಬಾರದು. ನಿನಗೇನು ಬೇಕು ಹೇಳು ಕೊಡು ತ್ತೇನೆ. ನಿನ್ನನ್ನು ಬಹುವಾಗಿ ಪ್ರೀತಿಸುವ ರಾಮ ನಿನ್ನ ದುಃಖವನ್ನು ಕಂಡರೆ ಮಮ್ಮಲ ಮರುಗುತ್ತಾನೆ.

ಕೈಕಾ : ನನಗೇನು ಬೇಕಾದರೂ ಕೊಡುವಿರಾ?

ದಶರಥ : ಸೂರ್ಯವಂಶದವರು ಸುಳ್ಳಾಡಿದ್ದುಂಟೇ?

ಕೈಕಾ : (ಹಾರ್ದವದಿಂದ) ದೇವಾಸುರ ಯುದ್ಧಕಾಲದಲ್ಲಿ ನೀವು ಕೊಟ್ಟಿದ್ದ ಎರಡು ವರಗಳು ಹಾಗೇ ಉಳಿದಿವೆ. ಅಂದು ನಾನು ಅವುಗಳನ್ನು ಉಪಯೋಗಿಸಿಕೊಳ್ಳಲಿಲ್ಲ.

ದಶರ : ಇಂದೇನು ಬೇಕು ಹೇಳು ?

ಕೈಕಾ : ನಾನು ಕೇಳುವ ವರಗಳು ಎಂಥವೇ ಆಗಿರಲಿ ಕೊಡುತ್ತೇನೆಂದು ನೀವು ಪ್ರಮಾಣ ಮಾಡಬೇಕು.

ದಶರಥ : ಮರುಳೇ, ನನ್ನ ಮಾತಿಗಿಂತ ಪ್ರಮಾಣ ಹೆಚ್ಚೇ? ನೀನೂ–ಶ್ರೀರಾಮಚಂದ್ರ ಇಬ್ಬರೂ ನನ್ನ ಎರಡು ಕಣ್ಣುಗಳು. ನಿಮಗಾಗಿ ನಾನು ಏನು ಮಾಡಲು ಸಿದ್ಧನಾಗಿಲ್ಲ. ಪ್ರಮಾಣ ಬೇಕೆಂದೆಯಲ್ಲವೇ ಸ್ವೀಕರಿಸು–ನನ್ನ ಪೂರ್ವಪಿತೃಗಳ ಆಣೆ, ನನ್ನಾಣೆ, ಶ್ರೀರಾಮ ಚಂದ್ರನಾಣೆಗೂ ನಾನು ವಚನಭ್ರಷ್ಟನಾಗುವುದಿಲ್ಲ. ಕೈಕಯಿಯ ಈಪ್ಸಿತವನ್ನು ಪೂರೈಸುತ್ತೇನೆ.

ಕೈಕಾ : ಹಾಗಾದರೆ ಚಿತ್ತವಿಟ್ಟು ಕೇಳಿ. ನನ್ನ ಮಗ ಭರತನಿಗೆ ಯುವರಾಜ ಪಟ್ಟಾಭಿಷೇಕ ಮಾಡಬೇಕು–ರಾಮನಿಗೆ ಹದಿನಾಲ್ಕುವರ್ಷ ವನವಾಸ ವಿಧಿಸಬೇಕು.

ದಶರಥ : (ಉದ್ವೇಗದಿಂದ) ಕೈಕಾ–ಕೈಕಾ ಪರಿಹಾಸ್ಯಮಾಡಬೇಡ.

ಕೈಕಾ : ಪರಿಹಾಸ್ಯವಲ್ಲ ಪ್ರಭೂ–ನನಗೆ ಬೇಕಾದುದನ್ನು ಹೇಳಿದ್ದೇನೆ.

ದಶರಥ : ರಾಮನಿಗೆ–ನನ್ನ ರಾಮನಿಗೆ ವನವಾಸವೇ ?

ಕೈಕಾ : ಹೌದು–ವನವಾಸ !

ದಶರಥ : ಹಾ ! ರಾಮ–ರಾಮಚಂದ್ರ!!

[ಮೂರ್ಛಿತನಾಗಿ ಬೀಳುವನು]

[ಕೈಕಾದೇವಿಯೂ ಅವಳ ಚೇಟಿಯಾದ ಮದನಿಕೆಯೂ ದೊರೆಗೆ ಶಿಶ್ರೂಷೆ ಮಾಡುವರು.]

[ದೊರೆ ಮೂರ್ಛೆತಿಳಿದೆದ್ದು]

ದಶರಥ : ನನ್ನ ಕಿವಿಗಳೇ ನನಗೆ ಮೋಸಮಾಡುತ್ತಿಲ್ಲವಷ್ಟೆ! ರಾಮನಿಗೆ ವನವಾಸ ವಿಧಿಸಬೇಕೆಂದು ನೀನೇ ಹೇಳಿದೆಯಾ ?

ಕೈಕಾ : ಹೇಳಿದೆ ?

ದಶರಥ : ಅವನ ಯಾವ ಅಪರಾಧಕ್ಕಾಗಿ!—ರಾಮನನ್ನು ನಾನು ಕರೆದು 'ಮಗೂ, ರಾಮಚಂದ್ರ, ನಿನಗೆ ವನವಾಸ ವಿಧಿಸಿದ್ದೇನೆ. ಕಾಡಿಗೆ ಹೋಗು' ಎಂದರೆ ಮರುಮಾತಿಲ್ಲದೆ ಹೊರಟುಹೋಗುತ್ತಾನೆ. ಸತ್ಯವೇ ಮೂರ್ತೀಭವಿಸಿದಂತಿರುವ ರಾಮಚಂದ್ರನಿಗೆ ಇಂಥ ಅಪಚಾರವನ್ನು ನಾನು ಹೇಗೆ ಮಾಡಲಿ? ಕೈಕಾ–ಪ್ರಸನ್ನಳಾಗು ದೇವಿ. ನೀನು

ಕೋರಿದುದನ್ನು ಕೊಡುತ್ತೇನೆ. ಅಖಂಡ ಪೃಥ್ವಿಯನ್ನು ನಿನ್ನ ಪದತಲ ದಲ್ಲಿ ಹಾಕುತ್ತೇನೆ– ನನ್ನ ರಾಮನನ್ನು ವನವಾಸಕ್ಕೆ ಅಟ್ಟಬೇಡ.

**ಕೈಕಾ :** ಕೊಟ್ಟ ವಚನವನ್ನು ಪಾಲಿಸುವ ಲಕ್ಷಣವೇ ಹೀಗಿರುವಾಗ ಕೋರಿ ದುದನ್ನು ಬೇರೆ ನೀವು ಕೊಡುವಿರಲ್ಲವೇ? ಧರ್ಮಾತ್ಮರಾದ ನೀವು ಕೊಟ್ಟ ವಚನವನ್ನು ಪರಿಪಾಲಿಸಲು ಇಚ್ಛಿಸದೆ ಹೀಗೆ ಮರುಳಾಗಬಾರದು. ನಾನು ಕೇಳಿದ ವರಗಳನ್ನುಳಿದು ನನಗೆ ಬೇರೆ ಯಾವುದೂ ಬೇಡ.

**ದಶರಥ :** ಕೈಕಾ, ನಿನ್ನ ಅವಿಚಾರದಿಂದ ಆಗುವ ಅನರ್ಥವನ್ನು ಯೋಚಿಸು. ರಾಮ ಕಾಡಿಗೆ ಹೋದರೆ ನಾನು ಜೀವದಿಂದುಳಿಯಲು ಸಾಧ್ಯವಿಲ್ಲ, ನನ್ನ ಜತೆ ಕೌಸಲ್ಯೆ, ಸುಮಿತ್ರೆಯರು ಪ್ರಾಣ ನೀಗಿಕೊಳ್ಳುತ್ತಾರೆ. ಅಯೋಧ್ಯೆಯ ಸಮಸ್ತ ಪ್ರಜರೂ ನಿನ್ನನ್ನು ಪತಿಘಾತುಕಿ ಎಂದು ನಿಂದಿಸುತ್ತಾರೆ. ನಿನ್ನ ಮಗ ಭರತ ರಾಜ್ಯ ಕಳೆದುಕೊಂಡು ಪರದೇಶಿಯಾಗುತ್ತಾನೆ.

**ಕೈಕಾ :** ಮುಂದೆ ಆಗಬಹುದಾದ ಅನರ್ಥವನ್ನು ಎದುರಿಸಲು ನಾನು ಸಿದ್ಧಳಾಗಿದ್ದೇನೆ.

**ದಶರಥ :** ನೀನು ಹೆಣ್ಣಲ್ಲ– ಹೆಮ್ಮಾರಿ. ಇಕ್ಷ್ವಾಕುವಂಶವನ್ನು ತೊಡೆಯಲು ಹುಟ್ಟಿರುವ ದಳ್ಳುರಿ. ಲೋಕಕ್ಕೆ ವಂಚನೆಮಾಡಲು ಅನೀತಿ ಕ್ರೌರ್ಯ, ಕಾಠಿಣ್ಯವೇ ಹೆಣ್ಣು ರೂಪ ಹೊತ್ತು ನಿಂತಿವೆ. ನಾನು ವಚನಭ್ರಷ್ಟನಾಗಿ ರೌರವ ನರಕಕ್ಕೆ ಹೋದರೂ ಚಿಂತೆಯಿಲ್ಲ– ರಾಮನನ್ನು ಕಾಡಿಗೆ ಅಟ್ಟಲಾರೆ. (ದೈನ್ಯದಿಂದ) ಬೇಡ ಕೈಕಾ– ನನ್ನ ಮುದ್ದು ರಾಣಿ. ಮೂರ್ಧಾಭಿಷಿಕ್ತನಾಗುವೆನೆಂಬ ಉತ್ಸಾಹದಲ್ಲಿ ಬರುವ ರಾಮನಿಗೆ ಈ ಸುದ್ದಿ ತಿಳಿಸಿದ ಮೇಲೆ ಬಿಸಿಲ ಝಳಕ್ಕೆ ಬಾಡುವ ಕೋಮಲ ಕುಸುಮದಂತೆ ಕಳೆಗುಂದುವ ಅವನ ಮುಖನನ್ನು ನಾನು ಹೇಗೆ ನೋಡಲಿ– ನೀನು ಹೇಗೆ ನೋಡಬಲ್ಲೆ? ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ– ನಿನ್ನ ಪಾದಮುಟ್ಟಿ ಪ್ರಾರ್ಥಿಸಿ ಕೊಳ್ಳುತ್ತೇನೆ ಈ ದುಷ್ಟ ಆಲೋಚನೆಯನ್ನು ತ್ಯಜಿಸು.

**ಕೈಕಾ :** ಕೊಟ್ಟ ವಚನವನ್ನು ಪರಿಪಾಲಿಸಲು ಹಿಂಜರಿಯುತ್ತಿರುವ ನೀವು ಇಕ್ಷ್ವಾಕುವಂಶದ ಕೀರ್ತಿಸ್ತಂಭರಲ್ಲವೇ?

**ದಶರಥ :** ಪರಮ ಸಾಧ್ವಿಯಾದ ಕೌಸಲ್ಯೆಗೆ ನಾನು ಹೇಗೆ ಮುಖತೋರಿಸಲಿ? ನನ್ನ ಪ್ರಜಾಸ್ತೋಮದ ಮುಂದೆ ನಾನು ನಿಲ್ಲಬಲ್ಲೆನೇ? ಹೆಂಡತಿ ಎನಿಸಿ ಕೊಂಡ ಹೆಣ್ಣು ರಕ್ಕಸಿಗೆ ನಿಮ್ಮ ರಾಮನನ್ನು ಬಲಿಕೊಟ್ಟಿಸಿದೆ ಎಂದು

ಹೇಗೆ ಹೇಳಲಿ ?–ಕೈಕಾ ನಿನಗೆ ಕೈಮುಗಿದು ಬೇಡಿಕೊಳ್ಳುತ್ತೇನೆ, ನಿನ್ನ ಚರಣವಿಡಿದು ಪ್ರಾರ್ಥಿಸಿಕೊಳ್ಳುತ್ತೇನೆ, ನನ್ನ ರಾಮನನ್ನು ರಕ್ಷಿಸು.

**ಕೈಕಾ :** ನನ್ನ ದೃಢನಿಶ್ಚಯ ಯಾವ ಕಾರಣಕ್ಕೂ ಬದಲಾಗಲು ಸಾಧ್ಯವಿಲ್ಲ.

**ದಶರಥ :** (ಹುಚ್ಚನಂತಾಗುವನು) ಅನಾರ್ಯೆ – ಪಶ್ಚಾತ್ತಾಪದ ತಪ್ತಜ್ವಾಲೆ ನಿನ್ನನ್ನು ದಹಿಸಲಿ. ನನ್ನ ಒಡಲುರಿಯುತ್ತಿರುವಂತೆ ನಿನ್ನ ಒಡಲು ಉರಿದು ಬೀಳಲಿ. ನಿನಗೆ ಏಳೇಳು ಜನ್ಮಕ್ಕೂ ಸದ್ಗತಿ ಪ್ರಾಪ್ತವಾಗದಿರಲಿ.

[ಪುನಃ ಮೂರ್ಛಿತನಾಗುವನು.]

[ಕೈಕಾ ಉಪಚರಿಸುತ್ತಿರುವುದನ್ನು ಕಂಡು ಕೋಪದಿಂದ ಆಕೆಯ ಕೈಯನ್ನು ಕಿತ್ತೆಸೆದು]

ನಡೆಯಾಚೆ, ನನ್ನನ್ನು ಮುಟ್ಟಬೇಡ – ನನ್ನ ಕಣ್ಣುಮುಂದೆ ಸುಳಿಯಬೇಡ. (ಶೂನ್ಯದೃಷ್ಟಿಯಿಂದ ದೂರ ದಿಗಂತವನ್ನು ನೋಡಿ) ಇರುಳು ಕಳೆಯದಿರಲಿ – ಸೂರ್ಯಾಸ್ತವಾಗದಿರಲಿ – ಲೋಕವೆಲ್ಲಾ ಚಿರಕತ್ತಲೆಯಲ್ಲಿ ಮುಳುಗಿರಲಿ – ರಾಮನನ್ನು ಹೊರದೂಡುವ ಲೋಕದಲ್ಲಿ ಬೆಳಕೆಲ್ಲಿಂದ ಬಂತು ? ಆದಿತ್ಯ ಭಗವಾನ್, ರಾಮನನ್ನು ಕಾಡಿಗಟ್ಟುವ ಈ ಕೈಕಾರಕ್ಕಸಿ ನಿನ್ನನ್ನೂ ಕಾಡಿಗಟ್ಟುತ್ತಿದ್ದಾಳೆ ತಂದೆ...........

[ಎನ್ನುತ್ತ ಮೂರ್ಛಿತನಾಗಿ ಬೀಳುವನು]

೭

[ಅಯೋಧ್ಯಾ ನಗರಿಯಲ್ಲಿ ವಿಶೇಷ ಸಂಭ್ರಮ, ತಮ್ಮ ಆರಾಧ್ಯಮೂರ್ತಿ ಶ್ರೀರಾಮಚಂದ್ರನಿಗೆ ಪಟ್ಟವಾಗುವುದೆಂಬ ಸಂತೋಷದಿಂದ ಪುರಜನ ಊರನ್ನು ಅಲಂಕರಿಸುತ್ತಿದ್ದಾರೆ. ಮನೆ ಮನೆಗೂ ಸಾರಣೆ ಕಾರಣೆ ನಡೆದಿದೆ. ಹೆಣ್ಣು ಮಕ್ಕಳು ಸುಂದರವಾಗಿ ರಂಗವಲ್ಲಿ ಇಡುತ್ತಿದ್ದಾರೆ. ಕೆಲಸದಿಂದ ಆಯಾಸಗೊಂಡವರು ಅಲ್ಲಲ್ಲಿ ಗುಂಪುಕೂಡಿ ಹಾಡು, ಕುಣಿತದಲ್ಲಿ ಮೈಮರೆತಿದ್ದಾರೆ. ಬೀದಿಗಳನ್ನು ಬಗೆಬಗೆಯ ತಳಿರು, ತೋರಣ, ಹೂಗಳಿಂದ ಅಲಂಕರಿಸುತ್ತಿದ್ದಾರೆ. ಸಾಲುಕಟ್ಟಿ ಜನ ನೀರು ಹೊತ್ತು ತಂದು ಬೀದಿಗಳನ್ನು ಶುಚಿಮಾಡುತ್ತಿದ್ದಾರೆ, ಎಲ್ಲರ ಮುಖದಲ್ಲಿ ಗೆಲುವು, ಸುಮ್ಮಾನ ಚಿಮ್ಮುತ್ತಿದೆ.]

೮

[ಸೂರ್ಯೋದಯವಾಗುತ್ತದೆ. ಅರಮನೆಯಲ್ಲಿ ಮಂಗಳವಾದ್ಯಗಳು ಮೊಳಗುವವು. ಆಸ್ಥಾನ ಗಾಯಕರು ಉದಯರಾಗ ಹಾಡುವರು.

ಅರಮನೆಯ ಸಭಾಭವನದಲ್ಲಿ ದಾಸದಾಸೀಜನರು ಪಟ್ಟಾಭಿಷೇಕಕ್ಕೆ ಅಣಿಮಾಡುತ್ತಿರುವರು,

ಕೌಸಲ್ಯಾದೇವಿಯ ಅಂತಃಪುರದಲ್ಲಿ ಆಕೆ ಪೂಜೆ ಮುಗಿಸಿ ಬ್ರಾಹ್ಮಣರಿಗೂ, ಸುಮಂಗಲಿಯರಿಗೂ ನಾನಾ ದಾನಗಳನ್ನು ಕೊಡುತ್ತಿದ್ದಾಳೆ. ಸುಮಿತ್ರೆ ಕೌಸಲ್ಯೆಗೆ ಎಲ್ಲ ಬಗೆಯಿಂದಲೂ ನೆರವಾಗುತ್ತಿದ್ದಾಳೆ.

ಪಟ್ಟಾಭಿಷೇಕದ ಮಹೂರ್ತ ಸಮೀಪಿಸಿತೆಂದು ತಿಳಿಸಲು ಸುಮಂತ್ರ ಕೈಕಾದೇವಿಯ ಅಂತಃಪುರದ ಬಳಿಗೆ ಬರುತ್ತಾನೆ.

ವಿಷಣ್ಣವದನನಾಗಿ, ಶೂನ್ಯದೃಷ್ಟಿಯನ್ನು ನೆಟ್ಟು, ಮತಿಗೆಟ್ಟವನಂತೆ ಕುಳಿತಿರುವ ದೊರೆಯನ್ನು ನೋಡಿ ಸುಮಂತ್ರ ಚಕಿತನಾಗುತ್ತಾನೆ. ದೊರೆಯ ಸಮೀಪಕ್ಕೆ ಬಂದು]

**ಸುಮಂತ್ರ** : ಮಹಾರಾಜಾ, ಪಟ್ಟಾಭಿಷೇಕದ ಮುಹೂರ್ತ ಸಮೀಪಿಸಿತೆಂದು ಅರಿಕೆಮಾಡಲು ಪೂಜ್ಯ ವಶಿಷ್ಠರು ಆಜ್ಞಾಪಿಸಿದ್ದಾರೆ.

**ದಶರಥ**; (ಕಂಬನಿ ಧಾರಾಕಾರವಾಗಿ ಹರಿಯುವುದು) ಸುಮಂತ್ರ.... ಸುಮಂತ್ರ....

**ಸುಮಂತ್ರ** : (ಕೈಕಾದೇವಿಯ ಕಡೆ ತಿರುಗಿ) ತಾಯೀ, ಮಹಾರಾಜರ ದುಗುಡಕ್ಕೆ ಕಾರಣವೇನು ?

[ಕೈಕಾದೇವಿ ಸುಮಂತ್ರನಿಗೆ ಉತ್ತರ ಕೊಡುವುದಿಲ್ಲ]

**ದಶರಥ** : ಸುಮಂತ್ರ, ಬೇಗ ಹೋಗು, ನನ್ನ ರಾಮನನ್ನು ಬರಮಾಡು. ಅವನನ್ನು ಕಾಣದೆ ನಾನು ಒಂದು ಕ್ಷಣವೂ ಬದುಕಿರಲಾರೆ.

[ಸುಮಂತ್ರ ಕಳವಳಗೊಂಡು ಮತ್ತೆ ಕೈಕಾದೇವಿಯ ಮುಖನೋಡುತ್ತಾನೆ. ಅವನ ಸಮಸ್ಯೆ ಬಗೆ ಹರಿಯುವುದಿಲ್ಲ. ದೊರೆಗೂ ಕೈಕಾದೇವಿಗೂ ನಮಸ್ಕರಿಸಿ ನಿಷ್ಕ್ರಮಿಸುತ್ತಾನೆ.]

೬

[ಸೀತಾದೇವಿಯ ಅಂತಃಪುರ. ಸರ್ವಾಲಂಕಾರ ಭೂಷಿತೆಯಾದ ಸೀತಾ ಶ್ರೀರಾಮಚಂದ್ರನನ್ನು ತಾನೇ ಅಲಂಕರಿಸುತ್ತಿದ್ದಾಳೆ.]

**ರಾಮ** : ಯುವರಾಣಿ ದಾಸೀವೃತ್ತಿ ಕೈಗೊಳ್ಳುವುದರ ಔಚಿತ್ಯವೇನು ಸೀತಾ?

**ಸೀತಾ** : ಅಯೋಧ್ಯೆಗೆ ನಾನು ಯುವರಾಣಿ, ಆದರೆ ಆರ್ಯಪುತ್ರನಿಗೆ ನಾನು ದಾಸಿಯೇ ?

**ರಾಮ** : ನನ್ನ ಹೃದಯೇಶ್ವರಿ ದಾಸಿಯಾಗಲು ಶಕ್ಯವಿಲ್ಲ—ಅಂದು ಸ್ವಯಂವರ ಮಂಟಪದಲ್ಲಿ ಪೂಜ್ಯಮಾವಂದಿರು ‘ ರಾಮಚಂದ್ರಾ, ನನ್ನ ಮಗಳು

ಜಾನಕಿ ನಿನ್ನ ಧರ್ಮ ಕಾಯುವ ಧರ್ಮದೇವತೆಯಾಗಲೆಂದೆ ಸನ್ನ ಹರಕೆ ' ಎಂದರು. ರಾಜರ್ಷಿಗಳ ಮಾತು ಸುಳ್ಳಾಗಲಿಲ್ಲ.

**ಸೀತಾ :** ಪ್ರಭೂ. ಧರ್ಮಾವತಾರನಾದ ನಿನ್ನ ಕಣ್ನೋಟ ಬಿದ್ದೆಡೆ ಧರ್ಮ ಹೂವಾಗಿ ಅರಳುತ್ತದೆ. ಜಡಶಿಲೆ ಚೇತೋಹಾರಿಯಾದ ಹೆಣ್ಣಾಗುತ್ತದೆ. ನನ್ನಂಥ ಮುಗ್ಧೆ ಮುಕ್ತೆಯಾಗುತ್ತಾಳೆ. ಧರ್ಮದೇವತೆಯಾಗುತ್ತಾಳೆ.

**ರಾಮ :** ದೇವಿ. ಇಕ್ಷ್ವಾಕು ವಂಶದ ಹಿರಿಯರಸರು ನೆಟ್ಟು ಕಾಪಾಡಿಕೊಂಡು ಬಂದಿರುವ ದಿವ್ಯಾದರ್ಶದ ಮಹಾವೃಕ್ಷವನ್ನು ಪೋಷಿಸಿಕೊಂಡು ಬರುವ ದೊಡ್ಡ ಕರ್ತವ್ಯಭಾರವನ್ನು ತಂದೆಯವರು ನನ್ನ ಮೇಲೆ ಹೊರೆಸುವರಿದ್ದಾರೆ.

**ಸೀತಾ :** ಅದು ಶ್ರೀರಾಮನನ್ನು ಅಧೀರಮಾಡಬಲ್ಲುದೇ ?

**ರಾಮ :** ರಾಮನನ್ನು ಅಧೀರ ಮಾಡಬಹುದೋ ಏನೋ. ಸೀತಾರಾಮನನ್ನು ಅಧೀರಮಾಡಲು ಸಾಧ್ಯವಿಲ್ಲ.

(ದಾಸಿ ಪ್ರವೇಶಿಸಿ)

**ದಾಸಿ :** ರಾಜಭದ್ರನಿಗೆ ಜಯವಾಗಲಿ. ಆರ್ಯ ಸುಮಂತ್ರರು ತಮ್ಮ ದರ್ಶನಾಕಾಂಕ್ಷಿಗಳಾಗಿ ದಯೆಮಾಡಿಸಿದ್ದಾರೆ.

[ರಾಮ ಎದ್ದುಹೊಗಿ ಸುಮಂತ್ರನನ್ನು ಸ್ವಾಗತಿಸಿ ಅವನೊಂದಿಗೆ ಬರುವನು]

**ರಾಮ :** ಆರ್ಯಾ, ಸಭಾಮಂದಿರಕ್ಕೆ ಹೋಗಲು ವೇಳೆಯಾಯಿತೇ ? ತೀರ್ಥರೂಪರು ಸಿದ್ಧವಾಗಿರುವರೇ ?

**ಸುಮಂತ್ರ :** ಆಯುಷ್ಮಂತ, ದಶರಥ ಮಹಾರಾಜರು ತಮ್ಮನ್ನು ಕೂಡಲೆ ಕರೆದುಕೊಂಡು ಬರಬೇಕೆಂದು ನನ್ನನ್ನು ಕಳುಹಿಸಿಕೊಟ್ಟಿದ್ದಾರೆ.

**ರಾಮ :** ಆರ್ಯಾ, ನಿಮ್ಮ ರಾಮನನ್ನೇಕೆ ಬಹುವಚನದಲ್ಲಿ ಸಂಬೋಧಿಸಿದಿರಿ. ನಾನು ಯುವರಾಜನಾದರೇನು, ಮಹಾರಾಜನಾದರೇನು, ಚಕ್ರವರ್ತಿಯಾದರೇನು – ನೀವು ಆಡಿಸಿ ಬೆಳಸಿದ ಮಗುವಲ್ಲವೇ ?

[ಸುಮಂತ್ರ ಉತ್ತರಕೊಡದೆ ಪಕ್ಕಕ್ಕೆ ತಿರುಗಿ ಕಂಬನಿಯನ್ನು ತೊಡೆಯುವನು]

**ರಾಮ :** ದೇವಿ, ಅರಮನೆಗೆ ಹೋಗಿಬರಲು ಅನುಮತಿ ಕೊಡು.

**ಸೀತಾ :** ಆರ್ಯಪುತ್ರನಿಗೆ ಶುಭವಾಗಲಿ.

[ರಾಮ ಸುಮಂತ್ರನೊಂದಿಗೆ ಹೋಗುವನು]

## ೧೦

[ಕೈಕಾದೇವಿಯ ಅಂತಃಪುರ. ರಾಮನನ್ನು ಕಂಡೊಡನೆಯೇ ದಶರಥ ಮಹಾರಾಜ ಆರ್ತಸ್ವರದಿಂದ]

**ದಶರಥ**: ರಾಮ, ರಾಮಚಂದ್ರ ಬಂದೆಯಾ?

[ರಾಮ ತಂದೆಯ ಬಳಿ ಹೋಗಿ ಕೂಡುವನು. ದಶರಥ ಮಗನ ತಲೆ ನೇವರಿಸಿ, ಮುಖದಮೇಲೆ ಮೃದುವಾಗಿ ಕೈಯಾಡಿಸಿ, ಅವನ ಕಣ್ಣಲ್ಲಿ ಕಣ್ಣಿಟ್ಟು ನೋಡುವನು. ದುಃಖ ಉಕ್ಕಿಬರುವುದು. ರಾಮನನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅಳುವನು.]

**ರಾಮ**: ಏನಾಯಿತು? ಏನಾಯಿತು ತಂದೆ. ಪ್ರಭುವಿಗೆ ಯಾರಾದರೂ ಅಪಚಾರ ತೋರಿದರೇ? ಮನಸ್ಸಿಗೆ ನೋವಾಗುವ ಮಾತನಾಡಿದರೇ?

[ದಶರಥ ಉತ್ತರ ಕೊಡದೆ ಅಳುತ್ತಿರುವನು.]

**ರಾಮ**: (ಕೈಕಾದೇವಿಯ ಕಡೆ ತಿರುಗಿ) ಅಮ್ಮಾ, ತಂದೆಯವರು ಏಕಿಷ್ಟು ಉದ್ವಿಗ್ನರಾಗಿದ್ದಾರೆ – ನನ್ನಿಂದ ಏನಾದರೂ ಅಪಚಾರವಾಯಿತೇ?

**ಕೈಕಾ**: ನಿಮ್ಮ ತಂದೆ ಕೊಟ್ಟ ವಚನವನ್ನು ಪೂರೈಸಲಾರದೆ ದುಃಖಪಡುತ್ತಿದ್ದಾರೆ.

**ರಾಮ**: ವಚನಭಂಗದ ಮಹಾಪರಾಧವನ್ನು ಇಕ್ಷ್ವಾಕು ವಂಶದವರು ಯಾರೂ ಮಾಡಿಲ್ಲ ತಾಯಿ.

**ದಶರಥ**: ಬೇಡ – ಕೈಕಾ ಹೇಳಬೇಡ. ಕೈಜೋಡಿಸಿ ನಿನ್ನನ್ನು ಬೇಡಿಕೊಳ್ಳುತ್ತೇನೆ.

**ರಾಮ**: ಇದೆಂಥ ಸಂದಿಗ್ಧ! ಆರ್ಯ ಸುಮಂತ್ರ, ಪೂಜ್ಯ ತಂದೆಯವರ ದುಃಖದ ಕಾರಣವನ್ನು ನೀವು ಬಲ್ಲಿರಾ?

[ಸುಮಂತ್ರ ಇಲ್ಲವೆಂದು ತಲೆಯಲ್ಲಾಡಿಸುವನು]

**ಕೈಕಾ**: ದೇವಾಸುರ ಯುದ್ಧಕಾಲದಲ್ಲಿ ನಿಮ್ಮ ತಂದೆ ನನಗೆ ಎರಡು ವರ ಪ್ರಧಾನ ಮಾಡಿದ್ದರು. ಅವುಗಳನ್ನು ನಾನಾಗ ಉಪಯೋಗಿಸಿಕೊಳ್ಳಲಿಲ್ಲ. ಈಗ ನನಗೆ ಆ ವರಗಳನ್ನು ನಡೆಸಿಕೊಡಿ ಎಂದು ಕೇಳಿದೆ.

**ರಾಮ**: ನ್ಯಾಯವಾದದ್ದೇ. ತಂದೆಯವರು ಅವಶ್ಯಕವಾಗಿ ನಡೆಸಿಕೊಡುತ್ತಾರೆ.

**ದಶರಥ**: ಅವಳಿಗೆ ಬೇಕಾದದ್ದು ವರಗಳಲ್ಲ………..ನನ್ನ ಸಾವು- ಬೇಡ ಕೈಕಾ, ಈಗಲಾದರೂ ಹಟಮಾರಿತನ ಬಿಡು.

ರಾಮ : ಅಮ್ಮ, ಆ ವರಗಳು ಯಾವುವೆಂದು ನಾನು ಕೇಳಬಹುದೇ?

ಕೈಕಾ : ನಿನ್ನ ಬದಲು ಭರತನಿಗೆ ರಾಜ್ಯಾಭಿಷೇಕ, ನಿನಗೆ ಹದಿನಾಲ್ಕು ವರ್ಷಗಳ ವನವಾಸ.

[ರಾಮನ ಮುಖ ಕ್ಷಣಕಾಲ ಕಾಂತಿಹೀನವಾಗುತ್ತದೆ. ಮರುಕ್ಷಣವೇ ಅವನು ಮುಗುಳ್ನಗೆ ನಗುತ್ತಾನೆ. ದಶರಥ ಮುಖ ಮುಚ್ಚಿಕೊಂಡು ದುಃಖಿಸುತ್ತಾನೆ]

ಸುಮಂತ್ರ : ರಾಮಭದ್ರನಿಗೆ ವನವಾಸ-ಯಾವ ಅಪರಾಧಕ್ಕಾಗಿ!

ಕೈಕಾ: ಮಹಾರಾಜರ ವಚನಪೂರೈಕೆಗಾಗಿ.

ಸುಮಂತ್ರ : ಇದಕ್ಕೆ ಅಯೋಧ್ಯೆಯ ಪ್ರಜರು ಎಂದಿಗೂ ಸಮ್ಮತಿಸುವುದಿಲ್ಲ.

ಕೈಕಾ : ಅಯೋಧ್ಯೆಯ ರಾಜನ ಗೌರವ ಕಾಯಬೇಕಾದುದು ಪ್ರಜರ ಧರ್ಮ

ಸುಮಂತ್ರ : ಅಧರ್ಮವನ್ನು ಧರ್ಮ ಕಾಯಬೇಕೇ?

ಕೈಕಾ; ಯಾವದು ಧರ್ಮ ? ಯಾವದು ಅಧರ್ಮ ?

ಸುಮಂತ್ರ : ಜೇಷ್ಠಪುತ್ರನಿಗೆ ರಾಜ್ಯ ಸಲ್ಲಬೇಕಾದುದು ಧರ್ಮ. ಭರತನಿಗೆ ಸಂದರೆ ಅಧರ್ಮ!

ಕೈಕಾ : ಭರತನೂ ದಶರಥಪುತ್ರನೇ!

ಸುಮಂತ್ರ : ಹಾಗೇ ಲಕ್ಷ್ಮಣ ಶತ್ರುಘ್ನರೂ ದಶರಥಪುತ್ರರೇ!

ಕೈಕಾ : ನೀವು ಧರ್ಮವೆಂದು ನಂಬಿರುವುದು ಕೇವಲ ಸಮಯಾಚಾರ. ಸಮಯಾಚಾರ ಬದಲಾಯಿಸುವ ಹಕ್ಕು ಅರಸನಿಗಿದೆ.

ಸುಮಂತ್ರ : ಪ್ರಜಾಭಿಪ್ರಾಯಕ್ಕೆ ವಿರೋಧವಾಗಿ ಹೋಗುವ ಅರಸನನ್ನು ನಿಗ್ರಹಿಸುವ ಹಕ್ಕು ಪ್ರಜರಿಗೂ ಇದೆ.

ರಾಮ : ಆರ್ಯ ಸುಮಂತ್ರ, ಏನು ಮಾತನಾಡುತ್ತಿರುವಿರಿ. ನಿಮ್ಮ ನುಡಿಗಳು ರಾಜದ್ರೋಹವಾಗುತ್ತವೆ.

ಸುಮಂತ್ರ : ತಾಯಿ, ನ್ಯಾಯಬದ್ಧವಾಗಿ ಶ್ರೀರಾಮಚಂದ್ರನಿಗೆ ಸಲ್ಲಬೇಕಾಗಿರುವ ರಾಜ್ಯವನ್ನು ಕಿತ್ತುಕೊಂಡು ಭರತನಿಗೆ ಕೊಡಲೆಳಸಬೇಡಿ— ರಾಮಚಂದ್ರ, ನೀನು ಈ ದುರಾಕ್ರಮಣಕ್ಕೆ ಅವಕಾಶ ಕೊಡಬಾರದು. ರಾಣಿಯ ದುಷ್ಟ ಆಶಯವನ್ನು ನಿಗ್ರಹಿಸಿ ಅಯೋಧ್ಯೆಯ ಸಿಂಹಾಸನವನ್ನೇರಬೇಕು.

ರಾಮ : ಆರ್ಯ ಸುಮಂತ್ರ, ತಾಯಿಯ ಮಾತು ಕಡೆಗಾಣಿಸಿ, ತಂದೆಯನ್ನು ವಚನಭ್ರಷ್ಟನನ್ನಾಗಿಸಿ ನಾನು ಅಯೋಧ್ಯೆಯ ರಾಜಮುಕುಟ ಧರಿಸಲೇ? ಧರ್ಮಕ್ಕಿಂತ ಈ ರಾಜ್ಯ ಅಷ್ಟು ಮಹತ್ವವಾದುದೇ? ಸತ್ಯಮಾರ್ಗವನ್ನು ತೊರೆದು ಅಯೋಧ್ಯೆಯ ರಾಜ್ಯಸೂತ್ರಗಳನ್ನು ಹಿಡಿಯುವ

ನನ್ನಿಂದ ಅಯೋಧ್ಯೆಗೆ ಕಲ್ಯಾಣವಾಗುವುದೇ? (ಕೈಕಾದೇವಿಯ ಕಡೆ ತಿರುಗಿ) ಅಮ್ಮ, ನಿನ್ನ ಅಪಾರ ಕರುಣೆಯ ಕಂದನಾದ ರಾಮ ನಿನ್ನ ಕೋರಿಕೆಯನ್ನು ನೆರವೇರಿಸುತ್ತಾನೆಂಬುದರ ಬಗ್ಗೆ ಸಂಶಯ ತಳೆಯಬೇಡ.

**ದಶರಥ :** ಇವಳು........ಈ ಕುಲಘಾತುಕಿ ಕರುಣಾಮೂರ್ತಿಯೇ?

**ರಾಮ :** ಹೌದು ತಂದೆ. ನಾನು ಮೊದಲು ಭರತ ಅನಂತರ ಎಂದು ಈ ತಾಯಿ ನನ್ನನ್ನು ಕಾಪಾಡುತ್ತ ಬಂದಿದ್ದಾಳೆ. ಈಗಲೂ ರಾಜ್ಯದ ಹೊರೆ ನನ್ನ ಹೆಗಲಿಗೆ ಭಾರವಾಗುವುದೆಂದು ಅದನ್ನು ಭರತನ ಹೆಗಲ ಮೇಲಿಡಲು ಪ್ರಯತ್ನಿಸುತ್ತಿದ್ದಾಳೆ– ತಂದೆ, ದುಃಖಿಸಬೇಡ. ನಾನು ಕಾಡುಮೇಡಿನಲ್ಲಿ ಹಕ್ಕಿ ಪಕ್ಷಿಗಳ ಸಹವಾಸದಲ್ಲಿ ಬೆಳೆದವನು. ನನಗೆ ಅರಮನೆಯ ಜೀವನಕ್ಕಿಂತ ಅರಣ್ಯಪ್ರಿಯ. ಆಸ್ಥಾನದ ವಂದಿಮಾಗಧರ ಸ್ತುತಿಗಿಂತ ಕಾಡುಹಕ್ಕಿಗಳ ಹಾಡು ಮಧುರ. ಪುರದ ವೈಭವ ವಿಲಾಸಕ್ಕಿಂತ ಅರಣ್ಯದ ಪ್ರಕೃತಿವಿಲಾಸ ಹೃದ್ಯ.—ಭರತ ನನ್ನ ತಮ್ಮ. ಅವನ ಅಂತರಂಗವನ್ನು ನಾನು ಚೆನ್ನಾಗಿ ಬಲ್ಲೆ. ನಿನ್ನನ್ನೂ ಮಾತೃದೇವತೆಯರನ್ನೂ ಪುರಜನರನ್ನೂ ಅವನು ಪರಮ ಭಕ್ತಿ ಗೌರವಗಳಿಂದ ಕಾಣುತ್ತಾನೆ. ನಾನು ತಾಯಂದಿರ ಅನುಮತಿ ಪಡೆದು ಹೊರಡಲು ಅಪ್ಪಣೆಕೊಡು.

**ದಶರಥ :** ಇಂದೇ ಹೊರಡಬೇಕೇ– ಬೇಡ, ನನ್ನ ಬಿಟ್ಟು ಹೋಗಬೇಡ. ನಿನ್ನ ಜತೆಯಲ್ಲಿಯೇ ನನ್ನ ಪ್ರಾಣವೂ ಕಾಡು ಸೇರುತ್ತದೆ.

**ರಾಮ :** ಜ್ಞಾನಿಯಾದ ನೀನು ಹೀಗೆ ದುಃಖಿಸುವುದು ತರವಲ್ಲ ತಂದೆ. ನನ್ನ ಮನಸ್ಸು ಸ್ಥಿರವಾಗಿ, ಸತ್ಯದ ಭದ್ರಬುನಾದಿಯ ಮೇಲೆ ನಿಂತಿರುವಾಗಲೇ ನಾನು ಹೊರಡಲಿಚ್ಛಿಸುತ್ತೇನೆ. ಕ್ಷುದ್ರವಾದ ದೌರ್ಬಲ್ಯ ಆವರಿಸಿ ನನ್ನ ಮನಸ್ಸಿನ ನಿಶ್ಚಯ ಅಲುಗಾಡಬಾರದು– ಹೋಗು ಸುಮಂತ್ರ, ಸೀತೆಯನ್ನು ಲಕ್ಷ್ಮಣನನ್ನು ಬರಮಾಡು. ಅವರು ಬರುವಷ್ಟರಲ್ಲಿ ನಾನು ತಾಯಂದಿರ ಅಪ್ಪಣೆ ಪಡೆದು ಪ್ರಯಾಣಕ್ಕೆ ಸಿದ್ಧನಾಗಿರುತ್ತೇನೆ.

[ಸುಮಂತ್ರ ಮೌನದಿಂದ ಹೊರಡುವನು]

[ರಾಮ ಎದ್ದು ನಿಲ್ಲಲು ದಶರಥ ಅವನ ಕೈಹಿಡಿದು]

**ದಶರಥ :** ತಪಸ್ಸಿನಿಂದ ಅಗ್ನಿದೇವನನ್ನು ಮೆಚ್ಚಿಸಿ ನಿನ್ನನ್ನು ಪಡೆದು, ನಾನೇ ನಿನ್ನನ್ನು ಅರಣ್ಯಕ್ಕೆ ದೂಡುತ್ತಿರುವೆನಲ್ಲಾ. ನಾನೆಂಥ ನಿರ್ಘೃಣನು!

**ರಾಮು :** ತಂದೆ, ನಿಯತಿ ಹೂಡಿರುವ ಮಹಾನಾಟಕದಲ್ಲಿ ಇದೊಂದು ಪ್ರವೇಶ – ಒಂದು ನಿಷ್ಕ್ರಮ. ಅದರ ಅಭೇದ್ಯ ರಹಸ್ಯವನ್ನರಿಯುವ ಸಾಹಸ ವನ್ನೇಕೆ ಮಾಡೋಣ.

[ಎದ್ದು ಹೋಗುವನು. ದಶರಥ 'ಹಾ ! ರಾಮು !' ಎನ್ನುತ್ತಾ ಮೂರ್ಛಿತ ನಾಗುವನು]

## ೧೧

[ಕೌಸಲ್ಯಾದೇವಿಯ ಅಂತಃಪುರ. ಕೌಸಲ್ಯೆ, ಸುಮಿತ್ರೆಯರಿಬ್ಬರೂ ಪಟ್ಟಾಭಿಷೇಕಕ್ಕೆ ಹೊರಡಲಣಿಯಾಗುತ್ತಿದ್ದಾರೆ. ರಾಮು ಬಂದುದನ್ನು ಮೊದಲು ಸುಮಿತ್ರೆ ನೋಡಿ]

**ಸುಮಿತ್ರೆ :** ಅಕ್ಕ, ಶ್ರೀರಾಮಚಂದ್ರ ಬಂದಿದ್ದಾನೆ.

[ಕೌಸಲ್ಯೆ ಧಾವಿಸಿ ಬಂದು ಮಗನನ್ನಪ್ಪಿಕೊಳ್ಳುತ್ತಾಳೆ]

[ರಾಮು ತಾಯಿಗೂ ಚಿಕ್ಕಮ್ಮನಿಗೂ ನಮಸ್ಕರಿಸುತ್ತಾನೆ]

**ಕೌಸಲ್ಯೆ :** ಕ್ಷಣಕಾಲ ನಿಲ್ಲು ರಾಮು – ಕಣ್ತುಂಬ ಮನದಣಿಯ ನಿನ್ನನ್ನು ನೋಡುತ್ತೇನೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ರಾಜ್ಯಾಭಿಷೇಕ ಮಾಡಿಸಿ ಕೊಳ್ಳುವ ರಾಮಚಂದ್ರ – ಇಕ್ಷ್ವಾಕು ಕುಲಲಲಾಮನಾದ ರಾಮಚಂದ್ರ ನನ್ನ ಮಗನೆಂದು ಎಷ್ಟು ಹೆಮ್ಮೆ ಪಡುತ್ತಿರುವೆನು ಬಲ್ಲೆಯಾ ?

**ಸುಮಿತ್ರೆ :** ರಾಮು ಭುವನಾಭಿರಾಮನಾಗುತ್ತಾನೆ ಅಕ್ಕ. ತನ್ನ ಶಾಂತಿ ಸದ್ಗುಣಗಳಿಂದ ಲೋಕವನ್ನೇ ರಾಮರಾಜ್ಯವನ್ನಾಗಿ ಮಾಡುತ್ತಾನೆ.

**ಕೌಸಲ್ಯೆ :** (ಹಿಗ್ಗಿನಿಂದ) ತಂಗೀ, ರಾಮು ನನ್ನನ್ನು ಕಾಣುವಂತೆ ನಿಮ್ಮೆಲ್ಲ ರನ್ನೂ ಒಂದೇ ವಿಧವಾದ ಭಕ್ತಿ, ಪ್ರೇಮಗಳಿಂದ ಕಾಣುವನಲ್ಲಾ ಎಂದು ಒಮ್ಮೊಮ್ಮೆ ಅಸೂಯೆಗೊಳ್ಳುತ್ತೇನೆ. ಮರುಕ್ಷಣವೇ ನಿಮ್ಮೆ ಲ್ಲರ – ತಂಗಿ ಕೈಕಾದೇವಿಯ ಒಲವನ್ನು ದೊರಕಿಸಿಕೊಂಡಿರುವ ನನ್ನ ರಾಮು ಎಂಥ ಪುಣ್ಯಶಾಲಿ ಎಂದು ಹಿಗ್ಗುತ್ತೇನೆ.

**ಸುಮಿತ್ರೆ :** ರಾಮಚಂದ್ರ, ಪೀಠಸ್ಥನಾಗು. ಸ್ವಲ್ಪ ಉಪಾಹಾರ ಸ್ವೀಕರಿಸುವೆ ಯಂತೆ.

**ಕೌಸಲ್ಯೆ :** ಪಟ್ಟಾಭಿಷೇಕ ಮುಗಿಯುವ ವೇಳೆಗೆ ನೆತ್ತಿಯ ಮೇಲೆ ಸೂರ್ಯ ಮೂಡುತ್ತಾನೆ. ಬಾ, ಕಂದಾ, ಊಟಮಾಡಿಕೊಂಡು ಹೋಗು.

**ರಾಮು :** ಬೇಡಮ್ಮ, ನನಗೆ ಹಸಿವಿಲ್ಲ.

[ಸುಮಂತ್ರ ಆತುರದಿಂದ ಪ್ರವೇಶಿಸುತ್ತಾನೆ]

**ಸುಮಂತ್ರ :** ಆಯುಷ್ಮಂತ, ತಾಯಂದಿರೊಡಗೂಡಿ ನೀನು ಕೂಡಲೆ ಬರ ಬೇಕೆಂದು ಮಹಾರಾಜರು ಬಯಸುತ್ತಾರೆ.

**ರಾಮ :** ಸೀತಾ ಲಕ್ಷ್ಮಣರು ಬಂದರೇ ?

**ಸುಮಂತ್ರ :** ಈ ವೇಳೆಗೆ ಬಂದಿರಬೇಕು.

[ಸುಮಂತ್ರನ ಹಿಂದೆ ರಾಮ, ಕೌಸಲ್ಯೆ, ಸುಮಿತ್ರೆ ಹೊರಡುತ್ತಾರೆ].

[ಅರಮನೆಯ ಒಳಪ್ರದೇಶದಲ್ಲಿ ಸಖೀಜನರು, ದಾಸೀಜನರು ರಾಮನಿಗೂ, ರಾಣಿಯರಿಗೂ ಗೌರವ ಸಲ್ಲಿಸುತ್ತಾರೆ. ಅರಮನೆಯ ಪರಿವಾರವರ್ಗ ಜಯ ಜಯಕಾರ ಮಾಡುತ್ತದೆ. ರಾಮ ಕತ್ತು ಬಗ್ಗಿಸಿಕೊಂಡೇ ಮುಂದಡಿ ಯಿಡುತ್ತಿರುತ್ತಾನೆ.]

[ದಶರಥ ಮಹಾರಾಜ ಮೆಲ್ವಾಸಿನ ಮೇಲೆ ದುಃಖಿಸುತ್ತಾ ಕುಳಿತಿದ್ದಾನೆ. ಅವನ ದೃಷ್ಟಿಯೊಂದು ಕಡೆ, ವಿಚಾರ ಮತ್ತೊಂದು ಕಡೆ, ಕೈಕಾದೇವಿ ದೊರೆಗೆ ಸ್ವಲ್ಪದೂರದಲ್ಲಿ ನಿಂತು ಅವನ ಚಲನವಲನಗಳನ್ನೇ ಎವೆ ಯಿಕ್ಕದೆ ನೋಡುತ್ತಿದ್ದಾಳೆ.]

[ರಾಮ ಪ್ರವೇಶಿಸಿ ತಂದೆಯ ಬಳಿಗೆ ಹೋಗಿ ನಿಲ್ಲುತ್ತಾನೆ.]

[ಕೌಸಲ್ಯೆ, ಸುಮಿತ್ರೆಯರು ದೊರೆಯ ಇಕ್ಕೆಡೆಗಳಲ್ಲಿ ಹೋಗಿ ನಿಲ್ಲುತ್ತಾರೆ]

**ದಶರಥ :** ರಾಮಚಂದ್ರ – ಬಂದೆಯಾ !

**ರಾಮ :** ಶೋಕವನ್ನು ಪರಿಹರಿಸಿಕೊಳ್ಳಬೇಕು.

**ಕೌಸಲ್ಯೆ :** ಆರ್ಯಪುತ್ರನು ಶೋಕಿಸಲು ಏನು ಕಾರಣ ?

**ದಶರಥ :** ನಿನ್ನ ಪ್ರಶ್ನೆಗೆ ಉತ್ತರ ಹೇಳಲು ನನಗೆ ಶಕ್ತಿಯಿಲ್ಲ. ನಿನ್ನ ತಂಗಿ ಕೈಕಯಿಯನ್ನು ಕೇಳು.

[ವಶಿಷ್ಠರು ಸೀತಾಲಕ್ಷ್ಮಣರೊಂದಿಗೆ ಪ್ರವೇಶಿಸುತ್ತಾರೆ. ಎಲ್ಲರೂ ಭಕ್ತಿ ಯಿಂದ ಮುನಿಪುಂಗವರಿಗೆ ನಮಸ್ಕರಿಸುತ್ತಾರೆ.]

**ಲಕ್ಷ್ಮಣ :** (ರಾಮನ ಬಳಿಗೆ ಬಂದು) ಅಣ್ಣಾ, ತಂದೆಯೇಕೆ ಹೀಗೆ ದುಃಖಿಸು ತ್ತಿರುವರು ?

**ಕೈಕಾ :** ನಾನು ಹೇಳುತ್ತೇನೆ ಕೇಳು ಲಕ್ಷ್ಮಣಾ, ನಿಮ್ಮ ತಂದೆ ಹಿಂದೆ ನನಗೆ ಎರಡು ವರಗಳನ್ನನುಗ್ರಹಿಸಿದ್ದರು. ಅವುಗಳು ಇಂದು ನನಗೆ ಬೇಕೆಂದೆ............

ಅದಕ್ಕಾಗಿ ಮಹಾರಾಜರು ದುಃಖಿಪಡುತ್ತಿದ್ದಾರೆ.

**ಲಕ್ಷ್ಮಣ :** ಆ ವರಗಳು ಯಾವವು ತಾಯೀ ?

**ಕೈಕಾ :** ರಾಮನ ಸ್ಥಳದಲ್ಲಿ ಭರತನಿಗೆ ಯುವರಾಜ್ಯಾಭಿಷೇಕವಾಗಬೇಕು – ರಾಮನಿಗೆ ಹದಿನಾಲ್ಕು ವರ್ಷ ವನವಾಸ ಪ್ರಾಪ್ತವಾಗಬೇಕು.

**ಕೌಸಲ್ಯೆ :** ರಾಮನಿಗೆ ವನವಾಸ...........

[ಮೂರ್ಛಿತಳಾಗುವಳು. ರಾಮ, ಲಕ್ಷ್ಮಣ, ಸೀತಾ, ಸುಮಿತ್ರೆಯರು ಆಕೆಯನ್ನು ಉಪಚರಿಸುವರು]

**ವಶಿಷ್ಠ:** ಕೈಕಾದೇವಿ ಇದು ಪರಿಹಾಸ್ಯಮಾಡುವ ವೇಳೆಯಲ್ಲ. ಮುಹೂರ್ತ ಸಮೀಪಿಸುತ್ತಿದೆ.

**ಕೈಕಾ :** ಪೂಜ್ಯರೇ – ನಾನು ಪರಿಹಾಸ್ಯಮಾಡುತ್ತಿಲ್ಲ.

[ಕೌಸಲ್ಯೆ ದಶರಥನ ಪಾದವಿಡಿದು]

**ಕೌಸಲ್ಯೆ :** ಆರ್ಯಪುತ್ರ, ರಾಮನಿಗೆ ಅರಣ್ಯವಾಸ ವಿಧಿಸಬೇಡಿ. ಹುಲು ಪ್ರಾಣಿಯನ್ನು ಕೂಡ ನೋಯಿಸದ ರಾಮನು ಏನು ಅಪರಾಧ ಮಾಡಿದ್ದಾನೆಂದು ಇಂಥ ಘೋರ ಶಿಕ್ಷೆ.

**ದಶರಥ :** ಕೌಸಲ್ಯಾ, ನಾನು ಮಾಡಿರುವ ಮಹಾಪರಾಧವನ್ನು ಕ್ಷಮಿಸಲು ನಿನಗಲ್ಲದೆ ಮತ್ತೆ ಯಾರಿಗೂ ಸಾಧ್ಯವಿಲ್ಲ. ಹಿರಿಯ ರಾಣಿಯೂ, ಸದ್ಗುಣ ಸಂಪನ್ನೆಯೂ, ರಾಮನ ಜನನಿಯೂ ಆದ ನಿನ್ನನ್ನು ಈ ದುಷ್ಟ ಪಿಶಾಚಿನಿಯ ಮೇಲಣ ವ್ಯಾಮೋಹದಿಂದ ಕಡೆಗಾಣಿಸುತ್ತ ಬಂದಿರುವೆ. ನನ್ನ ಅಪರಾಧ ಅಲ್ಲಿಗೇ ಮುಗಿಯಲಿಲ್ಲ – ಅವೆಲ್ಲವುಗಳ ಮೇಲೆ ಕೀರ್ತಿ ಕಳಶವಿಡುವಂತೆ ನಿನ್ನ ರಾಮನನ್ನು – ಅಯೋಧ್ಯೆಯ ಪ್ರೇಮದೇವತೆಯನ್ನು – ನಿಷ್ಕರುಣೆಯಿಂದ, ನಿರ್ಮಮತೆಯಿಂದ ಕಾಡಿಗಟ್ಟುತ್ತಿರುವೆನು.

**ಕೌಸಲ್ಯೆ :** ಪ್ರಭೂ, ನನ್ನ ಮಗನಿಗೆ ರಾಜ್ಯಾಭಿಷೇಕವಾಗದಿದ್ದರೆ ಚಿಂತೆಯಿಲ್ಲ. ಕೈಕಾದೇವಿಯ ಇಚ್ಛೆಯಂತೆ ಭರತನಿಗೇ ಯುವರಾಜ ಪದವಿಯನ್ನು ಅನುಗ್ರಹಿಸಿ – ಆದರೆ ರಾಮನನ್ನು ಕಾಡಿಗಟ್ಟಬೇಡಿ. ಅವನನ್ನು ಕರೆದುಕೊಂಡು ನಾನು ಎಲ್ಲಿಯಾದರೂ ಹೋಗಲು ಅನುಮತಿ ಕೊಡಿ.

**ಲಕ್ಷ್ಮಣ :** ತಾಯೀ, ಏನು ಮಾತೆಂದು ಆಡುತ್ತಿರುವಿರಿ? ರಾಮಚಂದ್ರನಿಗೆ ನ್ಯಾಯವಾಗಿ ಸಲ್ಲಬೇಕಾಗಿರುವ ಯುವರಾಜ ಪದವಿಯನ್ನು ಕಿತ್ತುಕೊಳ್ಳಲು ಯಾರಿಗೆ ಸಾಧ್ಯ? ಮೋಹಾಂಧನಾದ ತಂದೆ ಮಾಡಿರುವ ಅವಿವೇಕಕ್ಕೆ ಇಡಿಯ ಅಯೋಧ್ಯೆಯೇ ಪಶ್ಚಾತ್ತಾಪಪಡಬೇಕೇ? ನನ್ನನ್ನು ಯಾರು ಪ್ರತಿಭಟಿಸುತ್ತಾರೆ ನೋಡುತ್ತೇನೆ. ಭರತನಿಗೆ ಯುದ್ಧದ ವಾಂಛಿತವಿದ್ದರೆ ಅದಕ್ಕೂ ನಾನು ಸಿದ್ಧ. ತಂದೆ ನಿನ್ನನ್ನು ನಿಗ್ರಹಿಸಿ ರಾಮನಿಗೆ ರಾಜಮುಕುಟವನ್ನೊಪ್ಪಿಸಬೇಕಾಗಿ ಬಂದಲ್ಲಿ ನಾನು ಹಿಂಜರಿಯುವುದಿಲ್ಲ.

**ದಶರಥ** : ಲಕ್ಷ್ಮಣಾ – ನಿಗ್ರಹಿಸು – ನನ್ನನ್ನು ಬಂಧನದಲ್ಲಿಟ್ಟು ರಾಮನಿಗೆ ಪಟ್ಟಗಟ್ಟಿಸು. ಹೇಗಾದರೂ ರಾಮನಿಗೆ ವನವಾಸ ತಪ್ಪಿಸು.

**ರಾಮ** : ಲಕ್ಷ್ಮಣಾ, ನಿನ್ನ ಕಟುಮಾತು ಕೇಳಿ ನನ್ನ ಹೃದಯ ಕಂಪಿಸುತ್ತಿದೆ, ನಾಚಿಕೆಯಿಂದ ಮುಖ ಬಾಗುತ್ತಿದೆ. ನನ್ನ ಪ್ರಿಯ ಸೋದರ ಲಕ್ಷ್ಮಣನ ಬಾಯಿಂದ ಇಂಥ ಅಸಭ್ಯನುಡಿಗಳು ಹೊರಟವೆಂದು ನಂಬಿಕೆಯೇ ಬಾರದಾಗಿದೆ. ತಂದೆಯ ಧರ್ಮ ಕಾಯುವುದು ಮಕ್ಕಳ ಕರ್ತವ್ಯ.

**ಲಕ್ಷ್ಮಣ** : ತಂದೆ ತಪ್ಪು ಮಾಡಿದ್ದಾರೆ.

**ರಾಮ** : ಅದನ್ನು ನಿರ್ಣಯಿಸುವ ಅಧಿಕಾರ ನಿನಗೂ ನನಗೂ ಇಲ್ಲ.

**ಲಕ್ಷ್ಮಣ** : ಇದೆಲ್ಲಾ ಭರತನ ಕುಟಿಲ. ಮಾವನ ಮನೆಯಲ್ಲಿಯೇ ಕುಳಿತು ಕೊಂಡು ಅವನು ತಾಯಿಯ ಕೈಯಿಂದ ಈ ಅನರ್ಥ ನಡೆಸುತ್ತಿದ್ದಾನೆ.

**ರಾಮ** : ಲಕ್ಷ್ಮಣಾ – ಸಾಕು ನಿಲ್ಲಿಸು. ನಾನು ಭರತನ ಭರ್ತ್ಸನೆಯನ್ನು ಕೇಳಿ ಸಹಿಸಲಾರೆ. ನಿನ್ನಂತೆ ಭರತನೂ ನನ್ನ ತಮ್ಮನಾಗಿದ್ದಾನೆ, ನನಗೆ ಪ್ರಿಯನಾಗಿದ್ದಾನೆ. ರಾಜ್ಯವನ್ನು ಅಪಹರಿಸುವ ಯೋಚನೆ ಭರತನಿಗೆ ಕನಸು ಮನಸ್ಸಿನಲ್ಲಿಯೂ ಬರಲು ಶಕ್ಯವಿಲ್ಲ.

**ಕೈಕಾ** : ರಾಮಚಂದ್ರ, ನಿರರ್ಥಕ ವಾದವಿವಾದದಲ್ಲಿ ಹೊತ್ತುಗಳೆಯುವುದ ರಿಂದ ಏನು ಪ್ರಯೋಜನ.

**ಕೌಸಲ್ಯೆ** : (ಕೈಕಾರಾಣಿಯ ಬಳಿಗೆ ಹೋಗಿ) ತಂಗಿ, ನೀನೂ ನನ್ನಷ್ಟೇ ರಾಮ ನನ್ನು ಪ್ರೀತಿಸುತ್ತಿದ್ದವಳು. ನಿರಪರಾಧಿಯಾದ ರಾಮನನ್ನು ಅರಣ್ಯ ಪಾಲು ಮಾಡಬೇಡ. ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ – ಪುತ್ರಭಿಕ್ಷೆ ಯನ್ನು ನೀಡು.

**ವಶಿಷ್ಠ** : ಕೈಕಾರಾಣಿ, ದೇವತಾಸ್ವರೂಪಳಾದ ಕೌಸಲ್ಯಾ ಮಹಾರಾಣಿಯ ಪ್ರಾರ್ಥನೆಯನ್ನು ಮನ್ನಿಸು. ಇದರಿಂದ ಎಲ್ಲರಿಗೂ ಮಂಗಳವಾಗು ತ್ತದೆ. ಶ್ರೀರಾಮಚಂದ್ರನಿಂದ ಕಸಿದುಕೊಂಡ ರಾಜ್ಯವನ್ನನುಭವಿಸಲು ಭರತ ರೊಕ್ಷನೇ? ಈ ಬಂಧುಗಳಲ್ಲಿರುವ ಅನ್ಯಾದೃಶ, ಅಪ್ರತಿಮ ಅಂತಃಕರಣವನ್ನು ನೀನರಿಯೆ ತಾಯೀ. ರಾಮನಿಲ್ಲದ ರಾಜ್ಯದಲ್ಲಿ ಅರಗಳಿಗೆಯೂ ಭರತ ಉಳಿಯುವುದಿಲ್ಲ. ನಿನ್ನ ಆಕಾಂಕ್ಷೆಯೂ ಈಡೇರದೆ ಅನರ್ಥಪರಂಪರೆಗೆ ಕಾರಣವಾಗುವ ನಿನ್ನ ವರಗಳನ್ನು ಪ್ರತಿಗ್ರಹಿಸು. ಇದರಿಂದ ನಿನಗೂ, ಭರತನಿಗೂ, ಲೋಕಕ್ಕೂ ಕಲ್ಯಾಣವಾಗುತ್ತದೆ.

**ರಾಮ :** ಪರಮಪೂಜ್ಯ ಆಚಾರ್ಯ. ಮುಂದಿಟ್ಟ ಅಡಿಯನ್ನು ಹಿಂದೆಗೆಯುವುದು ನನ್ನ ಜಾಯಮಾನಕ್ಕೆ ಬಂದುದಿಲ್ಲವೆಂಬುದನ್ನು ತಾವು ಬಲ್ಲಿರಿ. ಕೈಕಾರಾಣಿಯೇ ತನ್ನ ವರಗಳನ್ನು ಹಿಂದಕ್ಕೆ ತೆಗೆದುಕೊಳ್ಳಲು ಬಯಸಿದರೂ ನಾನು ಒಪ್ಪುವುದಿಲ್ಲ, ತಾಯಿ ಅನುಗ್ರಹಿಸಿರುವ ವನವಾಸ ನನಗೆ ಪರಮಪ್ರಿಯವಾಗಿದೆ. ಅದನ್ನು ಅನುಭವಿಸಲು ಅವಕಾಶ ಕೊಡಿ.

**ದಶರಥ :** ಕೈಕಾ, ನಿನಗೆ ಬೇಕಾದುದು ಅಯೋಧ್ಯಾರಾಜ್ಯ, ಭರತನ ಪಟ್ಟಾಭಿಷೇಕ – ಎರಡನ್ನೂ ಸಾಧಿಸು. ಸುಮಂತ್ರ, ನನ್ನ ಮತ್ತು ನನ್ನ ರಾಣಿಯರ ಪ್ರಯಾಣಕ್ಕೆ ಸಿದ್ಧಗೊಳಿಸು – ಸಮಸ್ತ ಪರಿವಾರ, ಸಂಪತ್ತು, ವೈಭವದೊಂದಿಗೆ ನಾವೆಲ್ಲರೂ ರಾಮನ ಜತೆ ಕಾಡಿಗೆ ಹೋಗೋಣ. ನಿರ್ಜನವಾದ ಈ ಸ್ಮಶಾನ ಅಯೋಧ್ಯೆಯಲ್ಲಿ ಈ ರಕ್ಕಸಿ – ಇವಳ ಪ್ರೇಮಪುತ್ರ ಇಬ್ಬರೇ ಇದ್ದುಕೊಳ್ಳಲಿ.

**ರಾಮ :** ಪ್ರಭೂ, ಒಂದು ಕೈಯಲ್ಲಿತ್ತ ವರವನ್ನು ಇನ್ನೊಂದು ಕೈಯಲ್ಲಿ ಕಿತ್ತುಕೊಳ್ಳುವುದು ಯಾವ ನ್ಯಾಯ – ನನ್ನ ಜತೆ ಯಾರೂ ಬರುವ ಅಗತ್ಯವಿಲ್ಲ. ನಾನು ಏಕಾಂಗಿಯಾಗಿ ಅರಣ್ಯಕ್ಕೆ ಹೋಗತಕ್ಕವನು.

**ಸೀತಾ :** ಆರ್ಯಪುತ್ರ, ನಿಮ್ಮನ್ನು ಬಿಟ್ಟು ನಾನು ಅರಗಳಿಗೆ ಇಲ್ಲಿರಲಾರೆ. ನನ್ನನ್ನೂ ಕರೆದುಕೊಂಡು ಹೋಗಿ.

**ರಾಮ :** ವನವಾಸ ನನಗೊಬ್ಬನಿಗೇ ವಿಧಾಯಕವಾಗಿರುವುದು. ಅರಮನೆಯಲ್ಲಿ ಬೆಳೆದ ಕೋಮಲೆಯಾದ ನೀನು ಅರಣ್ಯಕ್ಕೆ ಬರುವುದೆಂದರೇನು ?

**ಕೈಕಾ :** ಸೀತಾ, ನೀನು ಅರಣ್ಯಕ್ಕೆ ಹೋಗಬೇಕಾದ ಅಗತ್ಯವಿಲ್ಲ.

**ಸೀತಾ :** ಇಲ್ಲ, ನಾನು ಹೋಗಲೇ ಬೇಕು. ರಾಮನನ್ನುಳಿದು ನಾನು ಕ್ಷಣಕಾಲ ಇಲ್ಲಿರಲಾರೆ. ರಾಮನಿಲ್ಲದ ರಾಜಧಾನಿ ನನಗೆ ಕಾಡಿಗಿಂತ ಕೇಡು, ರಾಮನಿರುವ ಕಾಡು ನನಗೆ ಇಂದ್ರಲೋಕ ಸಮಾನ.

**ರಾಮ :** ನಿನ್ನ ಇಚ್ಛೆಯಿದ್ದಂತಾಗಲಿ.

**ಲಕ್ಷ್ಮಣ :** ಸೀತಾರಾಮರ ನೆರಳಾದ ಲಕ್ಷ್ಮಣನೂ ನಿಮ್ಮೊಂದಿಗೆ ಹೊರಟಿದ್ದಾನೆ.

**ರಾಮ :** ಲಕ್ಷ್ಮಣಾ, ನೀನೂ ಬಂದರೆ ನಮ್ಮ ವೃದ್ಧತಂದೆಯನ್ನು ನೋಡಿಕೊಳ್ಳುವವರು ಯಾರು ?

**ಲಕ್ಷ್ಮಣ :** ಭರತ.

ರಾಮ: (ಯೋಚಿಸಿ) ನೀನು ಇಲ್ಲಿದ್ದು ಭರತನೊಂದಿಗೆ ಕಲಹಮಾಡುವುದಕ್ಕಿಂತ ನನ್ನ ಜತೆ ಬರುವುದೇ ಲೇಸು. ಬಾ.

ಕೈಕಾ: ಯಾರಲ್ಲಿ?

[ಸಖಿ ಬರುವಳು]

ಕೈಕಾ: ನಾರುಡೆಯನ್ನು ತಂದುಕೊಡು.

[ಸಖಿ ಹೋಗಿ ಸಿದ್ಧಗೊಳಿಸಿಟ್ಟಿದ್ದ ನಾರುಡೆಗಳನ್ನು ತಂದುಕೊಡುವಳು. ರಾಮಲಕ್ಷ್ಮಣ ಧರಿಸಿಕೊಳ್ಳುವರು. ಸೀತೆ ಅದನ್ನು ಧರಿಸುವ ರೀತಿ ಯನ್ನರಿಯದೆ]

ಸೀತೆ: ಇದನ್ನು ಹೇಗೆ ಧರಿಸುವುದು ಆರ್ಯಪುತ್ರ

[ರಾಮ ಮುಗುಳ್ನಗೆ ನಕ್ಕು ಸೀತೆಗೆ ತೋರಿಸುವನು]

ವಶಿಷ್ಠ: ಇದು ಸಲ್ಲದು. ಮಹಾರಾಜರ ಮನೆಯ ದೀಪಲಕ್ಷ್ಮಿಯಂತೆ ಬಂದಿರುವ ಸೀತಾದೇವಿ ವಲ್ಕಲವನ್ನು ಧರಿಸಲಾಗದು. ಸರ್ವಮಂಗಳೆ ಯಾದ ಅವಳು ಸಾಲಂಕೃತಳಾಗಿಯೇ ಹೋಗಬೇಕು.

[ಯಾರೂ ಮರುಮಾತಾಡುವುದಿಲ್ಲ, ಸೀತೆ ವಲ್ಕಲವನ್ನು ದಾಸಿಯ ಕೈಗೆ ಕೊಡುವಳು]

[ರಾಮ ಸೀತೆಯೊಂದಿಗೆ ಬಂದು ಕೈಕಾದೇವಿಗೆ ನಮಸ್ಕರಿಸಿ]

ರಾಮ: ಅಮ್ಮ, ಹೋಗಲಪ್ಪಣೆ ಕೊಡು. ವಯಸ್ಸಿನಿಂದಲೂ ದುಃಖ ದಿಂದಲೂ ಜೀರ್ಣನಾಗಿರುವ ತಂದೆಯ ಯೋಗಕ್ಷೇಮದ ಭಾರವನ್ನೆಲ್ಲಾ ನೀನು ವಹಿಸಬೇಕಾಗಿದೆ.

[ತಾಯಿ ಕೌಸಲ್ಯೆಗೆ ನಮಸ್ಕರಿಸುವನು]

ಕೌಸಲ್ಯೆ: (ಮಗನನ್ನು ಬಿಗಿದಪ್ಪಿ.) ನಾನು ಇಲ್ಲಿರಲಾರೆ ರಾಮಚಂದ್ರ, ನಿನ್ನ ಸಂಗಡ ನಾನೂ ಕಾಡಿಗೆ ಬರುತ್ತೇನೆ.

ರಾಮ: ಅಮ್ಮ, ನಿನ್ನ ವಿಶ್ವಾಸ, ಸೇವೆಯೇ ತಂದೆಯ ಊರೆಗೋಲು, ಈ ಸ್ಥಿತಿಯಲ್ಲಿ ಆತನನ್ನು ಬಿಟ್ಟು ಎಲ್ಲಿಗೆ ಹೋಗಲು ಸಾಧ್ಯ?

[ತಾಯಿ ಸುಮಿತ್ರೆಗೂ ಆಚಾರ್ಯ ವಶಿಷ್ಠರಿಗೂ ರಾಮ, ಸೀತೆ ನಮ ಸ್ಕರಿಸುವರು.]

ವಶಿಷ್ಠ: ಸತ್ಯದ ಶುಭ್ರ ಕಾಂತಿ ನಿನಗೆ ಹಾದಿವೆಳಕಾಗಲಿ. ಲೋಕೋತ್ತರ ವಾದ ನಿನ್ನ ಧರ್ಮಬುದ್ಧಿ ನಿತ್ಯೋಜ್ಜ್ವಲವಾಗಿರಲಿ.

ರಾಮ: ಅನುಗ್ರಹೀತನಾದೆ.

[ಸುಮಂತ್ರನ ಬಳಿಗೆ ಬಂದು]

ರಾಮ: ಆರ್ಯಾ, ದುಃಖವನ್ನು ಬದಿಗೊತ್ತಿ ನನ್ನನ್ನು ಬೀಳ್ಕೊಡು. ಮಹಾ ರಾಜರ ತಪ್ತ ಹೃದಯಕ್ಕೆ ನಿನ್ನ ಅಮೃತ ವಚನಗಳೇ ಶಾಂತಿ ನೀಡ

ಬೇಕು. ನನ್ನ ತಮ್ಮ ಭರತನ ಮಾರ್ಗದರ್ಶಕನಾಗಿ ನಿಂತು ಅಯೋಧ್ಯೆಯನ್ನು ರಕ್ಷಿಸು.

[ಸುಮಂತ್ರ ರಾಮಚಂದ್ರನನ್ನು ಅಪ್ಪಿಕೊಳ್ಳುತ್ತಾನೆ]

[ರಾಮ ತಂದೆಯ ಬಳಿಗೆ ಬಂದು]

ರಾಮ : ನಾವು ಹೊರಡಲು ಅಪ್ಪಣೆಯಾಗಬೇಕು.

[ಮೂಕನಂತೆ ದಶರಥ ಮಹಾರಾಜ ರಾಮನನ್ನಪ್ಪಿ ಕಂಬನಿಗರೆಯುವನು]

ರಾಮ : (ಎದ್ದು ನಿಂತು, ಹೊರಡಲನುವಾಗಿ) ನನ್ನ ಪ್ರಿಯಬಂಧು ಭರತ ನಿತ್ಯ ಸುಖಿಯಾಗಿರಲಿ, ಅವನ ರಾಜ್ಯ ನಿತ್ಯ ಸುಭಿಕ್ಷವಾಗಿರಲಿ. ಧರ್ಮಿಷ್ಠನಾದ ಭರತನ ಬಗ್ಗೆ ಯಾರೂ ಅಪಶಬ್ದ ನುಡಿಯಬಾರದೆಂದು ನಾನು ಬೇಡಿಕೊಳ್ಳುತ್ತೇನೆ. ನನ್ನ ಪೂಜ್ಯಮಾತೆಯಾದ ಕೈಕಾದೇವಿಯ ನಿಂದೆಗೆಳಸುವವರು ನನ್ನನ್ನು ನಿಂದಿಸಿದಂತೆ ಎಂದು ಭಾವಿಸಿಕೊಳ್ಳುತ್ತೇನೆ.

[ಎಲ್ಲರಿಗೂ ಕೈಮುಗಿದು ಹೊರಡುತ್ತಾನೆ. 'ರಾಮ, ರಾಮಚಂದ್ರ' ಎಂದು ಕೂಗಿಕೊಂಡು ದಶರಥ ಅವನನ್ನು ಹಿಂಬಾಲಿಸಲೆತ್ನಿಸಿ ಮೂರ್ಛಿತನಾಗಿ ಬೀಳುತ್ತಾನೆ. ಕೌಸಲ್ಯೆ, ಸುಮಿತ್ರೆ ದೊರೆಯನ್ನು ಉಪಚರಿಸುತ್ತಾರೆ.]

## ೧೩

[ರಾಮಚಂದ್ರ ಲಕ್ಷ್ಮಣ ಸೀತಾ ಸಮೇತನಾಗಿ ಅರಣ್ಯಕ್ಕೆ ಹೊರಟಿರುವ ವಾರ್ತೆ ನಗರದಲ್ಲಿ ಕಾಳ್ಗಿಚ್ಚಿನಂತೆ ವ್ಯಾಪಿಸುತ್ತದೆ. ಹಾದಿಗಳಲ್ಲಿ ಜನ ಸಾಲುಗಟ್ಟಿ ನಿಲ್ಲುತ್ತಾರೆ. ಅರಮನೆಯ ಮಹಾದ್ವಾರದ ಬಳಿಗೆ ಜನ ಗುಂಪುಗುಂಪಾಗಿ ಬರುತ್ತಾರೆ! ಯಾರ ಮುಖದಲ್ಲಿಯೂ ಕಳೆಯಿಲ್ಲ, ಗೆಲುವಿಲ್ಲ. ಜನ ಒಂದೇಸಮನೆ ಕಣ್ಣೀರು ಸುರಿಸುತ್ತಿದ್ದಾರೆ.

ಅರಮನೆಯ ಮಹಾದ್ವಾರದಲ್ಲಿ ರಾಮ, ಲಕ್ಷ್ಮಣ, ಸೀತೆಯನ್ನು ಕಂಡ ಜನಗಳ ಬಾಯಲ್ಲಿ 'ಹಾ ! ರಾಮಚಂದ್ರ' ಎಂಬ ಉದ್ಗಾರ ಹೊರಡುತ್ತದೆ. ಜನತೆಯ ನಿಟ್ಟುಸಿರಿನಿಂದ ಇಡಿಯ ವಾತಾವರಣದಲ್ಲಿ ದಗೆಯೆದ್ದಂತಾಗಿದೆ.

ರಾಮ, ಲಕ್ಷ್ಮಣ, ಸೀತೆಯರಿಗೆ ಅಡಿಗಡಿಗೆ ಜನ ಬಂದು ನಮಿಸುತ್ತಾರೆ. ಅವರ ಪಾದಗಳ ಮೇಲೆ ಪುಷ್ಪಗಳನ್ನು ಚೆಲ್ಲುತ್ತಾರೆ. ಮೇಲ್ವಾಸುಗಳನ್ನು ಹಾಸಿ ಅವರ ಪಾದಧೂಳಿಯನ್ನು ಸ್ವೀಕರಿಸುತ್ತಾರೆ.

ಒಬ್ಬ ತಾಯಿ ತನ್ನ ಮಗುವನ್ನು ತಂದು ರಾಮನ ಪಾದದಮೇಲೆ ಹಾಕುತ್ತಾಳೆ. ರಾಮ ಅದನ್ನೆತ್ತಿಕೊಂಡು ಅಪ್ಪಿ ಮುದ್ದಿಟ್ಟು ತಾಯಿಯ ಕೈಗೆ ಕೊಡುತ್ತಾನೆ.

ಜೀರ್ಣಕಾಯಳಾದ ವೃದ್ಧೆಯೊಬ್ಬಳು ರಾಮನ ಬಳಿಗೆ ಬಂದು ತನ್ನ ಉಡಿಯಲ್ಲಿದ್ದ ಕೆಲವು ಹಣ್ಣುಗಳನ್ನು ಅವನಿಗೆ ಕೊಡುತ್ತಾಳೆ. ರಾಮ ಅದನ್ನು ಕಣ್ಣಿಗೊತ್ತಿಕೊಂಡು ಸ್ವೀಕರಿಸುತ್ತಾನೆ.

ಹೀಗೆಯೇ ಜನ ತಮ್ಮ ಪ್ರೇಮ, ಭಕ್ತಿ ತೋರುತ್ತಾರೆ. ರಾಮ ಹಿರಿಯರಿಗೆ ಕೈಮುಗಿಯುತ್ತಾ, ಕಿರಿಯರ ಶಿರ ನೇವರಿಸುತ್ತಾ ಮುಂದೆ ಪ್ರಯಾಣ ಮಾಡುತ್ತಾನೆ.

ಜನ ಅವನನ್ನನುಸರಿಸಿ ಹೋಗುತ್ತಾರೆ.]

೧೪

[ರಾಜಧಾನಿಯ ಹೊರವಲಯ. ಸಮೀಪದಲ್ಲಿಯೇ ಸೂರ್ಯವಂಶದರಸರ 'ಪ್ರತಿಮಾಗೃಹ'ವಿದೆ. ಜಯಂತ ತನ್ನ ಕುದುರೆಯನ್ನು ಸಮೀಪದ ಒಂದು ಮರಕ್ಕೆ ಬಿಗಿದು ಯಾರನ್ನೋ ನಿರೀಕ್ಷಿಸುತ್ತಿರುವನು.

ಸ್ವಲ್ಪ ಹೊತ್ತಿನಲ್ಲಿ ಕುದುರೆಗಳ ಖರಪುಟ ಕೇಳಬರುವುದು.

ಭರತ, ಶತ್ರುಘ್ನರು ಕುದುರೆಯೇರಿ ಬರುವರು.

ಜಯಂತ ಅವರನ್ನು ಇಳಿಸಿಕೊಳ್ಳುವನು]

**ಭರತ:** ಜಯಂತ, ಪೂಜ್ಯ ವಶಿಷ್ಠರ ರಾಯಸ ಬಂದೊಡನೆಯೇ ನಾವು ಕಾಲವಿಳಂಬ ಮಾಡದೆ ಬಂದೆವು. ದಾರಿಯುದ್ದಕ್ಕೂ ನಮಗೆ ದುಶ್ಶಕುನಗಳು ಸಂಭವಿಸಿದವು. ರಾಜಧಾನಿಯ ಸುದ್ದಿಯೇನು? ಮಹಾರಾಜರು ಆರೋಗ್ಯವಾಗಿರುವರೇ? ಅಣ್ಣ ರಾಮಚಂದ್ರನು ಕುಶಲಿಯೇ? ಮಾತೃ ದೇವತೆಯರು ನೆಮ್ಮದಿಯಾಗಿರುವರೇ?

**ಜಯಂತ:** ಆಯುಷ್ಮಂತ. ನೀನು ರಾಜಧಾನಿಗೆ ಬಂದಮೇಲೆ ಎಲ್ಲ ಸುದ್ದಿಗಳೂ ತಿಳಿಯುತ್ತವೆ. ಕೃತ್ತಿಕಾ ನಕ್ಷತ್ರ ಕಳೆಯುವವರೆಗೆ ನೀನು ಇಲ್ಲಿಯೇ ಇದ್ದು ತರುವಾಯ ಪುರಪ್ರವೇಶ ಮಾಡಬೇಕೆಂದು ಪೂಜ್ಯ ವಶಿಷ್ಠರು ನಿರೂಪಕಳುಹಿಸಿರುವರು.

**ಭರತ:** ಪೂಜ್ಯರ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತೇನೆ.

**ಜಯಂತ:** ಅಪ್ಪಣೆಯಾದರೆ ನಾನು ರಾಜಧಾನಿಗೆ ಹಿಂದಿರುಗುತ್ತೇನೆ.

**ಭರತ:** ಆಗಬಹುದು (ಜಯಂತ ಹೊರಟುಹೋಗಲು, ಶತ್ರುಘ್ನನ ಕಡೆ ತಿರುಗಿ) ಶತ್ರುಘ್ನ, ಆರ್ಯ ಜಯಂತನ ನಡೆವಳಿಕೆ ನನಗೆ ಮತ್ತಷ್ಟು ಭಯವನ್ನುಂಟುಮಾಡುತ್ತಿದೆ. ಭಗವದನುಗ್ರಹದಿಂದ ರಾಜಧಾನಿಯಲ್ಲಿ ಯಾವ ಅನರ್ಥವೂ ಆಗದಿದ್ದರೆ ಸಾಕು.

ಶತ್ರುಘ್ನ : ಅಣ್ಣಾ, ವಯೋವೃದ್ಧನಾದ ತಂದೆಯನ್ನು ಬಿಟ್ಟು ನಾವು ಬಹಳ ದಿವಸ ಮಿಥಿಲೆಯಲ್ಲಿ ಉಳಿದುದು ತಪ್ಪಾಯಿತು.

ಭರತ : ಬಾ, ಪ್ರತಿಮಾಗೃಹದಲ್ಲಿ ಕುಳಿತು ವಿಶ್ರಮಿಸಿಕೊಂಡು ಕೃತ್ತಿಕಾ ನಕ್ಷತ್ರ ಕಳೆದ ಮೇಲೆ ಊರಿಗೆ ಹೋಗೋಣ.

[ಇಬ್ಬರೂ ಹೋಗುವರು]

೧೫

[ಪ್ರತಿಮಾಗೃಹ. ಇಕ್ಷ್ವಾಕು ವಂಶದರಸರ ಭವ್ಯಮೂರ್ತಿಗಳು ನಿಲ್ಲಿಸಲ್ಪಟ್ಟವೆ. ಭರತ, ಶತ್ರುಘ್ನರು ಅವುಗಳನ್ನು ಈಕ್ಷಿಸುತ್ತಿರುವಂತೆ ಕಾವಲುಗಾರನಾದ ದೇವಕುಲಿಕನು ಪ್ರವೇಶಿಸಿ ಅವರನ್ನೇ ಉದ್ದೇಶಿಸಿ]

ದೇವಕುಲಿಕ : ಯಾರಪ್ಪಾ ನೀವು – ಹೇಳದೆ ಕೇಳದೆ ಪ್ರತಿಮಾಗೃಹ ಪ್ರವೇಶಿಸಿದವರು. (ಭರತ ಶತ್ರುಘ್ನರ ಗುರುತು ಹಿಡಿದು) ಕ್ಷಮಿಸಬೇಕು, ಆಯುಷ್ಮಂತರೇ – ಅಪರಾಧವಾಯಿತು.

ಭರತ : ನಿನ್ನ ದಕ್ಷತೆ ಶ್ಲಾಘನೀಯವಾದುದು ದೇವಕುಲಿಕ.

ಶತ್ರುಘ್ನ : (ಒಂದು ಮೂರ್ತಿಯ ಮುಂದೆ ನಿಂತವನು) ಅಣ್ಣಾ, ಇಲ್ಲಿ ನೋಡು

[ಭರತ ಆವನ ಬಳಿಗೆ ಬಂದು ಮೂರ್ತಿಯನ್ನು ದಿಟ್ಟಿಸಿ ನೋಡಿ ದೇವಕುಲಿಕನ ಕಡೆ ತಿರುಗುವನು]

ದೇವಕುಲಿಕ : ಹೌದು, ದಶರಥ ಮಹಾರಾಜರ ಮೂರ್ತಿ.

ಭರತ : (ಗದ್ಗದ ಕಂಠದಿಂದ) ಪೂಜ್ಯ ಮಹಾರಾಜರು....

ದೇವಕುಲಿಕ : (ಕಂಬನಿದುಂಬಿ) ಸ್ವರ್ಗವಾಸಿಗಳಾದರು....

ಶತ್ರುಘ್ನ : ಅಯ್ಯೋ ತಂದೆ! ನಾವೆಂಥ ನಿರ್ಭಾಗ್ಯರು! ನಿನ್ನ ಅವಸಾನ ಕಾಲದಲ್ಲಿ ಕೂಡ ನಿನ್ನ ಸಮೀಪದಲ್ಲಿರಲಿಲ್ಲವಲ್ಲಾ!

ಭರತ : ಸೈರಿಸು, ಸೈರಿಸು – ದೈವಸಂಕಲ್ಪಕ್ಕೆ ಯಾರು ಹೊಣೆ. ತಂದೆಯ ಬಳಿ ರಾಮ ಲಕ್ಷ್ಮಣರಾದರೂ ಇದ್ದರಲ್ಲಾ ಎಂದು ನಾವು ಸಮಾಧಾನ ಪಟ್ಟುಕೊಳ್ಳಬೇಕಾಗಿದೆ. (ದುಃಖಿಸುತ್ತಿರುವ ತಮ್ಮನನ್ನು ಬಿಗಿದಪ್ಪಿ) ತಮ್ಮಾ, ನಾವೇ ಹೀಗೆ ದುಃಖಿಸುತ್ತ ಕುಳಿತರೆ ತಾಯಂದಿರನ್ನು ಸಮಾಧಾನ ಮಾಡುವವರು ಯಾರು? ರಾಮ ಲಕ್ಷ್ಮಣರ ದುಃಖೋಪಶಮನ ಮಾಡುವವರು ಯಾರು?

ಶತ್ರುಘ್ನ : ಸಂತಸದಿಂದ ತುಂಬಿದ್ದ ಅಯೋಧ್ಯೆಯನ್ನು ನಾವು ಬಿಟ್ಟುಹೋದೆವು – ಈಗ ಸ್ಮಶಾನಸದೃಶವಾದ ಅಯೋಧ್ಯೆಗೆ ಕಾಲಿಡುತ್ತಿದ್ದೇವೆ.

**ಭರತ**: ನಿಯತಿಯ ಜೀವನಕ್ಕೆ ಹೇಗೆ ಹಗಲಿರುಳು ಎರಡು ಮುಖಗಳೋ ಹಾಗೆ ಮನುಷ್ಯನ ಬಾಳ್ವೆಗೆ ಸುಖದುಃಖಗಳು ಎರಡು ಮುಖಗಳು.

**ಶತ್ರುಘ್ನ**: ಹೌದು ಅಣ್ಣಾ–ಬಾಳಿನ ಪಾರ್ಥಿವತೆಯ ಸಿದ್ಧಾಂತವನ್ನು ಬುದ್ಧಿ ಒಪ್ಪುತ್ತದೆ. ಆದರೆ ಮನಸ್ಸು ಮರುಗುತ್ತಲೇ ಇರುತ್ತದೆ.

**ಭರತ**: ಬಲ್ಲೆ ಸೋದರ–ಕರುಳಿನ ಕಲಕಲರವದ ಮುಂದೆ ದರ್ಶನಗಳ ದಿವ್ಯ ಗಾನ ಕೂಡ ಅಸ್ಪಷ್ಟವಾಗುತ್ತದೆ.

**ದೇವಕುಲಿಕ**: ಆಯುಷ್ಮಂತ–ಕೃತ್ತಿಕೆ ಕಳೆಯಿತು.

**ಭರತ**: ಏಳು ಶತ್ರುಘ್ನ, ಜೀವನವನ್ನು ಎದುರಿಸಲು ಅಯೋಧ್ಯೆಗೆ ಹೋಗೋಣ.

[ಶತ್ರುಘ್ನನನ್ನು ಎಬ್ಬಿಸಿ ಕರೆದುಕೊಂಡು ಹೋಗುವನು]

೧೬

[ಕೈಕಾದೇವಿಯ ಮಂದಿರ. ಕೈಕಾದೇವಿ ಅತ್ಯುತ್ಸಾಹದಿಂದ ಮಗನ ಬರುವಿಕೆಯನ್ನು ಎದುರು ನೋಡುತ್ತಿದ್ದಾಳೆ. ಮಂಥರೆ ಲವಲವಿಕೆಯಿಂದ ಸ್ವಾಗತ ಸಿದ್ಧತೆ ಮಾಡುತ್ತಿದ್ದಾಳೆ.

ಭರತ ಶತ್ರುಘ್ನರು ಬರಲು ಕೈಕಾದೇವಿ ತನ್ನ ಪೀಠವನ್ನು ಬಿಟ್ಟೆದ್ದು ಹೋಗಿ ಭರತನನ್ನು ಅಪ್ಪುತ್ತಾಳೆ–ಇಬ್ಬರೂ ತಾಯಿಗೆ ನಮಸ್ಕರಿಸುತ್ತಾರೆ.

ತಾಯಿಯನ್ನು ಕಂಡ ಕೂಡಲೆ ಭರತ ಶತ್ರುಘ್ನರ ದುಃಖ ಮರುಕಳಿಸಿ ಬರುತ್ತದೆ. ಕೈಕಾದೇವಿ ತನ್ನ ಸೆರಗಿನ ಕೊನೆಯಿಂದ ಮಗನ ಕಂಬನಿ ತೊಡೆಯುತ್ತಾ]

**ಕೈಕಾ**: ದುಃಖವನ್ನು ಸಹಿಸಿಕೊಳ್ಳಬೇಕು ಕುಮಾರ. ನಿಮ್ಮ ತಂದೆಯಲ್ಲಿ ಬಂದು ಕೂಡಿದ್ದ ಪಂಚಭೂತಗಳು ಸ್ವಸ್ಥಾನಗಳನ್ನು ಸೇರಿದವು. ಮಹಾತ್ಮನೂ ಸತ್ಯವ್ರತನೂ ಆದ ನಿಮ್ಮ ತಂದೆ ಸದ್ಗತಿಯನ್ನು ಪಡೆದಿರುವನು.

**ಭರತ**: ಅಮ್ಮಾ, ಅವಸಾನಕಾಲದಲ್ಲಿ ತಂದೆ ಏನು ಹೇಳಿದರು? ರಾಮ ಲಕ್ಷ್ಮಣರಾದರೂ ತಂದೆಯ ಬಳಿಯಲ್ಲೇ ಇದ್ದರಷ್ಟೆ?

**ಕೈಕಾ**: ನಾವುಗಳೆಲ್ಲಾ ಮಹಾರಾಜರ ಸಮೀಪದಲ್ಲಿಯೇ ಇದ್ದೆವು. 'ಹಾ ರಾಮ! ಹಾ ಸೀತೆ!' ಎನ್ನುತ್ತಾ ಮಹಾರಾಜರು ಕಣ್ಣುಮುಚ್ಚಿದರು.

**ಶತ್ರುಘ್ನ**: ರಾಮ ಲಕ್ಷ್ಮಣರು ಎಲ್ಲಿಹೋಗಿದ್ದರು.

**ಕೈಕಾ**: ನಾರುಡೆಯುಟ್ಟು ದಂಡಕಾರಣ್ಯಕ್ಕೆ ತೆರಳಿದರು.

**ಭರತ**: ವನವಾಸಕ್ಕೆ! ಯಾವ ಅಪರಾಧಕ್ಕಾಗಿ! ಬ್ರಾಹ್ಮಣನ ಧನವನ್ನಾಗಲಿ ಸ್ತ್ರೀಯ ಮಾನವನ್ನಾಗಲಿ ಅಪಹರಿಸುವವನಲ್ಲವಲ್ಲಾ ಶ್ರೀರಾಮ

ಚಂದ್ರ – ಭಗವಾನ್ ಆದಿತ್ಯನಂತೆ ನಿತ್ಯ ಪರಿಶುದ್ಧನಾದ ರಾಮಚಂದ್ರ ನಲ್ಲಿ ಕಂಡುಬಂದ ದೋಷ ಯಾವದು ?

**ಕೈಕಾ :** ರಾಮ ನಿರ್ದೋಷಿ. ನಿನಗೆ ರಾಜ್ಯಾಭಿಷೇಕವನ್ನೂ ರಾಮನಿಗೆ ವನವಾಸವನ್ನೂ ನಾನೇ ಮಹಾರಾಜರಲ್ಲಿ ಬೇಡಿದೆ. ನನ್ನ ಮನ ಸ್ಸಂತೋಷಗೊಳಿಸಲು ರಾಮ ಅಯೋಧ್ಯೆಯನ್ನು ಬಿಟ್ಟುಹೋದ. ಭರತ, ಇನ್ನು ಈ ರಾಜ್ಯ ನಿನ್ನದು. ಇದು ನಿರುಪಾಧಿಕವಾಗಿದೆ. ತಂದೆಯ ಕರ್ಮವಿಧಿ ಮುಗಿಸಿ ರಾಜ್ಯವನ್ನು ವಹಿಸಿಕೊಂಡು ನೀನು ಆಳಬೇಕು.

**ಭರತ :** ಏನು ? ಶ್ರೇಷ್ಠನೂ ಜೇಷ್ಠನೂ ಆದ ಶ್ರೀರಾಮಚಂದ್ರನ ರಾಜ್ಯಕ್ಕೆ ನಾನು ಅರಸನಾಗುವುದೇ ? ನನ್ನ ತಾಯಿ – ನೀನು ನನಗೆ ರಾಜ್ಯ ದೊರಕಿಸಲು ರಾಮನನ್ನು ಅರಣ್ಯ ಪಾಲುಮಾಡಿದೆಯಾ ?

**ಕೈಕಾ :** ಮಕ್ಕಳ ಹಿತಸಂರಕ್ಷಣೆಮಾಡುವುದು ತಾಯಂದಿರ ಕರ್ತವ್ಯ.

**ಭರತ :** ಶ್ರೀರಾಮ ನಿನ್ನ ಮಗನಲ್ಲವೇ – ತಾಯಿ ಕೌಸಲ್ಯೆ, ಸುಮಿತ್ರೆ ಮತ್ತು ನಿನ್ನಲ್ಲಿ ಏಕಪ್ರಕಾರವಾದ ಅನಿರ್ವಚನೀಯ ಪ್ರೇಮ ಗೌರವ ಗಳನ್ನು ಅವನು ಇಟ್ಟುಕೊಂಡಿರಲಿಲ್ಲವೇ ? – ಅಯ್ಯೋ, ನನ್ನ ಆರಾಧ್ಯ ಮೂರ್ತಿಯನ್ನು, ಅಯೋಧ್ಯೆಯ ಕಲ್ಪತರುವನ್ನು, ತಂದೆಯ ಆತ್ಮ ಜ್ಯೋತಿಯನ್ನು ಕಾಡುಪಾಲು ಮಾಡಿಬಿಟ್ಟೆಯಾ ? ಎಂದಾದರೂ ಈ ರಾಜ್ಯ ಬೇಕೆಂದು ನಾನು ಬಯಸಿದೆನೇ ?

**ಕೈಕಾ :** ಭರತ, ನೀನಿನ್ನೂ ಹುಡುಗ – ನಿನ್ನ ಹಿತಾಹಿತ ನಿನಗೇ ಅರಿವಾಗಿಲ್ಲ. ಅಪ್ರಬುದ್ಧರಾದ ಮಕ್ಕಳ ಹಿತಸಂರಕ್ಷಣೆಯನ್ನು ಅವರ ತಾಯಂದಿರು ತಾನೇ ಮಾಡಬೇಕು.

**ಭರತ :** ರಾಮನ ರಾಜ್ಯವನ್ನು ಆಳಲು ನಾನು ಅಸಮರ್ಥನೆಂಬುದನ್ನು ತಿಳಿಯುವಷ್ಟು ನಾನು ಪ್ರಬುದ್ಧನಾಗಿದ್ದೇನೆ. ರಾಮನನ್ನು ಕಾಡಿಗಟ್ಟಿ ನನಗೆ ನೀನು ದೊರಕಿಸಿರುವ ಈ ರಾಜ್ಯ ನಿನ್ನ ಪಾಪಯೋಚನೆಯ ಪ್ರತೀಕವೆಂಬುದನ್ನು ತಿಳಿಯುವಷ್ಟು ಪ್ರಬುದ್ಧನಾಗಿದ್ದೇನೆ.

**ಕೈಕಾ :** ಭರತಾ, ನಾನು ನಿನ್ನ ತಾಯಿ....

**ಭರತ :** ರಾಮನನ್ನು ಮಗನೆಂದು ತಿಳಿಯಲಾರದವಳು, ನಿರಘನಾದ ರಾಮ ನನ್ನು ಪಾಪಿಯಂತೆ ಕಾಡಿಗಟ್ಟಿದವಳು ನನ್ನ ತಾಯಿ ಹೇಗಾದಳು ? ರಾಮನ ನಿಷ್ಕಾಮಪ್ರೇಮಕ್ಕೆ ಓಗೊಡದ ಹೃದಯದಲ್ಲಿ ದಯೆಯಿಲ್ಲ,

ಮಮತೆಯಿಲ್ಲ, ಸತ್ಯವಿಲ್ಲ, ಬೆಳಕಿಲ್ಲ—ಅದು ಆಶಾರಕ್ಕಸಿಯ ತೌರು ಮನೆ; ಅದು ಪಿಶಾಚಿಗಳ ಶಿಬಿರ.

**ಕೈಕಾ** : (ಆರ್ತಳಾಗಿ ಶತ್ರುಘ್ನನಿಗೆ) ನೀನಾದರೂ ಭರತನಿಗೆ ವಿವೇಕ ಹೇಳ ಬಾರದೇ?

**ಶತ್ರುಘ್ನ** ; ಧರ್ಮಾತ್ಮನಾದ ಭರತನಿಗೆ ವಿವೇಕ ಹೇಳಲು ನಾನೆಷ್ಟರವನು ತಾಯಿ. ರಾಮಪ್ರಾಣನಾದ ಭರತ ನಿನ್ನ ಕುಟಿಲ ಸಂಧಾನವನ್ನೊಪ್ಪಿ ಕೊಳ್ಳುವನೆಂದು ಯಾವ ದುರ್ವಿಧಿ ನಿನಗೆ ನಂಬಿಕೆಯಿತ್ತಿತು.

**ಭರತ** : (ಕಂಬನಿದುಂಬಿ. ಗದ್ಗದ ಸ್ವರದಿಂದ) ನಡೆ ಶತ್ರುಘ್ನ—ಕೈಕಾದೇವಿ ದೊರಕಿಸಿಕೊಂಡಿರುವ ರಾಜ್ಯವನ್ನು ಅವಳೇ ಅನುಭವಿಸಿಕೊಳ್ಳಲಿ. ರಾಮನಿಲ್ಲದ ಈ ಸ್ಮಶಾನದಲ್ಲಿ ನಾನು ಅರಗಳಿಗೆಯೂ ನಿಲ್ಲಲಾರೆ— ಅಯ್ಯೋ! ನನ್ನ ಹಿರಿಯಮ್ಮ ಕೌಸಲ್ಯೆಗೆ ನಾನು ಹೇಗೆ ಮುಖ ತೋರಿಸಲಿ—ಪೂಜ್ಯ ವಶಿಷ್ಠರಿಗೆ ಏನು ಹೇಳಲಿ—ಆರ್ಯ ಸುಮಂತ್ರನ ದಗ್ಧಹೃದಯವನ್ನು ಹೇಗೆ ನೋಡಲಿ—ಅಯೋಧ್ಯೆಯ ಪ್ರಜರನ್ನು ಹೇಗೆ ಎದುರಿಸಲಿ!

**ಶತ್ರುಘ್ನ** : ಅಣ್ಣಾ, ನೀನು ತಪ್ಪಿತಸ್ಥನಲ್ಲ—ಯಾರೂ ನಿನ್ನನ್ನು ಆಕ್ಷೇಪಿಸ ಲಾರರು!

**ಭರತ** : ತಪ್ಪು ಮಾಡಿದ್ದೇನೆ ಶತ್ರುಘ್ನ—ಈ ರಕ್ಕಸಿಯ ಮಗನಾಗಿ ಹುಟ್ಟುವ ಘೋರ ಅಪರಾಧ ಮಾಡಿದ್ದೇನೆ. ಕೈಕಾರಾಣಿಯ ಮಗನಾಗಿ ಹುಟ್ಟಿ ಈ ಪಾಪದಲ್ಲಿ ಪಾಲುಗಾರನಾಗುವುದಕ್ಕಿಂತ ಶ್ರೀರಾಮಚಂದ್ರನ ಪದ್ಮ ಪಾದಗಳಿಗೆ ಮುದ್ದಿಡುವ ಧೂಳಿನ ಕಣವಾಗಿ ನಾನು ಹುಟ್ಟಬಾರ ದಾಗಿತ್ತೇ?—ನಡೆ ತಮ್ಮ—ತಾಯಿ ಕೌಸಲ್ಯೆಯ ಕ್ಷಮೆಯನ್ನು ಅಂಜಲಿ ಬದ್ಧನಾಗಿ ಯಾಚಿಸಿದ ಹೊರತೂ ನನ್ನ ಆತ್ಮಕ್ಕೆ ಶಾಂತಿಯಿಲ್ಲ.

[ಕೈಕಾದೇವಿ ಆರ್ತಳಾಗಿ, ತಡೆ–ಭರತ–ಹೋಗಬೇಡ—ನನ್ನನ್ನು ಉಪೇಕ್ಷಿಸ ಬೇಡ' ಎಂದು ಚೀರುವಳು. ಅವಳ ಮಾತನ್ನು ಕಿವಿಯಮೇಲೆ ಹಾಕಿ ಕೊಳ್ಳದೆ ಭರತ ಶತ್ರುಘ್ನರು ಹೊರಟುಹೋಗುವರು ಕೈಕಾದೇವಿ ಮೂರ್ಛಿತಳಾಗಿ ಬೀಳುವಳು.]

## ೧೭

[ಕೌಸಲ್ಯೆಯ ಅಂತಃಪುರ. ಕೌಸಲ್ಯಾದೇವಿ ದುಃಖತಪ್ತಳಾಗಿದ್ದಾಳೆ. ಸುಮಿತ್ರೆ ಅಕ್ಕನನ್ನು ಸಂತೈಸುತ್ತಿದ್ದಾಳೆ. ಸಖಿ ಮಾಲಿನಿ ಉಭಯ ರಾಣಿಯರ ಶಿಶ್ರೂಷೆ ಮಾಡುತ್ತಿದ್ದಾಳೆ.]

**ಕೌಸಲ್ಯೆ:** ರಾಮನನ್ನು ತೊರೆದು ನಾನಿನ್ನೂ ಜೀವಿಸಿರುವೆನಲ್ಲಾ – ನಾನೆಂಥ ಕಠಿಣಚಿತ್ತಳು.

**ಸುಮಿತ್ರೆ:** ಅಕ್ಕಾ, ಹದಿನಾಲ್ಕು ವರ್ಷ ಆಡಿದಹಾಗೆ ಬರುತ್ತದೆ. ನೀನು ದುಃಖವನ್ನು ಉಪಶಮನಮಾಡಿಕೊಳ್ಳಬೇಕು.

**ಕೌಸಲ್ಯೆ:** ನನ್ನ ರಾಮಲಕ್ಷ್ಮಣರು ದುಃಖವನ್ನು ಕಂಡರಿಯದ ಮಗು ಸೀತೆ ಕಾಡುಮೇಡುಗಳಲ್ಲಿ ಅಲೆದಾಡಿಕೊಂಡು ಗೆಡ್ಡೆಗೆಣಸುಗಳನ್ನು ಭುಜಿಸುತ್ತಿದ್ದರೆ ನಾನಿಲ್ಲಿ ಅರಮನೆಯಲ್ಲಿ ಸುಖವಾಗಿದ್ದೇನೆ.

**ಸುಮಿತ್ರೆ:** ನಿನ್ನ ಸುಖ ಯಾರಿಗೂ ಬೇಡಕ್ಕ.

**ಕೌಸಲ್ಯೆ:** ಪತಿದೇವರು ಜೀವಂತರಾಗಿದ್ದಾಗಲೇ ಕೈಕಾದೇವಿ ನಮ್ಮನ್ನು ತೃಣಪ್ರಾಯವಾಗಿ ಕಾಣುತ್ತಿದ್ದಳು – ಇನ್ನು ನಮ್ಮ ಗತಿಯೇನು ?

**ಸುಮಿತ್ರೆ:** ಲೋಕಾಪವಾದಕ್ಕೆ ಹೆದರಿ ನಾವು ಇಲ್ಲಿರಬೇಕಾಗಿದೆ. ಇಲ್ಲವಾಗಿದ್ದರೆ ಪ್ರಶಾಂತವಾದ ಯಾವದಾದರೂ ಋಷ್ಯಾಶ್ರಮ ಸೇರಿ ಮನಸ್ಸಿಗೆ ನೆಮ್ಮದಿ ದೊರಕಿಸಿಕೊಳ್ಳಬಹುದಾಗಿತ್ತು.

**ಕೌಸಲ್ಯೆ:** ಮಕ್ಕಳು ಉಪವಾಸ ಅರಣ್ಯಕ್ಕೆ ಹೊರಟುಹೋದರಲ್ಲಾ ಸುಮಿತ್ರೆ. ನನ್ನ ರಾಮಲಕ್ಷ್ಮಣ ಸೀತೆಯರಿಗೆ ಅಯೋಧ್ಯೆಯಲ್ಲಿ ಒಂದು ತುತ್ತು ಅನ್ನವಿಲ್ಲದಾಯಿತೇ ?

**ಸುಮಿತ್ರೆ:** ನಿನ್ನ ದುಃಖಕ್ಕೆ ಕೊನೆಯೆಲ್ಲಿದೆ ?

[ಈ ಹೊತ್ತಿಗೆ ಬಂದಿರುವ ಭರತ ಶತ್ರುಘ್ನರು ಮೌನದಿಂದ ನಿಂತಿರುತ್ತಾರೆ. ತಾಯಂದಿರಿಗೆ ಪ್ರಣಾಮ ಮಾಡುವುದಕ್ಕೂ ಅವರು ಪ್ರಯತ್ನಿಸುವುದಿಲ್ಲ

**ಕೌಸಲ್ಯೆ:** (ಕತ್ತೆತ್ತಿನೋಡಿ) ಬಂದೆಯಾ ಭರತರಾಜೇಂದ್ರ, ನಿನ್ನ ತಾಯಿ ರಾಮನನ್ನು ರಾಜ್ಯದಿಂದ ಹೊರದೂಡಿದಳು – ನೀನು ನನ್ನನ್ನು ಹೊರದೂಡುವುದಕ್ಕೆ ಬಂದಿರುವೆಯಾ ? ನನ್ನನ್ನು ಇಲ್ಲಿಂದ ಹೊರಡಿಸಿ ರಾಜ್ಯವನ್ನು ಮತ್ತಷ್ಟು ನಿಷ್ಕಂಟಕವಾಗಿ ಮಾಡಬೇಕೆಂದು ನಿನ್ನ ತಾಯಿ ಹವಣಿಸಿರುವಳೇ ? ಇಷ್ಟು ಮೋಸದಿಂದ ರಾಜ್ಯವನ್ನು ದೊರಕಿಸಿಕೊಳ್ಳಬೇಕಾಗಿತ್ತೇ ಭರತ – ದೈವಸದೃಶರಾದ ಮಹಾರಾಜರನ್ನು ಬಲಿಗೊಟ್ಟು ನೀನೂ ನಿನ್ನ ತಾಯಿಯೂ ಸಂಪಾದಿಸಿಕೊಳ್ಳಬೇಕಾಗಿತ್ತೇ ? 'ನನಗೆ ರಾಜ್ಯ ಬೇಕು' ಎಂದು ಒಂದು ಮಾತು ನೀನು ಹೇಳಿದ್ದರೆ ನಿನ್ನಣ್ಣ ರಾಮ ಪ್ರತಿಯಾಡದೆ ಅದನ್ನು ಸಂತೋಷವಾಗಿ ನಿನಗೆ ಒಪ್ಪಿಸುತ್ತಿದ್ದನಲ್ಲಾ ! ಅಂಥ ಅಣ್ಣನಿಗಿಂತ ಈ ಜಡಭೂಮಿ ನಿನಗೆ ಪ್ರಿಯವಾಯಿತೇ – ಹೋಗು – ನನಗೆ ಮುಖ ತೋರಬೇಡ.

[ಭರತ ಮಾತನಾಡದೆ ಕೌಸಲ್ಯೆಯ ಬಳಿಗೆ ಬಂದು ಅವಳ ಪಾದಗಳ ಮೇಲೆ ತಲೆಯಿಟ್ಟು ನಮಸ್ಕರಿಸುತ್ತಾನೆ. ಅವನ ಕಣ್ಣೀರು ಆಕೆಯ ಪಾದಗಳನ್ನು ತೊಳೆಯುತ್ತದೆ. ಶತ್ರುಘ್ನನೂ ಅಣ್ಣನನ್ನೇ ಅನುಸರಿಸುತ್ತಾನೆ.]

**ಭರತ** : ಅಮ್ಮಾ ನನಗೊಂದೂ ತಿಳಿಯದು. ಮಿಥಿಲೆಯಿಂದ ನಾವು ಬಂದು ಸ್ವಲ್ಪ ಹೊತ್ತಾಯಿತು. ನಿನ್ನ ಪಾದಸಾಕ್ಷಿಯಾಗಿ ಹೇಳುತ್ತೇನೆ ತಾಯಿ – ನಾನು ಈ ರಾಜ್ಯ ಬಯಸಲಿಲ್ಲ. ಅಯೋಧ್ಯೆಯ ರಾಜ ಪದವಿಗಿಂತ ರಾಮ ಕಿಂಕರತ್ವ ಸಾವಿರಪಾಲು ಉತ್ತಮವೆಂಬುದನ್ನು ನಾನರಿಯನೇ? ಅಮ್ಮಾ – ನಿನ್ನ ದಗ್ಧ ಹೃದಯಕ್ಕೆ ಶಾಂತಿ, ಸಮಾಧಾನ ನೀಡುವ ಶಕ್ತಿ ನನಗಿಲ್ಲ. ತಾಯಿ ಮಾಡಿದ ಅಪರಾಧಕ್ಕೆ ಮಗ ಶಿಕ್ಷೆ ಅನುಭವಿಸಲು ಸಿದ್ಧನಾಗಿದ್ದಾನೆ.

**ಸುಮಿತ್ರೆ**: ಭರತ, ನೀನು ಧರ್ಮಿಷ್ಠನೆಂಬುದನ್ನು ಲೋಕವೇ ಬಲ್ಲುದು – ನಿನ್ನ ಹಿರಿಯ ತಾಯಿ ಕೌಸಲ್ಯೆಯೂ ಬಲ್ಲಳು. ದುಃಖದಾವೇಗದಲ್ಲಿ ಅವಳು ಆಡಿದ ಮಾತುಗಳನ್ನು ಮನಸ್ಸಿಗೆ ಹಾಕಿಕೊಳ್ಳಬೇಡ.

[ಕೌಸಲ್ಯೆ ಭರದಿಂದ ಭರತನನ್ನಪ್ಪಿ ಅವನ ಕಣ್ಣೀರು ತೊಡೆಯುವಳು.]

**ಕೌಸಲ್ಯೆ**: ಕೋಪದ ಭರದಲ್ಲಿ ನಾನು ತಪ್ಪಾಡಿದೆ. ರಾಮವಿಯೋಗ ನನ್ನನ್ನು ಮತಿಭ್ರಾಂತಳನ್ನಾಗಿ ಮಾಡಿದೆ.

**ಭರತ** : ಅಮ್ಮಾ, ಶ್ರೀರಾಮಚಂದ್ರ ಪ್ರಯಾಣಮಾಡುವ ಮುನ್ನ ನನಗೆ ಏನು ಸಂದೇಶ ಅಪ್ಪಣೆಮಾಡಿದ.

**ಸುಮಿತ್ರೆ**: ಅರಣ್ಯಕ್ಕೆ ಹೊರಟುನಿಂತ ರಾಮಚಂದ್ರ ಎಲ್ಲರನ್ನೂ ಉದ್ದೇಶಿಸಿ 'ನನ್ನ ಪ್ರಿಯಬಂಧು ಭರತ ನಿತ್ಯ ಸುಖಿಯಾಗಿರಲಿ, ಅವನ ರಾಜ್ಯ ನಿತ್ಯ ಸುಭಿಕ್ಷವಾಗಿರಲಿ. ಧರ್ಮಿಷ್ಠನಾದ ಭರತನ ಬಗ್ಗೆ ಯಾರೂ ಅಪಶಬ್ದ ನುಡಿಯಬಾರದೆಂದು ನಾನು ಬೇಡಿಕೊಳ್ಳುತ್ತೇನೆ. ನನ್ನ ಪೂಜ್ಯ ಮಾತೆಯಾದ ಕೈಕಾದೇವಿಯ ನಿಂದೆಗೆಳಸುವವರು ನನ್ನನ್ನು ನಿಂದಿಸಿದಂತೆ ಎಂದು ಭಾವಿಸಿಕೊಳ್ಳುತ್ತೇನೆ' ಎಂದು ಹೇಳಿದ.

**ಭರತ** : ಅಯ್ಯೋ ರಾಮ – ಯಾವಾಗ ನಿನ್ನನ್ನು ಕಾಣುವೆ ತಂದೆ. ನನ್ನ ಹೃದಯ ಒಡೆದು ಹೋಗದೇಕೆ? ತಾಯೀ, ರಾಮನನ್ನು ಕಾಣದೆ ನಾನು ಅರಗಳಿಗೆ ಇಲ್ಲಿ ನಿಲ್ಲಲಾರೆ, ಅವನಿದ್ದಲ್ಲಿ ಹೋಗಿ ಬರಲನು ಮತಿಕೊಡಿ. ಅವನ ಚರಣಗಳ ಮೇಲುರುಳಿ ಅಯೋಧ್ಯೆಗೆ ಕರೆದು ಕೊಂಡು ಬರುತ್ತೇನೆ – ಅವನು ಬಾರದಿದ್ದರೆ ನಾನಲ್ಲಿಯೇ ಅವನ ಚರಣಕಮಲಗಳ ಮೇಲೆ ಪ್ರಾಣವೊಪ್ಪಿಸುತ್ತೇನೆ. ಶತ್ರುಘ್ನ ಪ್ರಯಾಣಕ್ಕೆ ಸಿದ್ಧನಾಗು. (ಮೈಯ ಮೇಲಣ ಆಭರಣಗಳನ್ನೂ ದಿವ್ಯಾಂಬರ

ಗಳನ್ನೂ ತೆಗೆಯುತ್ತಾ] ರಾಮ ಧರಿಸುವ ನಾರುಡೆಯನ್ನು ಧರಿಸುತ್ತೇನೆ–ರಾಮ ಭುಜಿಸುವ ಕಂದ ಮೂಲಗಳನ್ನು ಭುಜಿಸುತ್ತೇನೆ–ರಾಮನಿಗಿಲ್ಲದ ಭೋಗಭಾಗ್ಯ ಅವನ ಚರಣಧೂಳಿಯಾದ ನನಗೇಕೆ?—ಶತ್ರುಘ್ನ, ಇವುಗಳನ್ನೂ ಕೈಕಾರಾಣಿಗೆ ಒಪ್ಪಿಸಿಬಿಡು. ನನಗೆ ದಿವ್ಯಾಂಬರದ ಬದಲು ಚೀರಗಳನ್ನು ತಂದುಕೊಡು.

[ಶತ್ರುಘ್ನ ಭರತನ ಆಭರಣಗಳು, ದಿವ್ಯಾಂಬರಗಳನ್ನು ತೆಗೆದುಕೊಂಡು ಹೋಗುತ್ತಾನೆ]

**ಕೌಸಲ್ಯೆ :** ಧರ್ಮಮೂರ್ತಿ–ನಿನ್ನನ್ನು ಕಂಡರೆ ನನಗೆ ರಾಮನನ್ನು ಕಂಡಂತೆ ಆಗುತ್ತಿದೆ. ರಾಮನಿರುವೆಡೆಗೆ ನನ್ನನ್ನೂ ಕರೆದುಕೊಂಡು ಹೋಗು. ಅವನ ಮುಖಾರವಿಂದವನ್ನು ಎಂದಿಗೆ ಕಾಣುವೆನೋ ಎಂದು ಮನಸ್ಸು ತಪಿಸುತ್ತಿದೆ.

[ಶತ್ರುಘ್ನ ಚೀರದೊಂದಿಗೆ ಬರುತ್ತಾನೆ. ಅವನನ್ನನುಸರಿಸಿ ಕೈಕಾರಾಣಿ ಧಾವತಿಗೊಂಡು ಪ್ರವೇಶಿಸಿ]

**ಕೈಕಾ :** ಭರತ-ಭರತ ಏನುಮಾಡುತ್ತಿರುವೆ ಕಂದ–ನೀನೂ ಅರಣ್ಯವಾಸಿಯಾಗುವುದೇ?

**ಭರತ :** ಶ್ರೀರಾಮಚಂದ್ರ ಇರುವ ತಾಣ ಅರಣ್ಯವಲ್ಲ. ಕೈಕಾ ರಾಣಿ-ಅದು ದಿವ್ಯಸ್ವರ್ಗ.

**ಕೈಕಾ :** ಭರತ, ನನ್ನ ಕೈಬಿಡಬೇಡ. ನನಗೆ ರಾಮನಮೇಲೆ ದ್ವೇಷವಿಲ್ಲ. ನಿನ್ನ ಮೇಲಣ ವ್ಯಾಮೋಹ, ಮಂಥರೆಯ ಪ್ರೇರಣೆ ನನ್ನ ಕೈಯಲ್ಲಿ ಮಾಡಬಾರದ್ದು ಮಾಡಿಸಿತು.

**ಭರತ :** ರಾಮನಿಲ್ಲದ ಅಯೋಧ್ಯೆಯಲ್ಲಿ ನಾನು ನಿಲ್ಲಲು ಸಾಧ್ಯವಿಲ್ಲ, ಅಯೋಧ್ಯೆಯ ರಾಜಮುಕುಟಕ್ಕೆ ರಾಮನಲ್ಲದೆ ಬೇರೆ ಯಾರೂ ಅಧಿಕಾರಿಗಳಲ್ಲ. ಅವನ ಚರಣಗಳ ಮೇಲುರುಳಿ ಅಯೋಧ್ಯೆಗೆ ಬರಬೇಕೆಂದು ಬೇಡಿಕೊಳ್ಳುತ್ತೇನೆ–ಅವನು ಬಂದರೆ ಸರಿ, ಬರದಿದ್ದರೆ ನಾನೂ ಅರಣ್ಯದಲ್ಲಿಯೇ ಉಳಿಯುತ್ತೇನೆ.

**ಕೈಕಾ :** ನಡೆ, ಜತೆಯಲ್ಲಿ ನಾನೂ ಬರುತ್ತೇನೆ. ಕಳೆದು ಹೋದುದನ್ನು ಮರೆತು ಅಯೋಧ್ಯೆಗೆ ಹಿಂದಿರುಗಬೇಕೆಂದು ನಾನೂ ಕೇಳಿಕೊಳ್ಳುತ್ತೇನೆ.

**ಭರತ :** ನೀನು ಬರಬೇಕಾದ ಅಗತ್ಯವಿಲ್ಲ. ರಾಮನಿಗೆ ಮತ್ತೆ ಏಕೆ ನಿನ್ನ ಪಾಪಿ ಮುಖದರ್ಶನ ಮಾಡಿಸಿ ಅವನ ದುಃಖವನ್ನು ಹೆಚ್ಚುಮಾಡುವೆ.

**ಕೈಕಾ :** (ಕೌಶಲ್ಯೆಯ ಪಾದಗಳ ಮೇಲೆ ಬಿದ್ದು) ಅಕ್ಕಾ, ನಾನು ಮಹಾಪ ರಾಧಿನಿ, ನನ್ನನ್ನು ಕ್ಷಮಿಸಿ-ಜತೆಯಲ್ಲಿ ಕರೆದೊಯ್ಯುವಂತೆ ಭರತನಿಗೆ ನೀವಾದರೂ ಹೇಳಿ.

**ಕೌಸಲ್ಯೆ :** (ಕೈಕೆಯನ್ನು ಎದೆಗಪ್ಪಿಕೊಂಡು) ಬಾ ತಂಗಿ, ಸುಖಸಂಪತ್ತು ನಮ್ಮಿಬ್ಬರನ್ನೂ ಒಂದುಗೂಡಿಸಲಿಲ್ಲ-ದುಃಖ ನಮ್ಮನ್ನು ಒಂದುಗೂಡಿ ಸುತ್ತಿದೆ. ನನ್ನಂತೆ ನೀನೂ ದುಃಖಿನಿ, ಮಗನನ್ನು ಕಳೆದುಕೊಂಡು ನಾನು ಮರುಗುತ್ತಿದ್ದೇನೆ; ಮಗನನ್ನು ಕಳೆದುಕೊಳ್ಳಬೇಕಲ್ಲಾ ಎಂದು ನೀನು ಮರುಗುತ್ತಿರುವೆ. ನನ್ನ ರಾಮಚಂದ್ರನಿಗೆ ನನ್ನ ಮೇಲಣ ಪ್ರೇಮಕ್ಕಿಂತ ನಿನ್ನ ಮೇಲೆ ಪ್ರೇಮ ಹೆಚ್ಚು. ಅಯೋಧ್ಯೆಗೆ ಹಿಂದಿರು ಗೆಂದು ನಾನು ಹೇಳಿದರೆ ಅವನು ಒಪ್ಪುವನೋ ಇಲ್ಲವೋ—ನೀನು ಹೇಳಿದರೆ ಒಪ್ಪಬಹುದು.

[ವಶಿಷ್ಠರು, ಸುಮಂತ್ರ ಪ್ರವೇಶಿಸುವರು. ಭರತ, ಶತ್ರುಘ್ನರು ಅವರಿಗೆ ನಮಸ್ಕರಿಸುವರು]

**ಸುಮಂತ್ರ :** ಆಯುಷ್ಮಂತನ ಅಪ್ಪಣೆಯೇನು ?

**ಭರತ :** ಆರ್ಯ ಸುಮಂತ್ರ, ರಾಮರಾಜ್ಯವನ್ನು ರಾಮನಿಗೆ ಒಪ್ಪಿಸಲು ನಾನು ಹೊರಟಿದ್ದೇನೆ. ಕೃತಕೃತ್ಯನಾಗೆಂದು ನೀವೂ, ಪೂಜ್ಯ ಆಚಾ ರ್ಯರೂ ಹರಸಬೇಕು.

**ವಶಿಷ್ಠ :** ನಾವೂ ಬರುತ್ತೇವೆ ಭರತ. ಎಲ್ಲರೂ ಒಟ್ಟಾಗಿ ಹೋಗಿ ರಾಮ ನನ್ನು ಪ್ರಾರ್ಥಿಸಿ ಕರೆದುಕೊಂಡು ಬರೋಣ.

**ಭರತ :** ಪೂಜ್ಯರ ಸಲಹೆಯಂತೆಯೇ ಆಗಬಹುದು. ಹೋಗು ಸುಮಂತ್ರ-ಕೂಡಲೆ ಪ್ರಯಾಣದ ಸಿದ್ಧತೆ ಮಾಡು.

## ೧೮

[ಅಯೋಧ್ಯೆಯನ್ನು ಬಿಟ್ಟು ಸೀತಾರಾಮ ಲಕ್ಷ್ಮಣರು ಅರಣ್ಯಾಭಿಮುಖ ರಾಗುತ್ತಾರೆ. ಲಕ್ಷ್ಮಣ ಮುಂದೆ ಹೊರಟು, ಹಾದಿಗೆ ಅಡ್ಡಲಾಗಿದ್ದ ರೆಂಬೆಗಳನ್ನು ಮುಳ್ಳು ಪೊದೆಗಳನ್ನು ಕಡಿದು ಸೀತಾರಾಮರಿಗೆ ಹಾದಿ ಬಿಡಿಸಿ ಕೊಡುತ್ತಿದ್ದಾನೆ.

ಬಿಸಿಲಿನ ಝಳಕ್ಕೆ ಸೊರಗುತ್ತಿದ್ದ ಸೀತೆ ಅಲ್ಲಲ್ಲಿ ಕುಳಿತುಕೊಳ್ಳುತ್ತಾಳೆ. ಪಕ್ಕ ದಲ್ಲಿ ಬೆಳೆದಿದ್ದ ಹಸಿರೆಲೆಗಳ ಚಾಮರ ಮಾಡಿಕೊಂಡು ರಾಮ ಸೀತೆಯ ಉಪಚಾರ ಮಾಡುತ್ತಾನೆ.

ಅಲ್ಲಲ್ಲಿ ಸಿಕ್ಕುತ್ತಿದ್ದ ಕಾಡು ಹಣ್ಣುಗಳನ್ನಾರಿಸಿ ರಾಮ ಸೀತೆಗೆ ಕೊಡುತ್ತಾನೆ. ಸೀತೆಯ ಆಯಾಸ ಪರಿಹಾರಕ್ಕೆ ರಾಮ ಹಾದಿಯಲ್ಲಿ ಸಿಕ್ಕುತ್ತಿದ್ದ ಬಗೆ ಬಗೆಯ ಕಾಡುಹೂಗಳನ್ನಾಯ್ದು ಅವಳ ಕೈಯಲ್ಲಿಡುತ್ತಾನೆ.

ಅಲ್ಲಿಯೊಂದು ಜಿಂಕೆಗಳ ತಂಡ, ಇಲ್ಲಿಯೊಂದು ಮೊಲ, ಗಿಡದ ಹಸುರಿಗೆ ಮೈಪುರಿ ಮಾಡಿಕೊಂಡಿರುವ ಗಿಣಿಯನ್ನು ರಾಮ, ಸೀತೆಗೆ ತೋರಿಸುತ್ತಾನೆ. ನೀಲ ಗಗನದಲ್ಲಿ ಹಾರಿ ಹೋಗುತ್ತಿದ್ದ ಬೆಳ್ಳಕ್ಕಿಗಳ ತಂಡವನ್ನು ನೋಡುತ್ತ ಸೀತೆ ವಿಸ್ಮಿತಳಾಗುತ್ತ ನಿಲ್ಲುತ್ತಾಳೆ. ನಿಸರ್ಗದ ಸೌಂದರ್ಯಾತಿಶಯದಿಂದ ಪುಳಕಿತಳಾದ ಸೀತೆ]

ಸೀತೆ : ಅರಣ್ಯವೆಂದರೆ ನನಗೆ ಭೀತಿಯಾವರಿಸುತ್ತಿತ್ತು. ಕ್ರೂರ ಮೃಗಗಳಿಗೂ, ದುಷ್ಟ ಜಂತುಗಳಿಗೂ ಆವಾಸಸ್ಥಾನವಾಗಿರುವ ಅರಣ್ಯದಲ್ಲಿ ನಾವು ಹದಿನಾಲ್ಕು ವರ್ಷ ಹೇಗೆ ಕಳೆಯುವುದೆಂಬ ಚಿಂತೆ ನನಗೆ ಮೂಡಿತು – ಆದರೆ ಅರಣ್ಯಕ್ಕೆ ಬಂದಮೇಲೆ ಹೂ, ಹಕ್ಕಿಗಳ ಸಹವಾಸದಲ್ಲಿ ನನ್ನ ಚಿಂತೆ ದೂರವಾಯಿತು. ದುಷ್ಟ ಮೃಗಗಳ ಬಾಧೆಯಿಲ್ಲದಿದ್ದರೆ ಅರಣ್ಯ ನಗರಕ್ಕಿಂತ ಚೆಲುವಾಗಿರುತ್ತದೆ.

ರಾಮ : ಮೃಗಗಳ ದೌಷ್ಟ್ಯವೂ ನಿಸರ್ಗದ ಆವಿರ್ಭಾವ ಸೀತಾ. ಕಂಠ ಕೇಸರಿಯನ್ನು ಮೆರಸಿಕೊಂಡು, ಇಡಿಯ ವನಪ್ರಾಂತ್ಯವನ್ನು ತನ್ನ ರಾಜಗಾಂಭೀರ್ಯದಿಂದವಲೋಕಿಸುವ ಮೃಗರಾಜನ ವಿಕ್ರಮ ಸೌಂದರ್ಯದಲ್ಲಿಯೂ ಪ್ರಕೃತಿಯ ಆವಿಷ್ಕಾರವಿದೆ ; ಗರಿಗೆದರಿಕೊಂಡು ಶೃಂಗಾರ ಲೀಲೆಗೆ ನಲ್ಲನನ್ನು ಕೆಣಕುವ ನಲ್ಲೆ ಪಾರಿವಾಳದಲ್ಲಿಯೂ ಪ್ರಕೃತಿಯ ಸೊಬಗಿದೆ. ಒಂದು ರುದ್ರ ಗಂಭೀರ, ಇನ್ನೊಂದು ಶಾಂತ ಸುಂದರ ; ಒಂದು ಧೀರ, ಇನ್ನೊಂದು ಲಲಿತ.

ಸೀತೆ : ಆತ್ಮಶಾಂತಿಗೆ ಸಮಚಿತ್ತವೇ ಸೋಪಾನವೆಂಬುದನ್ನು ಕೇಳಿ ಬಲ್ಲೆ. ನೀವು ಸಾಧಿಸಿದ ಬಗೆ ನನಗೆ ತಿಳಿಯದು.

ರಾಮ : ನೀನೂ ಸಾಧಿಸಿರುವೆ. ನಾನು ಜ್ಞಾತವಾಗಿ ಸಾಧಿಸಿರುವುದನ್ನು ನೀನು ಅಜ್ಞಾತವಾಗಿ ದೊರಕಿಸಿಕೊಂಡಿರುವೆ. ಜನಕನಂದನೆಗೆ ಯಾರು ಹೇಳಿ ಕೊಡಬೇಕಾದದ್ದು ಏನಿದೆ ?

[ರಾಮನ ಮೆಚ್ಚುಗೆಯ ಮಾತಿಗೆ ಸೀತಾ ನಸುನಾಚಿ ತಲೆತಗ್ಗಿಸುವಳು]

ಲಕ್ಷ್ಮಣ : ಅಣ್ಣಾ. ಅದೋ ಅಲ್ಲಿ ಯಾವದೋ ಊರು ಕಾಣುತ್ತಿದೆ. ಸ್ವಲ್ಪ ವಿಶ್ರಮಿಸಿಕೊಂಡು ನಾವು ಮುಂದಕ್ಕೆ ಹೋಗಬಹುದು.

**ರಾಮ :** ಅದು ಶೃಂಗಬೇರಪುರ ಲಕ್ಷ್ಮಣಾ. ನಮ್ಮ ಪೂಜ್ಯ ತಂದೆಯ ಆಪ್ತ ಮಿತ್ರ ಗುಹನು ಅದರ ಅರಸು. ನಾವು ಮುಂದಕ್ಕೆ ಹೋಗ ಬೇಕಾದರೆ ನದಿ ದಾಟಬೇಕಾಗುತ್ತದೆ. ಗುಹ ರಾಜೇಂದ್ರ ನಮಗೆ ನೌಕೆಯನ್ನೊದಗಿಸಿಕೊಡುತ್ತಾನೆ. ನೀನು ಮುಂದಾಗಿ ಹೋಗಿ ನಮ್ಮ ಆಗಮನವನ್ನು ಗುಹರಾಜೇಂದ್ರನಿಗೆ ತಿಳಿಸು.

[ಲಕ್ಷ್ಮಣ ಹೋಗುವನು]

೧೯

[ಶೃಂಗಬೇರಪುರ. ಗುಹನೂ ಅವನ ಹೆಂಡತಿ ಜ್ವಾಲಾಮಾಲಿನಿ ಮತ್ತು ಅವರ ಪರಿವಾರದವರು ಉತ್ಸವದಲ್ಲಿ ನಿಮಗ್ನರಾಗಿದ್ದಾರೆ. ಗುಹನ ಪರಿವಾರದವರು ಬಗೆಬಗೆಯ ನಾಡುಕುಣಿತ, ಹಾಡುಗಳಿಂದ ತಮ್ಮ ದೊರೆಯನ್ನು ಸಂತೋಷಪಡಿಸುತ್ತಿದ್ದಾರೆ. ಪರಿವಾರದಲ್ಲಿ ಒಬ್ಬನೂ, ದೊರೆಯ ಆಪ್ತನೂ ಆದ ಸುಹೃತ್ಸೇನ ದೊರೆಯ ಬಳಿಗೆ ಬಂದು]

**ಸುಹೃತ್ :** ಪ್ರಭೂ, ಇಂದು ತಮ್ಮ ಪ್ರಜೆಗಳಿಗೆ ಹಿರಿಯ ಹಬ್ಬ. ಅರ ವತ್ತರ ಹೊಸ್ತಿಲ ಮೇಲೆ ಕಾಲಿಟ್ಟಿರುವ ತಾವು ಇಂಥ ಹತ್ತಾರು ಅರ ವತ್ತುಗಳನ್ನು ಕಾಣಬೇಕೆಂದು ನಮ್ಮೆಲ್ಲರ ಆಶಯ.

**ಗುಹ :** (ಸಂತೋಷದಿಂದ ಗಟ್ಟಿಯಾಗಿ ನಗುತ್ತ) ಅನಾದಿಮೂರ್ತಿಯಾದ ಬ್ರಹ್ಮನೊಂದಿಗೆ ನಾನು ಸ್ಪರ್ಧೆ ಹೂಡಬೇಕೆಂದು ಬಯಸುವೆಯಾ ಸುಹೃತ್ಸೇನಾ ?

**ಸುಹೃತ್ :** ಏಕಾಗಬಾರದು ಪ್ರಭು. ಲೋಕದ ತಂದೆ ಬ್ರಹ್ಮ; ನಮ್ಮ ತಂದೆ ನೀವು.

**ಗುಹ :** ಹಾಗೇ ಆಗಲಿ.

**ಸುಹೃತ್ :** ಇಂದು ತಾವೂ ನರ್ತಿಸಿ ನಮ್ಮೆಲ್ಲರ ಮನಸ್ಸಂತೋಷಪಡಿಸ ಬೇಕು.

**ಗುಹ :** ಎಳೆ ಹರೆಯದವರು ನಿಮ್ಮ ಮುಂದೆ ನಾನು ಕುಣಿಯುವುದೇ ? ಕೇಳಿದೆಯಾ, ಜ್ವಾಲಾ ?

**ಜ್ವಾಲಾ :** ಪ್ರಭುಗಳು ಮನಸ್ಸು ಮಾಡಿದರೆ ಅವರಿಗೆ ಅಸಾಧ್ಯವಾದು ದೇನಲ್ಲ.

**ಸುಹೃತ್ :** ರಾಣಿಯವರೂ ಒಪ್ಪಿಗೆಯಿತ್ತಿದ್ದಾರೆ ಪ್ರಭೂ—ನೀವಿನ್ನು ತಪ್ಪಿಸಿ ಕೊಳ್ಳುವಂತಿಲ್ಲ.

[ಗುಹ ನಸುನಗುತ್ತ ರಂಗದ ಮಧ್ಯೆ ಬಂದು ವೀರನೃತ್ಯವನ್ನು ಪ್ರದರ್ಶಿಸುವನು. ಜನ 'ಭಲೆಭಲೆ' ಎನ್ನುವರು. ನೃತ್ಯ ನಡೆದಿರುವಂತೆ ಪ್ರವೇಶಿಸಿದ ಲಕ್ಷ್ಮಣನು ಅದನ್ನೇ ನೋಡುತ್ತ ಒಂದೆಡೆ ನಿಲ್ಲುವನು. ಗುಹ ನೃತ್ಯ ಮುಗಿಸುತ್ತ ಬಂದಾಗ ಲಕ್ಷ್ಮಣನನ್ನು ಕಂಡು, ಮೆಲ್ಲನೆ ಅವನ ಬಳಿಗೆ ಬಂದು]

**ಗುಹ :** ಸೌಮ್ಯಮುಖನೇ, ನೀನು ಯಾರು ? ಎಲ್ಲಿಂದ ಬಂದೆ ?

**ಸ್ನೃಹತ್ :** ಪೂಜ್ಯ ಗುಹರಾಜೇಂದ್ರ, ಅಯೋಧ್ಯಾಪತಿಯಾದ ದಶರಥ ಮಹಾರಾಜನ ಪುತ್ರ ಲಕ್ಷ್ಮಣನು ಅಭಿವಂದಿಸುತ್ತಾನೆ.

**ಗುಹ :** ನನ್ನ ಪರಮ ಮಿತ್ರ ದಶರಥ ಮಹಾರಾಜನ ಪುತ್ರನೇ, ಬಾ-ಬಾ ನನ್ನ ಪ್ರಿಯಬಂಧು. ಆಲಂಗಿಸಿಕೋ.

[ಇಬ್ಬರೂ ಆಲಂಗಿಸಿಕೊಳ್ಳುವರು]

**ಗುಹ :** ಜ್ವಾಲಾ, ಇಂದು ನಿಜವಾಗಿಯೂ ಹಬ್ಬವಾಯಿತು.

**ಲಕ್ಷ್ಮಣ :** ಗುಹರಾಜೇಂದ್ರ, ಅಣ್ಣ ಶ್ರೀರಾಮಚಂದ್ರ ಸೀತಾದೇವಿಯೊಡನೆ ಆಗಮಿಸಿದ್ದಾನೆ.

**ಗುಹ :** ಸೀತಾರಾಮ ಬಂದಿರುವನೇ-ನನ್ನ ರಾಮ ಬಂದಿರುವನೇ–ಎಲ್ಲಿ ?

[ಸೀತಾರಾಮರು ಪ್ರವೇಶಿಸುವರು. ರಾಮ ಸೀತೆ ಗುಹನಿಗೂ ಜ್ವಾಲಾ ದೇವಿಗೂ ನಮಸ್ಕರಿಸುವರು]

[ಗುಹ ಜ್ವಾಲಾ ಸೀತಾರಾಮರನ್ನು ಪರಮಾದರದಿಂದ ಸತ್ಕರಿಸುವರು]

**ರಾಮ :** ಪೂಜ್ಯ, ನನ್ನ ತಂದೆಯ ಪರಮ ಮಿತ್ರನಾದ ನೀನು ನನಗೆ ತಂದೆಯ ಸಮಾನ. ನನಗೇಕೆ ಇಷ್ಟೊಂದು ಗೌರವ ?

**ಗುಹ :** ರಾಮಚಂದ್ರ, ಸತ್ಯವ್ರತನಾದ ನೀನು ನನಗೆ ದೇವಸಮಾನ. ದೂರದ ಅಯೋಧ್ಯೆಯಿಂದ ನನ್ನ ಬಡಕುಟೀರಕ್ಕೆ ದಯೆಮಾಡಿಸಿರುವೆ. ನಿನ್ನನ್ನು ಹೇಗೆ ಆದರಿಸಬೇಕೋ ತಿಳಿಯದೆ ದಿಗ್ಭ್ರಾಂತನಾಗಿರುವೆನು ............ಪೂಜ್ಯ ದಶರಥ ಮಹಾರಾಜನು ಕುಶಲಿಯೇ ? ನೀನು ಏಕಾಂಗಿಯಾಗಿ ಹೊರಟಿರುವ ಕಾರ್ಯಗೌರವವು ಯಾವದು ?

[ರಾಮ ನಿರುತ್ತರನಾಗುವನು]

**ಲಕ್ಷ್ಮಣ :** ಗುಹರಾಜೇಂದ್ರ, ಪೂಜ್ಯ ತಂದೆಯವರು ಆರೋಗ್ಯವಾಗಿದ್ದಾರೆ. ಶ್ರೀ ರಾಮಚಂದ್ರ ಹದಿನಾಲ್ಕು ವರ್ಷಗಳ ವನವಾಸ ಕೈಗೊಂಡಿದ್ದಾನೆ.

**ಗುಹ :** (ಚಕಿತನಾಗಿ) ವನವಾಸ! ಶ್ರೀರಾಮಚಂದ್ರನಿಗೆ ವನವಾಸ !! ಇದನ್ನು ವಿಧಿಸಿದವರು ಯಾರು ?

**ಲಕ್ಷ್ಮಣ :** ತಂದೆಯವರು ಕೈಕಾದೇವಿಗೆ ಕೊಟ್ಟ ಎರಡು ವರಗಳ ದೆಸೆಯಿಂದ ಶ್ರೀರಾಮಚಂದ್ರನಿಗೆ ಹದಿನಾಲ್ಕು ವರ್ಷ ವನವಾಸ—ಭರತನಿಗೆ ಯುವರಾಜ ಪಟ್ಟ ಲಭಿಸಿದವು.

**ಗುಹ :** ಇನವಂಶಲಲಾಮನಾದ ಶ್ರೀರಾಮಚಂದ್ರನಿಗೆ ವನವಾಸವೇ ? ವಿವೇಕಶಾಲಿಯಾದ ದಶರಥ ಮಹಾರಾಜನಿಗೆ ಈ ಮರುಳು ಹೇಗೆ ಕವಿಯಿತು ? ರಾಮಭದ್ರ, ನೀನು ಅರಣ್ಯವಾಸಿಯಾಗಿ ಹೊರಡಲು ನಾನು ಸಮ್ಮತಿಕೊಡೆನು. ದುಷ್ಟ ಮೃಗಗಳಿಂದಲೂ, ಕ್ರೂರ ರಕ್ಕಸರಿಂದಲೂ ತುಂಬಿರುವ ಅರಣ್ಯಪ್ರಾಂತ್ಯದಲ್ಲಿ ಜಾನಕಿ ಇರಲು ಸಾಧ್ಯವೆ? ನನ್ನ ಶೃಂಗಬೇರ ಬಹಳ ಸಣ್ಣ ರಾಜ್ಯ—ಅಯೋಧ್ಯೆಗೂ ಇದಕ್ಕೂ ಹೋಲಿಕೆಯಿಲ್ಲ—ಆದರೆ ನನ್ನ ಪ್ರಜರು ಸಾತ್ವಿಕರು, ದಯಾಭರಿತರು. ರಾಮಭದ್ರ, ಇದೋ—ಇಂದೇ ನನ್ನ ರಾಜ್ಯವನ್ನು ನಿನಗೆ ಧಾರೆಯೆರೆದು ಕೊಡುತ್ತೇನೆ. ಶೃಂಗಿಬೇರವನ್ನು ಒಪ್ಪಿಸಿಕೊಂಡು ನೀನು ಸೀತಾಲಕ್ಷ್ಮಣರೊಂದಿಗೆ ಸುಖವಾಗಿರು.

**ರಾಮ :** ಪೂಜ್ಯ, ನಿನ್ನ ಅಸದೃಶ ಪ್ರೇಮಕ್ಕೆ ನಾನು ಅರೆಮೂಕನಾಗಿದ್ದೇನೆ. ತಾಯಿತಂದೆಗಳ ಮಾತನ್ನು ನಾನು ಪರಿಪಾಲಿಸದಿದ್ದರೆ ನಿಂದ್ಯನಾಗುತ್ತೇನೆ ನಾವು ಮುಂದೆ ಪ್ರಯಾಣಮಾಡಲು ಅನುಮತಿ ದಯೆಪಾಲಿಸು. ಗಂಗಾನದಿಯನ್ನು ದಾಟಿ ನಾವು ಮುಂದಕ್ಕೆ ಹೋಗಲು ಅನುಕೂಲಮಾಡಿಕೊಡು.

**ಗುಹ :** ರಾಮಭದ್ರ, ಒಂದೆರಡು ದಿನವಾದರೂ ಇಲ್ಲಿ ಉಳಿದು ನಮ್ಮ ಸೇವೆಯನ್ನು ಸ್ವೀಕರಿಸಲಾಗುವುದಿಲ್ಲವೇ ?

**ರಾಮ :** ಇಲ್ಲ, ನಾವು ಪುರಪ್ರವೇಶವನ್ನೂ ಮಾಡಬಾರದು-ಇನ್ನು ಪುರದಲ್ಲಿ ವಾಸಮಾಡುವುದು ಎಲ್ಲಿ ಬಂತು.

**ಗುಹ :** ಹದಿನಾಲ್ಕು ವರ್ಷ ನೀನು ಅರಣ್ಯದಲ್ಲಿ ಕಳೆಯಬೇಕೇ ರಾಮಚಂದ್ರ—ನೀನು ವನವಾಸ ಮುಗಿಸಿಕೊಂಡು ಹಿಂದಿರುಗುವ ವೇಳೆಗೆ ನಾನು ಜೀವಂತನಾಗಿರುವೆನೋ ಇಲ್ಲವೋ ?

**ರಾಮ :** ಅಶುಭವನ್ನಾಡಬೇಡ ಗುಹರಾಜ.

**ಗುಹ :** ಇಂದು ಹೊರಡಲೇ ಬೇಕೇ ?

**ರಾಮ :** ಅದು ಅನಿವಾರ್ಯ.

**ಗುಹ :** ಸುಹೃತ್ಸೇನ—ದೋಣಿಗಳನ್ನು ಸಿದ್ಧಗೊಳಿಸು. ನಾನೇ ಶ್ರೀರಾಮಚಂದ್ರನನ್ನು ನದಿ ದಾಟಿಸುತ್ತೇನೆ.

[ಸುಹೃತ್ಸೇನ ಹೋಗುವನು. ರಾಮ, ಸೀತೆ, ಲಕ್ಷ್ಮಣರನ್ನು ದೋಣಿಯಲ್ಲಿ ಗುಹರಾಜ ಕರೆದೊಯ್ಯುವನು. ಗುಹನೇ ದೋಣಿ ನಡೆಸುತ್ತಾನೆ. ಜ್ವಾಲಾ ಮಾಲಿನಿ ಸೀತೆಯೊಂದಿಗಿದ್ದಾಳೆ.]

## ೨೦

[ಚಿತ್ರಕೂಟ ಪರ್ವತದಲ್ಲಿ ರಾಮನ ಆಶ್ರಮ. ಜಾನಕಿ ಪ್ರೀತಿಯಿಂದ ಗಿಡಗಳಿಗೆ ನೀರೆರೆಯುತ್ತಿದ್ದಾಳೆ. ರಾಮ ಆವಳನ್ನು ಕರುಣೆಯಿಂದ ನೋಡುತ್ತಿದ್ದಾನೆ. ಜಾನಕಿ ನೀರಿನ ಗಡಿಗೆ ಕೆಳಗಿಟ್ಟು ಒಂದು ಹೂವು ಕಿತ್ತುಕೊಂಡು ಸಂಭ್ರಮದಿಂದ ರಾಮನ ಬಳಿಗೆ ಓಡಿಬರುತ್ತಾಳೆ.]

**ಸೀತೆ :** ಆರ್ಯಪುತ್ರ...............

**ರಾಮ :** ಏನಿಷ್ಟು ಸಂಭ್ರಮ ಜಾನಕಿ.

**ಸೀತೆ :** ಇಲ್ಲಿ ನೊಡು, ನನ್ನ ಪಾರಿಜಾತ ಮೊದಲ ಹೂವನ್ನು ನೀಡಿದೆ.

[ರಾಮ ಹೂವನ್ನು ಕೈಗೆ ತೆಗೆದುಕೊಂಡು ನೋಡುತ್ತಾ]

**ರಾಮ :** ಜಾನಕಿ, ನಾವು ಈ ಚಿತ್ರಕೂಟವನ್ನು ಯಾವಾಗ ಬಿಡಬೇಕಾಗುತ್ತದೋ ಏನೋ? ನೀನು ಶ್ರಮಪಟ್ಟು ಬೆಳೆಸಿದ ಹೂಗಿಡಗಳನ್ನು ಇಲ್ಲಿಯೇ ಬಿಟ್ಟು ಹೊರಡಬೇಕಾಗುತ್ತದೆ.

**ಸೀತೆ :** ಅದಕ್ಕೇಕೆ ಚಿಂತೆ? ಇಲ್ಲಿ ಮುಂದೆ ಬರುವವರು ನಾನು ಬೆಳಸಿದ ಹೂಗಳಿಂದ ಭಗವಂತನ ಪೂಜೆ ಮಾಡುತ್ತಾರೆ. ಈ ಹೂಗಳು ಯಾರ ಕೈಯ್ಯಿಂದ ಭಗವಂತನ ಪಾದ ಸೇರಿದರೂ ಜಾನಕಿ ಧನ್ಯಳಾಗುತ್ತಾಳೆ.

**ರಾಮ :** ಜಾನಕಿ ! ಜಾನಕಿ !!

[ಜಾನಕಿ ಕತ್ತೆತ್ತಿ ನೋಡುವಳು. ದೂರದಲ್ಲಿ ಧೂಳಿನ ಹೊಗೆ ಕಾಣಬರುತ್ತದೆ. ಭೀತಳಾಗಿ]

**ಸೀತೆ :** ಅಲ್ಲಿ ನೋಡು ಆರ್ಯಪುತ್ರ–ಯಾವದೋ ಸೇನೆ ನಮ್ಮ ಕಡೆಗೇ ಬರುತ್ತಿದೆ.

**ರಾಮ :** ಇಲ್ಲಿಗೆ ಬರುವವರು ಯಾರಿರಬಹುದು ?

[ಲಕ್ಷ್ಮಣ ಓಡಿ ಬಂದು ಕೂಡಲೆ ತನ್ನ ಧನುರ್ಬಾಣಗಳನ್ನು ಕೈಗೆತ್ತಿಕೊಂಡು]

**ಲಕ್ಷ್ಮಣ :** ಮೋಸವಾಯಿತು ಅಣ್ಣಾ. ಶತ್ರುಗಳಿಗೆ ನಮ್ಮ ನೆಲೆ ಗೊತ್ತಾಗಿ ಬಿಟ್ಟಿತು. ಧನುರ್ಬಾಣಗಳನ್ನು ಕೈಗೆತ್ತಿಕೋ.

**ರಾಮ :** (ಶಾಂತನಾಗಿ) ನಮಗೆ ಶತ್ರುಗಳೇ ಇಲ್ಲದಿರುವಾಗ ನಾವು ಯಾರಿಗೆ ಹೆದರಬೇಕು ಸೌಮಿತ್ರಿ. ಬರುತ್ತಿರುವವರು ಯಾರು ಸರಿಯಾಗಿ ತಿಳಿದುಕೊಂಡು ಬಾ.

**ಲಕ್ಷ್ಮಣ :** ಇದು ಆಲಸ್ಯಕ್ಕೆ ವೇಳೆಯಲ್ಲ ಅಣ್ಣ. ನೀಚ ಭರತನೇ ಸೈನ್ಯ ಸಮೇತನಾಗಿ ಬರುತ್ತಿರಬಹುದು. ನಿಮ್ಮನ್ನು ಕಾಡಿಗಟ್ಟಿ ಕೈಕಾದೇವಿಗೆ ತೃಪ್ತಿಯಾಗಿಲ್ಲ—ಸಂಹರಿಸಿಬಾರೆಂದು ಸೈನ್ಯಸಮೇತನಾಗಿ ಭರತನನ್ನು ಕಳುಹಿಸಿಕೊಟ್ಟಿದ್ದಾಳೆ.

**ರಾಮ :** ದುಡುಕಬಾರದು ಲಕ್ಷ್ಮಣ ತಾಳಿದವನು ಬಾಳಿಯಾನು ಎಂಬ ನಾಣ್ಣುಡಿಯನ್ನು ಮರೆತೆಯೇನು ?

**ಲಕ್ಷ್ಮಣ :** ನಿನ್ನ ತಾಳ್ಮೆ ನಿನಗೇ ಪ್ರೀತಿಯಾಗಬೇಕು ಅಣ್ಣ............

**ಸೀತೆ :** ನನಗೂ ಪ್ರೀತಿಯಾಗಿದೆ ಲಕ್ಷ್ಮಣ.

**ಲಕ್ಷ್ಮಣ :** ಬಿಡು ತಾಯೀ. ನೀವಿಬ್ಬರೂ ಲೋಕವ್ಯಾಪಾರಕ್ಕೇ ಹೊರಗು—ಅಗೋ ಭರತನ ಸೈನ್ಯ ಸಮೀಪಕ್ಕೆ ಬಂದು ಬಿಟ್ಟಿತು. (ಶರಸಂಧಾನಮಾಡಿ) ನೀಚ ಭರತ ಧನುಸ್ಸಿಗೆ ಹೆದೆಯೇರಿಸುವ ಮುನ್ನವೇ ಅವನ ಶಿರವನ್ನು ನೆಲದ ಮೇಲೆ ಉರುಳಿಸುತ್ತೇನೆ.

[ಲಕ್ಷ್ಮಣನ ಕೈಯಲ್ಲಿನ ಧನುಸ್ಸನ್ನು ರಾಮ ಕಿತ್ತುಕೊಳ್ಳುವನು]

[ಸುಮಂತ್ರ, ಗುಹನೊಂದಿಗೆ ಪ್ರವೇಸುವನು. ರಾಮ ಧಾವಿಸಿ ಹೋಗಿ [ಸುಮಂತ್ರನನ್ನಪ್ಪುವನು]

**ಸುಮಂತ್ರ :** ರಾಮಭದ್ರ, ಭರತಚಂದ್ರ ನಿನ್ನ ಬಳಿಗೆ ಬರಲು ಅಪ್ಪಣೆ ಬೇಡುತ್ತಿದ್ದಾನೆ.

**ರಾಮ :** ಹೊಗು ಆರ್ಯ, ನನ್ನ ಪ್ರೀತಿಯ ತಮ್ಮನನ್ನು ಕರೆದುಕೊಂಡು ಬಾ—ಬೇಗ ಕರೆದುಕೊಂಡು ಬಾ.

[ಸುಮಂತ್ರ ಹೋಗಲು, ಗುಹನ ಕಡೆಗೆ ತಿರುಗಿ]

**ರಾಮ :** ಪೂಜ್ಯ, ನನ್ನ ಸಂಸಾರದ ಕಷ್ಟ ಸುಖ ನಿನಗೂ ತಪ್ಪಲಿಲ್ಲ.

**ಗುಹ :** ಅದು ಯಾವಗಲೂ ನನಗೆ ಸ್ಥಿರವಾಗಿರಲಿ ರಾಮಭದ್ರ.

[ಸುಮಂತ್ರ, ಭರತ ಮತ್ತು ಪರಿವಾರದೊಂದಿಗೆ ಪ್ರವೇಶಿಸುವನು. ರಾಮನನ್ನು ಕಂಡಕೂಡಲೆ ಭರತ ಧಾವಿಸಿ ಬಂದು 'ಅಣ್ಣಾ' ಎಂದು ಅವನ ಪಾದಗಳ ಮೇಲುರುಳುವನು. ರಾಮ ಅವನನ್ನು ಪ್ರಿತಿಯಿಂದ ಎಬ್ಬಿಸಿ, ಅಪ್ಪಿ, ನೇವರಿಸಿ, ಅವನ ಕಣ್ಣುಗಳಿಂದುರುಳುತ್ತಿದ್ದ ಹನಿಗಳನ್ನು ತನ್ನ ಮೇಲುವಸ್ತ್ರದಿಂದ ಒರಸುವನು]

[ಪರಿವಾರದ ಕಡೆ ರಾಮನ ಲಕ್ಷ್ಯ ಹೋಗುವುದು. ಪೂಜ್ಯ ವಶಿಷ್ಠರನ್ನು ಕಂಡು ಭಕ್ತಿಯಿಂದ ನಮಸ್ಕರಿಸುವನು.]

[ತರುವಾಯ ಕೌಸಲ್ಯೆ, ಸುಮಿತ್ರೆಯರಿಗೆ ಅಭಿವಂದಿಸಿ]

ರಾಮ : ಆರ್ಯ ಸುಮಂತ್ರ, ನನ್ನ ನಲ್ಮೆಯ ತಾಯಿ ಕೈಕಾದೇವಿ ಬರಲಿಲ್ಲವೇ ?

[ಹಿಂದೆ ಮರೆಯಲ್ಲಿ ನಿಂತಿದ್ದ ಕೈಕಾದೇವಿಯನ್ನು ಕೌಸಲ್ಯೆ ಕೈಹಿಡಿದು ರಾಮನ ಬಳಿಗೆ ಕರೆದು ತರುವಳು. ರಾಮ ಅವಳ ಎರಡು ಪಾದಗಳನ್ನೂ ಮುಟ್ಟಿ ನಮಸ್ಕರಿಸುವನು. ಕೈಕಾದೇವಿ ಅವನನ್ನೆತ್ತಿ ಅಪ್ಪಿಕೊಂಡು ದುಃಖಿಸುವಳು]

ರಾಮ : (ಕೈಕೆಯಿಯ ಹಣೆಯನ್ನು ನೋಡುವನು. ಮನಸ್ಸಿಗೆ ಭಯವಾಗುವುದು) ಅಮ್ಮ........ ನಿನ್ನ ಹಣೆಯೇಕೆ............

[ಕೈಕಾದೇವಿ ಮಾತನಾಡದೆ ದುಃಖಿಸುವಳು. ಪರಿವಾರವೆಲ್ಲಾ ಕಣ್ಣೀರು ಗರೆಯುತ್ತಿರುವುದು]

ವಶಿಷ್ಠ : ರಾಮಭದ್ರ, ನಿನಗೊಂದು ಅಪ್ರಿಯವಾರ್ತೆ ಹೇಳಬೇಕಾಗಿ ಬಂದಿದೆ ಧೈರ್ಯಶಾಲಿಯಾದ ನೀನು............

ರಾಮ : ಗುರುದೇವಾ ಪೂಜ್ಯ ತಂದೆಯವರು............

ವಶಿಷ್ಠ : ಸ್ವರ್ಗವಾಸಿಗಳಾದರು.

['ಹಾ ! ತಂದೆ' ಎನ್ನುತ್ತಾ ಮೂರ್ಛಿತನಾಗಿ ಬೀಳುವನು. ಕೌಸಲ್ಯೆ, ಸೀತೆ, ಭರತ ಉಪಚರಿಸುವರು.]

ರಾಮ : ನಾನೆಂಥ ಭಾಗ್ಯಹೀನ. ತಂದೆಯ ಅವಸಾನ ಕಾಲದಲ್ಲಿ ಅವರ ಬಳಿಯಲ್ಲಿದ್ದು ಸೇವೆ ಶಿಶ್ರೂಷೆಮಾಡುವ ಭಾಗ್ಯವೂ ನನಗೆ ಲಭಿಸಲಿಲ್ಲವಲ್ಲ. ನೀನಾದರೂ ಅವರ ಬಳಿಯಲ್ಲಿದ್ದಿರಲ್ಲಾ–ಅದೇ ಒಂದು ಸಮಾಧಾನ.

ವಶಿಷ್ಠ : ರಾಮಭದ್ರ, ಭರತಶತ್ರುಘ್ನರೂ ಮಹಾರಾಜರ ಬಳಿಯಿರಲಾಗಲಿಲ್ಲ.

ರಾಮ : ಹಾ ತಂದೆ! ನಿನಗೆ ನಾಲ್ಕು ಮಕ್ಕಳಿದ್ದರೂ ಯಾರೂ ನಿನ್ನ ಅಂತಿಮ ದರ್ಶನ ಪಡೆಯಲಿಲ್ಲವಲ್ಲಾ.

ವಶಿಷ್ಠ : ರಾಮಭದ್ರ, ಜ್ಞಾನಿಯಾದ ನೀನು ದುಃಖಿಸುತ್ತ ಕುಳಿತುಕೊಳ್ಳುವುದು ತರವಲ್ಲ. ಕರ್ತವ್ಯ ಕೈಬೀಸಿ ನಿನ್ನನ್ನು ಕರೆಯುತ್ತಿದೆ.

ರಾಮ : ಗುರುದೇವಾ ಪೂಜ್ಯ ಪಿತೃದೇವನಿಗೆ ತಿಲಾಂಜಲಿಯನ್ನು ನಾನು ಒಪ್ಪಿಸಿ ಬರುವವರೆಗೆ ಎಲ್ಲ ಕರ್ತವ್ಯವೂ ಕಾಯಬೇಕು.

ವಶಿಷ್ಠ : ನಿಸ್ಸಂದೇಹವಾಗಿ.

೨೧

ರಾಮ ಲಕ್ಷ್ಮಣರು ತಂದೆಗೆ ತಿಲಾಂಜಲಿಯನ್ನೊಪ್ಪಿಸುವರು. ಶ್ರೀರಾಮ ಚಂದ್ರ ಕೈಯಲ್ಲಿ ಹಿಡಿದಿದ್ದ ಅರ್ಘ್ಯಜಲದೊಂದಿಗೆ ಅವನ ಕಣ್ಣೀರೂ ಬೆರೆಯುವುದು. ರಾಮನ ದುಃಖದೊಂದಿಗೆ ಪ್ರಕೃತಿಯೂ ಬೆರೆಯುವುದು. ಮೃಗ ಪಕ್ಷಿಗಳು ರಾಮನನ್ನೇ ನೋಡುತ್ತ ಕಂಬನಿ ಸುರಿಸುತ್ತ ನಿಂತಿರುತ್ತವೆ. ಗಿಡ ಮರಗಳು ಅಲುಗಾಡದೆ ಸ್ತಬ್ಧವಾಗಿರುತ್ತವೆ.

೨೨

[ಆಶ್ರಮಕ್ಕೆ ರಾಮ ಪರಿವಾರದೊಂದಿಗೆ ಹಿಂದಿರುಗುತ್ತಾನೆ. ರಾಮ ಎತ್ತರದ ಶಿಲಾ ಪೀಠದ ಮೇಲೆ ವಶಿಷ್ಠರನ್ನು ಕೂಡಿಸುತ್ತಾನೆ. ಅವರ ಸಮೀಪದಲ್ಲಿದ್ದ ಸಣ್ಣ ಶಿಲಾಪೀಠದ ಮೇಲೆ ತಾನು ಕುಳಿತುಕೊಳ್ಳುತ್ತಾನೆ. ಸುಮಂತ್ರ,ಗುಹ ಅಕ್ಕಪಕ್ಕದಲ್ಲಿ ಕುಳಿತುಕೊಳ್ಳುತ್ತಾರೆ. ರಾಮನ ಪಕ್ಕದಲ್ಲಿ ಲಕ್ಷ್ಮಣ ನಿಂತಿರುತ್ತಾನೆ. ಸೀತೆ ಅತ್ತೆಯವರ ಜತೆ ಒಂದೆಡೆ ಕುಳಿತಿರುತ್ತಾಳೆ.]

**ರಾಮ :** ಗುರುದೇವಾ, ನಾನು ನಿರ್ವಹಿಸಬೇಕಾದ ಕರ್ತವ್ಯವೇನೆಂಬುದನ್ನು ಅಪ್ಪಣೆಕೊಡಿಸಬೇಕು.

**ವಶಿಷ್ಠ :** ಅದನ್ನು ಭರತನೇ ಹೇಳುತ್ತಾನೆ.

**ಭರತ :** ಅಣ್ಣಾ, ನನ್ನ ಪ್ರಾರ್ಥನೆಯನ್ನು ನೀನು ನಿರಾಕರಿಸಬಾರದು.

**ರಾಮ :** ಹೇಳು ಭರತ, ನನ್ನಲ್ಲಿ ನಿನಗೆ ಸಂಕೋಚವೇ ?

**ಭರತ :** ನಾನು ಅಯೋಧ್ಯೆಗೆ ಹಿಂದಿರುಗಿದೊಡನೆಯೇ ಅಲ್ಲಿ ನಡೆದಿದ್ದ ದುರಂತ ತಿಳಿದು ಬಂತು. ನನ್ನ ಹಡೆದೊಡಲು ಅಯೋಧ್ಯೆಯ ಮೃತ್ಯುವಾಯಿತಲ್ಲಾ ಎಂದು ಹಲುಬಿದೆ. ನನ್ನದಲ್ಲದ ಈ ರಾಜ್ಯವನ್ನು ನನಗೆ ದೊರಕಿಸುವುದಕ್ಕಾಗಿ ಕೈಕಾದೇವಿ ತಂದೆಯನ್ನು ಬಲಿದಾನವಾಗಿ ಒಪ್ಪಿಸಿದಳು. ಶುಭ್ರಶೀತಲವಾದ ನಿನ್ನ ಸನ್ನಿಧಿಗೆ ತಾಯಿಯನ್ನಗಲಿದ ಕರುವಂತೆ ಓಡಿ ಬಂದಿದ್ದೇನೆ.

**ರಾಮ :** ಬಾ ತಮ್ಮ. ನಿಮ್ಮೆಲ್ಲರ ದುಃಖವನ್ನೂ ನನ್ನ ಮಡಲಿಗೆ ಹಾಕಿ. ನನ್ನಿಂದ ಜಗತ್ತಿಗೆ ಸ್ವಲ್ಪ ಶಾಂತಿ, ತೃಪ್ತಿ ದೊರೆಯುವುದು ಸಾಧ್ಯವಾದರೆ ಇಡಿಯ ಜಗತ್ತಿನ ಸಮಸ್ತ ದುಃಖವನ್ನೂ ಹೊರಲು ನಾನು ಸಿದ್ಧನಾಗಿದ್ದೇನೆ.

**ವಶಿಷ್ಠ :** ಅದಕ್ಕೇ ನಾವು ನಿನ್ನೆಡೆಗೆ ಬಂದಿದ್ದೇವೆ ರಾಮಭದ್ರಾ.

**ಭರತ :** ಅಣ್ಣಾ, ಪಿತೃವಿಯೋಗದಿಂದ ದುಃಖಿಸುತ್ತಿರುವವರು ನಾವೇ ನಾಲ್ವರಲ್ಲ – ಇಡಿಯ ಅಯೋಧ್ಯೆಯೇ ದುಃಖಿಸುತ್ತಿದೆ. ದಶರಥ ಚಕ್ರ

ವರ್ತಿಯ ಹಿರಿಯ ಮಗನಾದ ನೀನು ನಿನ್ನ ತಮ್ಮಂದಿರನ್ನು ಸಂತೈಸ ಬೇಡವೇ ?

ರಾಮು : ನನಗೆ ಏನು ಹೇಳಲು ಪ್ರಯತ್ನಿಸುತ್ತಿರುವೆ ಭರತ.

ಭರತ : ಅಯೋಧ್ಯೆಯ ಸಿಂಹಾಸನಾಧಿಕಾರಿ ನೀನಲ್ಲದೆ ನಾನಲ್ಲ. ನೀನು ಅಯೋಧ್ಯೆಗೆ ಹಿಂದಿರುಗಬೇಕು.

ರಾಮು : ತಂದೆಗೆ ಕೊಟ್ಟ ವಚನವನ್ನು ಭಂಗಮಾಡಿ – ತಾಯಿಯೆದುರು ಒಪ್ಪಿಕೊಂಡ ಮಾತನ್ನು ಉಲ್ಲಂಘಿಸಿ............

ಕೈಕಾ : ನೀನು ಅಯೋಧ್ಯೆಗೆ ಹಿಂದಿರುಗಿ ರಾಜ್ಯಸೂತ್ರಗಳನ್ನು ವಹಿಸಿ ಕೊಳ್ಳಬೇಕೆಂದು ಕೇಳಿಕೊಳ್ಳುವುದರ ಸಲುವಾಗಿಯೇ ನಾನು ಬಂದಿರು ವುದು. ಭರತನ ಪ್ರಾರ್ಥನೆಯನ್ನು ನಿರಾಕರಿಸಬೇಡ. ಹಿತವರೆನಿಸಿ ದವರ ಮಾತು ಕೇಳಿಕೊಂಡು ನಾನು ಮಹಾ ಅನರ್ಥಕ್ಕೆ ಕಾರಣಳಾದೆ. ಪತಿಯ ಮರಣ – ಲೋಕನಿಂದೆಗಳಿಗೆ ಗುರಿಯಾದೆ; ಮಗನಿಂದ ತಿರಸ್ಕೃತಳಾದೆ. ನನ್ನ ಅವಿವೇಕದಿಂದ ಅಯೋಧ್ಯೆಯು ನಲುಗ ದಿರಲು ನಿನ್ನ ಸಹಾಯ ಕೋರುತ್ತಿದ್ದೇನೆ.

ಸುಮಂತ್ರ : ರಾಮಭದ್ರ, ನಿನ್ನನ್ನು ಬಿಟ್ಟು ನಾವು ಅಯೋಧ್ಯೆಗೆ ಹಿಂದಿರು ಗುವುದಿಲ್ಲ.

ರಾಮು : ಗುರುದೇವಾ...........

ವಶಿಷ್ಠ : ನೀನು ಅಯೋಧ್ಯೆಗೆ ಹಿಂದಿರುಗದೆ ಗತ್ಯಂತರವೇ ಇಲ್ಲ ರಾಮ ಭದ್ರ. ಧರ್ಮಾತ್ಮನಾದ ಭರತ ಎಂದಿಗೂ ತನ್ನದಲ್ಲದ ರಾಜ್ಯವನ್ನು ಪರಿಗ್ರಹಿಸುವುದಿಲ್ಲ. ಅಯೋಧ್ಯೆಯ ಗತಿಯೇನೆಂಬುದನ್ನು ನೀನು ಪರ್ಯಾಲೋಚಿಸಬೇಕು.

ರಾಮು : ಭರತ, ನಿನಗಾಗಿ - ನನ್ನ ಅಯೋಧ್ಯೆಗಾಗಿ ನಾನು ಏನು ಬೇಕಾದರೂ ಮಾಡಲು ಸಿದ್ಧನಾಗಿದ್ದೇನೆ. ಏನುಬೇಕಾದರೂ ಬಿಡಲು ಸಿದ್ಧನಾಗಿದ್ದೇನೆ – ಆದರೆ ಧರ್ಮವನ್ನು ಬಿಡಲೊಲ್ಲೆ. ಹದಿನಾಲ್ಕು ವರ್ಷಗಳು ನಾನು ಅರಣ್ಯವಾಸ ಮಾಡಿದಲ್ಲದೆ ಅಯೋಧ್ಯೆಗೆ ಹಿಂದಿರು ಗುವುದಿಲ್ಲ. ಅಲ್ಲಿಯವರೆಗೆ ನೀನು ರಾಜ್ಯಸೂತ್ರಗಳನ್ನು ನಿರ್ವಹಿಸ ಬೇಕು.

ಭರತ : ಇದೇ ನಿನ್ನ ಕೊನೆಯ ನಿರ್ಧಾರವೇ ?

ರಾಮು : ತಂದೆಯ ಮಾತಿಗೆ 'ತಥಾಸ್ತು' ಅಂದ ದಿನವೇ ನನ್ನ ನಿರ್ಧಾರ ವಾಗಿ ಹೋಯಿತು.

**ಭರತ :** ನಿನಗೆ ಬೇಡದ ರಾಜ್ಯವನ್ನು ಕಟ್ಟಿಕೊಂಡು ನಾನೇನು ಮಾಡಲಿ. ನಾನೂ ನಿನ್ನೊಡನೆ ಬರುತ್ತೇನೆ. ನೀನಿಲ್ಲದ ಅಯೋಧ್ಯೆಯಲ್ಲಿ ನಾನು ಹೇಗಿರಲಿ ? ಒಲ್ಲದ ಮನಸ್ಸಿನಿಂದ ರಾಜ್ಯವನ್ನು ಹೇಗೆ ಆಳಲಿ ? ನಿನ್ನ ವನವಾಸದ ಅವಧಿ ಮುಗಿಯುವವರೆಗೆ ಆರ್ಯ ಸುಮಂತ್ರನೇ ರಾಜ್ಯ ನಿರ್ವಹಿಸಿಕೊಂಡು ಹೋಗಲಿ.

**ರಾಮ :** ವನವಾಸ ನನಗೆ, ರಾಜ್ಯಭಾರ ನಿನಗೆ ಎಂದು ತಂದೆ ವಿಧಾಯಕ ಮಾಡಿದ್ದಾರೆ.

**ಭರತ :** ಸತ್ಯಪಥದಿಂದ ವಿಮುಖವಾದ ತಂದೆಯ ಮಾತನ್ನು ಕೇಳುವುದಕ್ಕೆ ನಾನು ಸಿದ್ಧವಾಗಿಲ್ಲ.

**ರಾಮ :** ಹಟಮಾಡಬೇಡ ಭರತ. ನನ್ನ ವನವಾಸಕ್ಕೊಂದು ನಿಮಿತ್ತವಿದೆ.

**ಭರತ :** ನಾನು ಮರಳಿ ಅಯೋಧ್ಯೆಗೆ ಏಕಾಂಗಿಯಾಗಿ ಹೋಗಲಾರೆ ಅಣ್ಣಾ.

**ರಾಮ :** (ವಶಿಷ್ಠರಿಗೆ) ಆರ್ಯಾ, ಈಗ ನಾನೇನು ಮಾಡಬೇಕು. ತಂದೆಯ ಮಾತನ್ನು ನಡೆಸಲಸಮರ್ಥರಾದ ಮಕ್ಕಳು ಅಯೋಧ್ಯಾ ಚಕ್ರಾಧಿಪತ್ಯವನ್ನು ಆಳಬಲ್ಲರೇ ? ನಮ್ಮ ಹಿತ, ನಮ್ಮ ಮೋಹ ನಮ್ಮ ಈಪ್ಸಿತಗಳಿಗೆ ಸತ್ಯವನ್ನು ಬಲಿಗೊಡುವುದು ಧರ್ಮವೇ ? ಸತ್ಯದ ಬಲವಿಲ್ಲದ ರಾಜನಿಂದ ರಾಜ್ಯಕ್ಕೆ ಕ್ಷೇಮವಾದೀತೇ ?

**ವಶಿಷ್ಠ :** ರಾಮಭದ್ರ, ಸತ್ಯದಂತೆ ನೀನು ಸ್ಥಿರ. ನಿನ್ನ ನಿಶ್ಚಲತೆಯನ್ನು ಅಲುಗಾಡಿಸಲು ಯಾರಿಂದ ಸಾಧ್ಯ ? ಭರತ, ರಾಮಭದ್ರನನ್ನು ಸತ್ಯಭ್ರಷ್ಟನನ್ನಾಗಿಸಬೇಡ. ಅವನ ಧರ್ಮದ ಬಲ ಕಳೆದುಕೊಂಡ ಜಗತ್ತು ನಾಶವಾದೀತು.

**ಭರತ :** ನಾನೇನು ಮಾಡಲಿ ಆಚಾರ್ಯ.

**ವಶಿಷ್ಠ :** ರಾಮಭದ್ರ ಹೇಳಿದಂತೆ ಮಾಡು.

**ಭರತ :** ಕೊನೆಗೂ ನನ್ನ ಪ್ರಾರ್ಥನೆಯನ್ನು ನಿರಾಕರಿಸುವೆಯಾ ಅಣ್ಣಾ.

**ರಾಮ :** ನಮ್ಮೆಲ್ಲರಿಗಿಂತ ಸತ್ಯ ದೊಡ್ಡದೆಂಬುದನ್ನು ಧರ್ಮಾತ್ಮನಾದ ನಿನಗೆ ನಾನು ಹೊಸದಾಗಿ ಹೇಳಬೇಕೇ ?

**ಭರತ :** ನಿನ್ನ ಆಜ್ಞೆಯನ್ನುಲ್ಲಂಘಿಸುವುದಿಲ್ಲ ಅಣ್ಣಾ. ಆದರೆ ಅಯೋಧ್ಯೆ ಇಂದಿಗೂ–ಎಂದಿಗೂ ನನ್ನ ರಾಜ್ಯವಲ್ಲ; ಅದು ನಿನ್ನ ರಾಜ್ಯ. ವನವಾಸದ ಅವಧಿ ಪೂರೈಸುವವರೆಗೆ ನಾನು ನಿನ್ನ ಪ್ರತಿನಿಧಿಯಾಗಿ ರಾಜ್ಯವನ್ನಾಳುತ್ತೇನೆ. ಅವಧಿ ಪೂರೈಸಿದ ಮಾರನೆಯ ದಿನವೇ ನಿನ್ನ ರಾಜ್ಯ

ವನ್ನು ನೀನು ಒಪ್ಪಿಸಿಕೊಳ್ಳಬೇಕು. ಅಂದು ನಿನ್ನ ಮುಖಚಂದ್ರನ ದರ್ಶನ ನನಗೆ ದೊರೆಯದಿದ್ದರೆ ನಾನು ಅಗ್ನಿಪ್ರವೇಶಮಾಡುತ್ತೇನೆ.

ರಾಮ : ಹಾಗೇ ಆಗಲಿ.

ಭರತ : ಪ್ರಭೂ, ನಿನ್ನ ಪಾದುಕೆಗಳನ್ನನುಗ್ರಹಿಸು. ನಿನ್ನ ಸೇವೆ ನನಗೆ ಅಲಭ್ಯವಾಯಿತು, ನಿನ್ನ ಪಾದುಕೆಗಳ ಸೇವೆಯಾದರೂ ಲಭಿಸಲಿ.

[ರಾಮ ಪಾದುಕೆಗಳನ್ನು ನೀಡುವನು. ಭರತ ಅವುಗಳನ್ನೆತ್ತಿಕೊಂಡು ಭಕ್ತಿಯಿಂದ ತಲೆಯಮೇಲೆ ಧರಿಸುವನು. ಎಲ್ಲರೂ ಹೊರಡಲನು ವಾಗುವರು. ರಾಮ ಭರತನನ್ನಪ್ಪಿ]

ರಾಮ : ಹೋಗಿ ಬಾ ನನ್ನ ಪ್ರಿಯಬಂಧು. ನಿನ್ನ ಭಕ್ತಿ, ಪ್ರೇಮ ಜಗನ್ಮಾನ್ಯವಾಗಲಿ.

ಲಕ್ಷ್ಮಣ : (ಧಾವಿಸಿಬಂದು ಭರತನ ಪಾದಗಳ ಮೇಲುರಳಿ) ಅಣ್ಣಾ. ನನ್ನ ತಪ್ಪನ್ನು ಮನ್ನಿಸು.

ಭರತ : ಲಕ್ಷ್ಮಣ. ರಾಮಭದ್ರನನ್ನೂ ಸೀತಾಮಾತೆಯನ್ನೂ ಎಚ್ಚರದಿಂದೆ ನೋಡಿಕೋ. (ಸೀತಾದೇವಿಗೆ) ತಾಯೀ, ನಿನ್ನ ಕನಿಷ್ಠ ಕುಮಾರ ಭರತ ಅಭಿನಂದಿಸುತ್ತಾನೆ.

ಸೀತೆ : ನಿನಗೆ ಮಂಗಳವಾಗಲಿ.

[ಭರತ, ಶತ್ರುಘ್ನ, ಲಕ್ಷ್ಮಣರು ಸೀತಾ ರಾಮರ ಪ್ರದಕ್ಷಿಣೆ ಬರುವರು. ಸೀತಾ ರಾಮ ಲಕ್ಷ್ಮಣರು ಗುರು ಹಿರಿಯರಿಗೆ ನಮಸ್ಕರಿಸುವರು. ಭರತ, ಆವನ ಪರಿವಾರ ಹೊರಡುವರು.]

## ೨೩

[ಅಯೋಧ್ಯೆಯ ರಾಜವೀಧಿಗಳಲ್ಲಿ ಭರತ ನಡೆದುಕೊಂಡು, 'ಶ್ರೀ ರಾಮ ಚಂದ್ರನ ಪಾದುಕೆಗಳಗನ್ನು ಹೊತ್ತು ಬರುವನು. ಜನ ಹೂವೆರಚುವರು, ಆರತಿ ಬೆಳಗುವರು, ಭರತನಿಗೆ ನಮಸ್ಕರಿಸುವರು. ಭರತನ ಹಿಂದೆಯೇ ಪ್ರಜಾ ಸಮೂಹವೂ ಅರಮನೆಯ ಬಳಿಗೈದುವುದು.]

## ೨೪

[ಅರಮನೆಯ ಸಿಂಹಾಸನ ತೊಟ್ಟಿ. ಸಮಸ್ತ ಪರಿವಾರ, ಪ್ರಜಾ ವರ್ಗದೆದು ರಿನಲ್ಲಿ ಭರತ ರಾಮನ ಪಾದುಕೆಗಳನ್ನು ಸಿಂಹಾಸನದ ಮೇಲಿರಿಸಿ]

ಭರತ : ಅಯೋಧ್ಯೆಯ ಪ್ರಿಯಪ್ರಜರೇ—ವನವಾಸ ಅವಧಿ ಪೂರೈಸುವುದರೊಳಗೆ ಅಯೋಧ್ಯೆಗೆ ಬರಲು ಶ್ರೀ ರಾಮಚಂದ್ರ ನಿರಾಕರಿಸಿದ.

ರಾಮರಾಜ್ಯವನ್ನು ಆಳಲು ನಾನು ಯಾವನು? ಅವನ್ನು ರಾಮ ಚಂದ್ರನ ಪಾದುಕೆಗಳೇ ಆಳುತ್ತವೆ. ನಿಮ್ಮ ಕಣ್ಮಣಿ ಅಯೋಧ್ಯೆಗೆ ಮರಳಿ ಬರುವವರೆಗೆ ನಾನು ಆತನ ಪ್ರತಿನಿಧಿಯಾಗಿ ರಾಜ್ಯ ಸೂತ್ರ ಗಳನ್ನು ವಹಿಸಿಕೊಳ್ಳಬೇಕಾಗಿದೆ. ಶ್ರೀ ರಾಮಚಂದ್ರನಿಗೆ ಜಯವಾಗ ಲೆನ್ನಿ–ಅವನ ಪವಿತ್ರನಾಮ ದಶದಿಕ್ಕುಗಳನ್ನು ವ್ಯಾಪಿಸಿ ಅಜ್ಞಾನ, ಅಂಧಕಾರ, ಅವಿದ್ಯೆಯ ಮೋಡವನ್ನು ಚದುರಿಸಲಿ.

"ರಘುಪತಿ ರಾಘವ ರಾಜಾರಾಮ್
ಪತಿತ ಪಾವನ ಸೀತಾರಾಮ್"

[ಎಲ್ಲರೂ ಭರತನೊಂದಿಗೆ ರಾಮಘೋಷ ಮಾಡುವರು. ಪ್ರಕೃತಿಯ ಎಲ್ಲೆಡೆಗಳಿಂದ ಅವರ ಘೋಷದ ಪ್ರತಿಧ್ವನಿ ಬರುವುದು]

ಶ್ರಾವಕರೆಲ್ಲರ ಕಣ್ಣುಗಳಲ್ಲಿಯೂ ನೀರು ಮಿಡಿದುನಿಂತಿತ್ತು. ಸರೋಜ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಭಾಗ್ಯಮ್ಮನ ಹೃದಯವನ್ನು ರಾಮಕಥೆ ಹೊಕ್ಕಿತ್ತು. ತನ್ನ ಮನಸ್ಸಿನ ಮೇಲೆ ಆದ ಪರಿಣಾಮವನ್ನು ಮರೆಮಾಜಲು ಅವಳು ಯತ್ನಿಸುತ್ತಿದ್ದಳು.

ಭೂಪೆನ್ ಬಾಬು, ಸುದರ್ಶನರ ಬಳಿ ಸಾರಿ

"ಭಾಷೆ ನನಗರ್ಥವಾಗಲಿಲ್ಲ. ಆದರೆ ಭಾವಗಳು ನನ್ನ ಹೃದಯವನ್ನು ಸೆರೆಹಿಡಿದವು"

ಎಂದರು. ರುದ್ರಪ್ಪ ಕಣ್ಣೊರಸಿಕೊಳ್ಳುತ್ತಾ

"ರಾಮನ ಕಥೆ ಇಂಗೇಂತ ನಂಗೆ ಗೊತ್ತೇ ಇರ್ಲಿಲ್ಲ ಸ್ವಾಮಿ. ಪಿಕ್ಚರ್ರೇ ಕಣ್ಮುಂದೆ ಆಡಿದಂಗಾಯ್ತು. ಭೋ ಸೊಗಸಾಗಿ ಬರ್ದಿದ್ದೀರಿ ಕವಿಗಳೇ."

"ಎಲ್ಲಾ ನಿಮ್ಮ ಅನುಗ್ರಹ."

ರುದ್ರಪ್ಪ ಯೋಚಿಸುತ್ತಾ

"ನಾನು ಓದ್ದೋನಲ್ಲ, ತಿಳಿವಳಿಕಸ್ಥನಲ್ಲ. ನಂಗೆ ಒಂದು ವಿಷಯ ಹೊಳೀತ್ತೈತೆ."

"ಹೇಳಿ ಸಾಹುಕಾರರೇ."

"ಶ್ರೀ ರಾಮಚಂದ್ರ ಅಯೋಧ್ಯೆಗೆ ಬಂದದ್ದನ್ನ ತೋರಿಸಬ್ಯಾಡ್ವಾ. ಭರತ ರಾಮನ ಪಾದುಕೆಗಳನ್ನು ಅವನಿಗೆ ಒಪ್ಪಿಸಿ, ಸಿಂಹಾಸನದ ಮ್ಯಾಕೆ ಕೂಡ್ರಿಸಿದರೆ ಚೆಂದಾಕಿರ್ತೈತೆ."

"ಹೌದು – ಸಾಹುಕಾರರೇ – ನಿಜವಾಗಿ ನಿಮ್ಮ ಸಲಹೆ ಚನ್ನಾಗಿದೆ. ಅದರಿಂದ ಭರತನ ಪಾತ್ರಕ್ಕೆ ಮತ್ತಷ್ಟು ಕಳೆ ಬರುತ್ತದೆ. ಅವಶ್ಯಕವಾಗಿ ನಿಮ್ಮ ಸಲಹೆಯಂತೆ ಕಥೆ ಮುಗಿಸುತ್ತೇನೆ."

ರುದ್ರಪ್ಪನ ಆನಂದಕ್ಕೆ ಪಾರವೇ ಇರಲಿಲ್ಲ. ಭಾಗ್ಯಮ್ಮನ ಕಡೆ ತಿರುಗಿ

ಓದಿ ಸ್ವಾಮಿಯೋರಿಗೆ ದಣಿವಾಗೈತೆ. ಅಷ್ಟು ಕಾಪಿ ಕೊಡಾಕಿಲ್ವಾ

ರೇವಣ್ಣ ಸಿದ್ಧಮಾಡಿಟ್ಟಿದ ಕಾಫಿಯನ್ನು ತಂದು ಎಲ್ಲರಿಗೂ ಕೊಟ್ಟ. ರುದ್ರಪ್ಪ

"ಗಂಟೆ ಮೂರು ಆಯ್ತೇನೊ. ನಿಮಗೆ ತುಂಬ ಒತ್ತಾಯಿತು."

"ಚಿಂತೆಯಿಲ್ಲ. ಕೆಲಸ ಮುಖ್ಯ"

ಎಂದು ಸುದರ್ಶನ ಎದ್ದರು. ಅವರೊಂದಿಗೆ ಭೂಪೇನ್ ಬಾಬು, ಚಿನ್ನಪ್ಪ, ಶಿವಾನಂದ ಹೊರಟರು. ಸಾಹುಕಾರರು ಭಾಗ್ಯಮ್ಮನ ಮನೆಯಲ್ಲಿಯೇ ಉಳಿದುಕೊಂಡರು.

## ೧೭

ಸುದರ್ಶನರ ಚಿತ್ರ – ನಾಟಕ ಅಚ್ಚುಗಟ್ಟಾಗಿ ಎಲ್ಲರ ಮೆಚ್ಚುಗೆಗೂ ಪಾತ್ರವಾಯಿತು. ಚಿತ್ರರಚನೆಯಲ್ಲಿ ಮಹಾದೇವಯ್ಯನಿಗೆ ಪ್ರಧಾನಸ್ಥಾನ ದೊರಕಿಸಲು ತಾನು ಮಾಡಿದ ಪ್ರಯತ್ನ ವಿಫಲವಾದುದಕ್ಕೆ ಮುರಿಗೆಯ್ಯ ಕನಲಿದ್ದ. ಸುದರ್ಶನರಿಗೆ ನಾಲ್ಕು ಸಾವಿರ, ಮಹಾದೇವನಿಗೆ ಒಂದು ಸಾವಿರ ರೂಪಾಯಿ ಗೊತ್ತಾದ ವಿಷಯ ಕೇಳಿದ ಮೇಲಂತೂ ಮುರಿಗೆಯ್ಯ ತೀರ ಕಂಗೆಟ್ಟುಹೋದ. ಭಾಗ್ಯಮ್ಮ, ಸರೋಜ ಇಬ್ಬರೂ ಸುದರ್ಶನರ ಸ್ತುತಿಯಲ್ಲಿ ತೊಡಗಿದ್ದುದರಿಂದ ಅಲ್ಲಿಯೂ ತನ್ನ ಬೇಳೆ ಬೇಯದಿದ್ದುದನ್ನು ಕಂಡು ಅವನಿಗೆ ಮತ್ತಷ್ಟು ಕೋಪ ಬಂದಿತು. ಆದರೆ ಮುರಿಗೆಯ್ಯನಿಗೆ ಸಂತೋಷವಾಗಿದೆ, ಸಮಾಧಾನವಾಗಿದೆ; ಕೋಪ ಬಂದಿದೆ, ತೃಪ್ತಿಯಾಗಿದೆ ಎಂದು ತಿಳಿಯಲು ಯಾರಿಗೂ ಸಾಧ್ಯವಿರಲಿಲ್ಲ. ಎಂಥ ಅಡ್ಡಿ ಆತಂಕ, ಕಷ್ಟ ಕಾರ್ಪಣ್ಯ ಬಂದರೂ ಅವನ ಮುಖದ ಮೇಲೆ ದೇಶಾವಾರದ ನಗೆ ಕಡಿಮೆಯಾಗುತ್ತಿರಲಿಲ್ಲ. ಏನಾದರೂ ಮಾಡಿ ಸುದರ್ಶನರು ಮದರಾಸಿಗೆ ಹೊರಡದಂತೆ ಮಾಡಿಬಿಟ್ಟರೆ, ಅಲ್ಲಿನ ಕೆಲಸದ ಜವಾಬ್ದಾರಿ ಮಹಾದೇವಯ್ಯನ ಮೇಲೆ ಅನಿವಾರ್ಯವಾಗಿ ಬೀಳುವುದೆಂದು ಮುರಿಗೆಯ್ಯ ಲೆಕ್ಕ ಹಾಕಿಕೊಂಡು ಚಿನ್ನಪ್ಪನಲ್ಲಿ ವಿಷಯ ಪ್ರಸ್ತಾಪಿಸಿದ.

"ಮದರಾಸಿಗೆ ಎಷ್ಟು ಜನ ಹೊರಡೋದು ಚಿನ್ನಪ್ಪ ?"

"ನಿನಗೆಲ್ಲಾ ಗೊತ್ತೇ ಇದೆಯಲ್ಲಪ್ಪಾ. ಚಿತ್ರಕ್ಕೆ ಸಂಬಂಧಪಟ್ಟವರೆಲ್ಲಾ ಹೊರಡಬೇಕಾಗುತ್ತದೆ."

"ಸುದರ್ಶನರು"

"ಅವರು ಹೊರಡದಿದ್ದರಾಗುತ್ತದೆಯೇ ? ಅವರ ನಾಟಕ ಅವರೇ ಪಾಠ ಮಾಡಿಸಬೇಕು. ನಿನ್ನ ಮನಸ್ಸಿನಲ್ಲೇನಿದೆ ಸ್ಪಷ್ಟವಾಗಿ ಹೇಳು."

"ಇನ್ನೇನೂ ಇಲ್ಲ. ಸುಮ್ಮೆ ಜನಕ್ಕೆ ಜನ ಯಾಕೇಂತ ಯೋಚಿಸ್ತಿದ್ದೆ. ರೇರ್ಷಕಾಲ. ದೊಂಬಿ ಕಡಿಮೆ ಮಾಡ್ಕೊಂಡ್ರೆ ನಮ್ಗೇ ಒಳ್ಳೇದಲ್ವಾ ?"

"ನೀನು ಹೇಳೋದು ನಿಜ. ಆದರೇನು ಮಾಡುವುದಕ್ಕಾಗುತ್ತದೆ. ಕೈಗೊಂಡಿರುವುದು ದೊಡ್ಡ ಕೆಲಸ. ಇಂಥ ಸಣ್ಣ ವಿಷಯಗಳಲ್ಲಿ ನಾವು ಉಳಿತಾಯ ಮಾಡುವ ಪ್ರಯತ್ನ ಮಾಡಿದರೆ ದೊಡ್ಡ ಬಾಬುಗಳಲ್ಲಿ ಕೊಚ್ಚಿಕೊಂಡು ಹೋಗುತ್ತದೆ."

"ನಾಟಕ ಬರ್ಕೊಟ್ಟಾದ ಮೇಲೆ ಇನ್ನೇನಪ್ಪಾ ಸುದರ್ಶನರ ಕೆಲಸ."

"ಹಾಗಲ್ಲ ಮುರಿಗೆಯ್ಯ. ನಾಟಕ ಎಲ್ಲರಿಗೂ ಪಾಠ ಮಾಡಿಸ್ಬೇಕು. ನಮ್ಮ ಡೈರೆಕ್ಟರಿಗೆ ಕನ್ನಡದ ಗಂಧ ಗೊತ್ತಿಲ್ಲ. ಅವರಿಗೆ ತಿಳಿಯುವ ಹಾಗೆ ಎಲ್ಲಾ ಹೇಳಬೇಕು.

"ಮಾದೇವ ಈ ಕೆಲಸ ಮಾಡಲಾರನೇನೋ ? ಜೀವನ ಎಲ್ಲಾ ಅವನು ನಾಟಕದಲ್ಲೇ ತೇದವ್ನೆ."

ನಾಟಕಕ್ಕೂ ಸಿನಿಮಾಕ್ಕೂ ಬಹಳ ವ್ಯತ್ಯಾಸವಿದೆ ಮುರಿಗೆಯ್ಯ."

"ಏನೋಪ್ಪ – ಇದು ಸ್ವಲ್ಪವೂ ಚೆಂದಾಕಿಲ್ಲ. ಕೈಯಲ್ಲಿ ನಮ್ಮವರನ್ನ ಇಟ್ಕೊಂಡು ಹಾರವರನ್ನ ಮುಂದಕ್ಕೆ ಬಿಡೋದು ನಮ್ಗೇ ಒಳ್ಳೇದಲ್ಲ. ಹಣ ಹಾಕೋವ್ರು ನಾವು – ದುಡಿಯೋರು ನಾವು – ನಾಳೆ ನಷ್ಟ ಆದರೆ ಅದರ ಕಷ್ಟ ಅನುಭವಿಸೋರು ನಾವು. ಪಿಕ್ಚರ್ ಚೆನ್ನಾದರೆ ಕೀರ್ತಿ ತೊಗೊಳ್ಳೋರು ಹಾರವರು. ನೀನಿದ್ಕೊಂಡೂ ಇಂಗಾಗತ್ತೈತೆ ಎಂತಾ ನಾನು ಕನಸಿನಲ್ಲೂ ತಿಳ್ಕೊಂಡಿರಲಿಲ್ಲ ಚಿನ್ನಪ್ಪ."

"ಮಾದೇವಂಗೆ ನಾನು ದಾರಿ ಮಾಡ್ತೀನಿ ಸುಮ್ಮನಿರು. ಅವನಿಗೆ ನಾಲ್ಕು ಕಾಸು ಜಾಸ್ತಿ ಬರೋ ಹಾಗೆ ಮಾಡೋ ಭಾರ ನನಗಿರಲಿ."

"ಏನು ಮಾಡ್ತೀಯೋ ಮಾಡಪ್ಪ. ನಮ್ಮೋರು ತಮ್ಮೋರು ಅನ್ನೋ ಅಭಿಮಾನ ನೀನು ಬಿಡದಿದ್ರೆ ಸಾಕು."

"ಅದೆಲ್ಲಿ ಹೋಗುತ್ತೆ ಮುರಿಗೆಯ್ಯ. ಎಂದಿದ್ರೂ ನಾವು ಒಂದೇ ಅಲ್ವಾ."
ಎಂದು ಸಮಾಧಾನ ಹೇಳಿದ.

ಮುರುಗೆಯ್ಯ ಇಷ್ಟರಿಂದಲೇ ಸಮಾಧಾನಗೊಂಡು ಕೈ ಕಟ್ಟಿಕೂಡಲಿಲ್ಲ. ಭಾಗ್ಯಮ್ಮನನ್ನು ಪುಸಲಾಯಿಸಿ ನೋಡಿದ. ಸುದರ್ಶನರ 'ಚಿತ್ರ – ನಾಟಕ' ಕೇಳಿದ್ದ ಭಾಗ್ಯಮ್ಮ ಮುರಿಗೆಯ್ಯನಿಗೆ ಪ್ರೋತ್ಸಾಹಕರವಾದ ಉತ್ತರ ಕೊಡ ಲಿಲ್ಲ. ಆದರೆ ಚಿತ್ರ ಸಂಬಂಧವಾದ ಕೆಲಸ ಕಾರ್ಯಗಳು ನಡೆಯುವಾಗ ಮಹಾದೇವಯ್ಯ ತಮ್ಮವನಾಗಿ ಅಲ್ಲಿರಬೇಕೆಂದು ಸಾಹುಕಾರರು ಅಪ್ಪಣೆ ಮಾಡಿದರು.

ಭೂಪೆನ್‌ಬಾಬು, ಸುದರ್ಶನರು 'ಚಿತ್ರ–ನಾಟಕ'ಕ್ಕೆ ಸಾಣೆ ಹಿಡಿಯುವ ಕೆಲಸವನ್ನಾರಂಭಿಸಿದರು. ಅವಕಾಶ ಸಿಕ್ಕಿದಾಗಲೆಲ್ಲಾ ಚಿನ್ನಪ್ಪ, ಸಾಹು ಕಾರರು ಅವರ ಜತೆ ಕುಳಿತು ಅವರ ವಾದ ವಿವಾದಗಳನ್ನಾಲಿಸುತ್ತಿದ್ದರು. ಮಹಾದೇವಯ್ಯ ಅಲ್ಲಿಯೇ ಭದ್ರವಾಗಿ ತಳವೂರಿದ್ದ. ಅವನಿಂದ ಚಿತ್ರ – ನಾಟಕಕ್ಕೆ ಯಾವ ಸಹಾಯವಾಗದಿದ್ದರೂ ಸಾಕಷ್ಟು ತೊಂದರೆಯಾಗು ತ್ತಿತ್ತು. ಯಾವದಾದರೂ ವಿಷಯದ ಚರ್ಚೆ ಗಂಭೀರವಾಗಿ ಹೊರಟಿದ್ದಾಗ ಮಹಾದೇವಯ್ಯ ತನ್ನ ಅವಿವೇಕದ ಅಭಿಪ್ರಾಯಗಳನ್ನು ಮುಂದೂಡುತ್ತಿದ್ದ. ಎಲ್ಲರೂ ಅವನ ಮೇಲೆ ಹುಲಿಗಳ ಹಾಗೆ ಬೀಳುತ್ತಿದ್ದರು. ಅವರ ಭರ್ತ್ಸನೆ ಯಾಗಲಿ, ಉಪೇಕ್ಷೆಯಾಗಲಿ ಮಹಾದೇವಯ್ಯನ ಮನಸ್ಸಿನ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುತ್ತಿರಲಿಲ್ಲ. 'ಈ ಬೀದಿಯಲ್ಲಿ ಮಹಾ ದೇವನ್ನ ಉಗುಳಿದರೆ ಪಕ್ಕದ ಬೀದಿಯಲ್ಲಿ ಅವನು ಹೊಸ ಮನುಷ್ಯ' ಎಂದು ಚಿನ್ನಪ್ಪ ಆಗಾಗ್ಗೆ ಹೇಳುತ್ತಿದ್ದ.

ಚಿತ್ರ–ನಾಟಕ ಅರ್ಧ ಸಿದ್ಧವಾಗುವುದರ ವೇಳೆಗೆ ಮದರಾಸಿನಿಂದ ಕಾಗದ ಬಂತು. ದಶರಥನ ಅಂತಃಪುರದ ಸೆಟ್ಟು ಸಿದ್ಧವಾಗಿರುವುದಾಗಿ ರಾಮಾನುಜಂ ತಿಳಿಸಿದ್ದರು.

ಚಿನ್ನಪ್ಪನ ಕಛೇರಿಯಲ್ಲಿ ಮಂತ್ರಾಲೋಚನೆ ಸಭೆ ಸೇರಿತು. ಸಾಹು ಕಾರರು ಹುಬ್ಬು ಗಂಟುಹಾಕಿಕೊಂಡೇ ಬಂದು ಕುಳಿತರು. ಮುರಿಗೆಯ್ಯ ಏನೋ ಅನರ್ಥಮಾಡಿರಬಹುದೆಂದು ಚಿನ್ನಪ್ಪ ಹೆದರಿದ.

ಸಾಹುಕಾರರು ದಪ್ಪ ದನಿಯಲ್ಲಿ

"ಮದರಾಸಿನಿಂದ ಬಂದ ಟೆಲಿಗ್ರಾಂ ವಿಷಯ ಎಲ್ಲಾರಿಗೂ ಹೇಳಿ ದೆಯಾ ಚಿನ್ನಪ್ಪ"

ಎಂದು ಕೇಳಿದರು. 'ಹೇಳಿದೆ ಸ್ವಾಮಿ' ಎಂದಷ್ಟೇ ಚಿನ್ನ ಉತ್ತರಿಸಿದ. ಸಾಹುಕಾರರು ತಕ್ಷಣ ಭೂಪೆನ್ ಬಾಬುಗಳ ಕಡೆ ತಿರುಗಿ

"ಕೆಲಸ ಯಾವಾಗ ಷುರುಮಾಡ್ತೀರಿ ಸ್ವಾಮಿ" ಎಂದು ಕೇಳಿದರು.

"ಷುರುಮಾಡಿಯೇ ಇದ್ದೇವಲ್ಲಾ ಸಾಹುಕಾರಜೀ. ಚಿತ್ರ–ನಾಟಕ ಅಚ್ಚುಗಟ್ಟುಮಾಡುವುದಕ್ಕೆ ನಾನೂ ಸುದರ್ಶನರೂ ಹಗಲಿರುಳೂ ದುಡಿಯುತ್ತಿದ್ದೇವೆ."

"ಹೀಗೇ ಕಾಲ ತಳ್ಳಿಬಿಟ್ಟರೆ ನಾವು ಸೆಟ್ಟುಗಳಿಗೆ ಹೋಗುವುದು ಯಾವಾಗ? ಅಂತಃಪುರದ ಸೆಟ್ಟು ತಯಾರಾಗಿದೆ ಎಂದು ಮದರಾಸಿನಿಂದ ಟೆಲಿಗ್ರಾಂ ಬಂದಿದೆ. ನಾವು ಕೂಡಲೆ ಕೆಲಸ ಆರಂಭಿಸದಿದ್ದರೆ ಸ್ಟೂಡಿಯೋದವರು ನಮ್ಮ ತಲೇ ಮ್ಯಾಕೆ ಬಾಡಿಗೆ ಹೇರ್ತಾ ಬತ್ತಾರೆ."

"ನಾನು ನಾಳೆಯೇ ಷೂಟಿಂಗ್ ಇಟ್ಟುಕೊಳ್ಳುವುದಕ್ಕೆ ಸಿದ್ಧನಾಗಿದ್ದೇನೆ. ನಟನಟಿಯರ ವರ್ಗವೇ ಸಿದ್ಧವಾಗಿಲ್ಲವಲ್ಲ."

"ಎಲ್ಲರಿಗೂ ಮದರಾಸಿಗೆ ಬರುವಂತೆ ತಿಳಿಸಿದ್ದೇನೆ. ಇವತ್ತೇ ಟೆಲಿಗ್ರಾಂ ಕಳಿಸುತ್ತೇನೆ. ನೀವು ಮದರಾಸಿಗೆ ಹೋಗಿ ಅಲ್ಲಿ ಕುಳಿತುಕೊಂಡು ಮುಂದಿನ ಕೆಲಸ ನೋಡಿಕೊಳ್ಳಿ. ಸುದರ್ಶನರನ್ನೂ ಜತೆಯಲ್ಲಿ ಕರೆದುಕೊಂಡು ಹೋಗಿ."

"ಆಗಬಹುದು."

"ಚಿನ್ನಪ್ಪ–ನೀನೂ ಜತೆಯಲ್ಲಿ ಹೊರಟುಬಿಡು. ಕಂಪನಿ ಮನೆ ವ್ಯವಸ್ಥೆ, ನಮ್ಮ ಮನೆ ವ್ಯವಸ್ಥೆ ಮಾಡಿ ವೈರ್ ಮಾಡು. ನಾವೂ ಹೊರಟು ಬರುತ್ತೇವೆ. ಚಕ್ರವರ್ತಿ, ಸಿದ್ದವೀರಪ್ಪ, ಜೀವಣ್ಣರಾಯ, ಶಾಮಲಾಬಾಯಿ ಎಲ್ಲಾರಿಗೂ ಇವತ್ತೇ ವೈರ್ ಮಾಡು. ನಿನ್ನ ಜತೆ ಯಾರು ಯಾರು ಬರುತ್ತಾರೋ ಎಲ್ಲರನ್ನೂ ಕರೆದುಕೊಂಡು ಹೋಗು–ಶಿವಾನಂದರು, ಮಹಂತಯ್ಯ, ಮಹಾದೇವಯ್ಯ, ಅಡಿಗೆಯವರು, ಆಳುಗಳು. ವ್ಯಾನ್ ಏನಾಯಿತು?"

"ಸಿದ್ಧವಾಗಿದೆಯೆಂದು ವರ್ಕ್‌ಷಾಪಿನವನು ಹೇಳಿದ."

"ವ್ಯಾನ್ ಸಿದ್ಧವಾಗಿದ್ದರೆ ಎಲ್ಲರನ್ನೂ ಅದರಲ್ಲಿಯೇ ಕರೆದುಕೊಂಡು ಹೋಗು."

"ಡೈರೆಕ್ಟರು, ಸುದರ್ಶನರು, ಶಿವಾನಂದರು."

"ಅವರು ಮೂವರೂ ಬೇಕಾದರೆ ರೈಲಿನಲ್ಲಿ ಹೊರಡಲಿ. ಉಳಿದವರನ್ನು ವ್ಯಾನಿನಲ್ಲಿ ಕರೆದುಕೊಂಡು ಹೋಗು."

ಬುಧವಾರ ಬೆಳಿಗ್ಗೆ ಚಿನ್ನಪ್ಪ ವ್ಯಾನಿನಲ್ಲಿ ಎಲ್ಲರನ್ನೂ ಕರೆದುಕೊಂಡು ಹೋಗತಕ್ಕದ್ದೆಂದೂ, ಅದೇ ರಾತ್ರಿ ಡೈರೆಕ್ಟರು, ಸುದರ್ಶನರು, ಶಿವಾನಂದ ರೈಲಿನಲ್ಲಿ ಹೊರಟುಬರುವುದೆಂದೂ ನಿಶ್ಚಯವಾಯಿತು.

ಚಿನ್ನಪ್ಪ ಪೂರ್ವಭಾವಿಯಾಗಿ ಮಾಡಬೇಕಾದ ಕೆಲಸಗಳನ್ನೆಲ್ಲಾ ಮುಗಿಸಿ, ಮದರಾಸಿಗೆ ಬೇಕಾದ ಪಾತ್ರೆ ಪದಾರ್ಥಗಳನ್ನು ಹೊಂದಿಸಿ ಕೊಂಡು, ಅಡಿಗೆಗೆ ನಾರಾಯಣ, ಸುಬ್ಬ, ಆಳುಗೆಲಸಕ್ಕೆ ಕಾಳ ಇವರನ್ನೂ ಮಹಂತಯ್ಯ, ಮಹಾದೇವಯ್ಯನನ್ನೂ ಜತೆಗೆ ಕರೆದುಕೊಂಡು ಹೊರಟು ಬಿಟ್ಟ. ಹೊರಡುವ ಮುನ್ನ ನಟರಿಗೆ ತಂತೀ ಕಳುಹಿಸಿ ಮದರಾಸಿಗೆ ಬರ ಹೇಳಿದ. ಮೈಸೂರಿಗೆ ಪದ್ಮರಾಜೂಗೂ ಮುಂಬಯಿಗೆ ಶಾಮಲಾ ಬಾಯಿಗೂ ತಂತೀ ವರ್ತಮಾನ ಹೋಯಿತು.

ಚಿನ್ನಪ್ಪ ಹೊರಟುದನ್ನು ಕಂಡ ಮೇಲೆ ಸಾಹುಕಾರರಿಗೆ ಸ್ವಲ್ಪ ಸಮಾ ಧಾನವಾಯಿತು. ತಾವೇ ಖುದ್ದು ನಿಂತುಕೊಂಡು ಅದೇ ರಾತ್ರಿ ಡೈರೆಕ್ಟ ರನ್ನೂ, ಸುದರ್ಶನರನ್ನೂ, ಶಿವಾನಂದರನ್ನೂ, ಹೊರಡಿಸಿದರು.

ಬೆಂಗಳೂರು ಬಿಟ್ಟು ಹೊರಟ ಸಂಜೆಯೇ ಮದರಾಸು ತಲಪಿದ ಚಿನ್ನಪ್ಪ ಕಂಪೆನಿ ಮನೆಯಲ್ಲಿ ಸಾಮಾನು ಇಳುಹಿ ಅಂದು ಹೋಟೇಲಿನಿಂದ ಊಟ ತರಿಸಿದ. ಮಾರನೆಯ ಬೆಳಿಗ್ಗೆ ಸ್ಟೇಷನ್ನಿಗೆ ಹೋಗಿ ಡೈರೆಕ್ಟರನ್ನೂ ಅವರ ಜತೆ ಬಂದವರನ್ನೂ ಕಂಪೆನಿ ಮನೆಗೇ ಕರೆತಂದ.

ಕಂಪೆನಿಗಾಗಿ ಗೊತ್ತುಮಾಡಿದ್ದ ಮನೆಗೆ ವಿಶಾಲವಾದ ಕಾಂಪೌಂಡು ಇತ್ತು. ಮನೆ ತುಂಬ ಹಳೆಯದಾದರೂ ವಿಶಾಲವಾಗಿತ್ತು. ಮನೆ ಪ್ರವೇಶ ಮಾಡಿದ ಕೂಡಲೆ ವೆರಾಂಡ, ವೆರಾಂಡದ ಮುಂದೆ ದೊಡ್ಡ ತೊಟ್ಟಿ, ವೆರಾಂಡದ ಮತ್ತು ತೊಟ್ಟಿಯ ಆಚೆ ಈಚೆ ಕಡೆ ಮೂರು ಮೂರು ರೂಮು ಗಳು. ಮನೆಯ ಹಿಂದುಗಡೆ ಮತ್ತೊಂದು ತೊಟ್ಟಿ. ಆ ತೊಟ್ಟಿಗೆ ಹೊಂದಿ ಕೊಂಡಂತೆ ಅಡಿಗೆಯಮನೆ, ಬಚ್ಚಲು ಮನೆ, ಉಗ್ರಾಣ.

ಮಹಡಿಯ ಮೇಲೆ ತೊಟ್ಟಿಯ ಸಮಕ್ಕೆ ಒಂದು ತೊಟ್ಟಿ ಆಚೆ ಈಚೆ ಒಂದೊಂದು ರೂಮು.

ಡೈರೆಕ್ಟರು, ಸುದರ್ಶನರು ಮಹಡಿಯ ಮೇಲೆ ಇರುವುದೆಂದೂ, ಉಳಿದ ನಟವರ್ಗ, ಸಂಗೀತ ಗೋಷ್ಠಿಯವರು ಕೆಳಗಡೆ ವಾಸಮಾಡುವುದೆಂದು ಚಿನ್ನಪ್ಪ ನಿರ್ಧರಿಸಿದ್ದ.

ವೆರಾಂಡದಲ್ಲಿಯೇ ಮಹಡಿಯನ್ನೇರಿ ಹೋಗಲು ಮೆಟ್ಟಲುಗಳಿದ್ದವು. ಅಡಿಗೆಯ ಮನೆಯ ಮುಂದಿದ್ದ ವೆರಾಂಡದಲ್ಲಿಯೂ ಮೆಟ್ಟಲುಗಳಿದ್ದವು.

ವೆರಾಂಡದ ಒಂದು ಪಕ್ಕದ ಕೊಠಡಿಯನ್ನು ಚಿನ್ನಪ್ಪ ತನ್ನ ಆಫೀಸಿಗೆಂದು ಮೀಸಲಾಗಿರಿಸಿಕೊಂಡು ಉಳಿದುವನ್ನು ಇತರರಿಗೆ ಹಂಚಿದ.

ಮಹಂತಯ್ಯ, ಮಹಾದೇವಯ್ಯ ವೆರಾಂಡದ ಇನ್ನೊಂದು ಬದಿಗಿದ್ದ ರೂಮನ್ನು ಆಯ್ದುಕೊಂಡರು. ನಾರಾಯಣ, ಸುಬ್ಬ ಅಡಿಗೆಯ ಮನೆಯ ಸರ್ವಾಧಿಕಾರ ವಹಿಸಿಕೊಂಡರು.

ಮಹಡಿಯ ಮೇಲೆ ತಮಗೆ ಮೀಸಲಾಗಿದ್ದ ರೂಮನ್ನು ಸುದರ್ಶನರು ಒಪ್ಪಿಕೊಂಡರು. ಭೂಪೆನ್‌ಬಾಬು ತಾವು ಕಂಪನಿ ಮನೆಯಲ್ಲಿರಲು ಒಪ್ಪದೆ 'ಎಂಬಾಸಿ ಹೋಟಿಲ್' ನಲ್ಲಿ ರೂಮು ಮಾಡಿಕೊಂಡು ನಿಂತರು. ಅವರಿಗೆ ಮೀಸಲಾಗಿರಿಸಿದ್ದ ಮಹಡಿಯ ಇನ್ನೊಂದು ರೂಮು ಶಿವಾನಂದನಿಗೆ ಸಿಕ್ಕಿತು.

ಚಿನ್ನಪ್ಪ ರಾಮಾನುಜಂ ಅವರ ಸಹಾಯ ತೆಗೆದುಕೊಂಡು ಮೊದಲು ರೇಷನ್ ಕಾರ್ಡುಗಳನ್ನು ಮಾಡಿಸಿಕೊಂಡು ಬಂದ. ಭೂಪೆನ್‌ಬಾಬು ಸ್ಟೂಡಿಯೋದವರು ಮಾಡಿದ್ದ ಪೂರ್ವಸಿದ್ಧತೆ ನೋಡಿಕೊಂಡು ಷೂಟಿಂಗ್ ಆರಂಭಿಸಲು ಒಂದು ವಾರ ಕಾಲಾವಧಿ ಕೇಳಿಕೊಂಡು ಬಂದರು.

ನಟವರ್ಗದವರು ಒಬ್ಬೊಬ್ಬರಾಗಿ ಇಳಿಯಲಾರಂಭಿಸಿದರು. ಪದ್ಮರಾಜು, ಸಿದ್ದವೀರಪ್ಪ, ಚಕ್ರವರ್ತಿ, ಜೀವಣ್ಣರಾಯ ಬಂದರು. ಪದ್ಮರಾಜು, ಸಿದ್ದವೀರಪ್ಪ ಒಂದು ರೂಮನ್ನೂ, ಚಕ್ರವರ್ತಿ, ಜೀವಣ್ಣರಾಯ ಒಂದು ರೂಮನ್ನೂ ಆಕ್ರಮಿಸಿಕೊಂಡರು.

ಕಂಪನಿ ಮನೆಯಲ್ಲಿ 'ದಾಸೋಹ' ಆರಂಭವಾದ ಕೂಡಲೆ ಸತ್ಯನಾಥನ್, ವರದರಾಜಯ್ಯಂಗಾರ್ ಬಂದು ಒಂದು ರೂಮಿನಲ್ಲಿ ನೆಲಸಿದರು. ಅವರ ವಾದ್ಯಮೇಳದವರು ಇನ್ನೊಂದು ರೂಮು, ತೊಟ್ಟಿಯಲ್ಲಿ ನಿಂತರು.

ನಟವರ್ಗವೆಲ್ಲಾ ಸೇರಿದಕೂಡಲೆ ಸುದರ್ಶನರು ಅವರವರ ಪಾರ್ಟು ಅವರವರಿಗೆ ಬರೆಸಿ 'ರಿಹರ್ಸಲ್' ಆರಂಭಮಾಡಿದರು. ಬೆಳಿಗ್ಗೆ ಕಾಫಿ, ತಿಂಡಿಯಾದ ಕೂಡಲೆ ಹನ್ನೆರಡು ಗಂಟೆಯುವರೆಗೆ ರಿಹರ್ಸಲ್, ಮಧ್ಯಾಹ್ನಾನಂತರ ಎರಡು ಗಂಟೆಗೆ ಸುದರ್ಶನರು ಭೂಪೆನ್‌ಬಾಬುಗಳ ಜತೆಗೆ ಸ್ಟೂಡಿಯೋಕ್ಕೆ ಹೋಗಿ ತಂತ್ರಜ್ಞರೊಂದಿಗೆ ಚರ್ಚೆಮಾಡಿ, ಸಂಜೆ ಬಾಬುಗಳ ಜತೆ 'ಎಂಬಾಸಿ ಹೊಟೇಲಿ' ನಲ್ಲಿ ಚಿತ್ರ–ನಾಟಕದ ಪಾಠ ಅವರಿಗೆ ಹೇಳಿ ೯-೧೦ ಗಂಟೆಗೆ ಕಂಪೆನಿ ಮನೆಗೆ ಬಂದು ಊಟಮಾಡಿ ಮಲಗುತ್ತಿದ್ದರು.

ಕಂಪೆನಿ ಮನೆಯ ವ್ಯವಸ್ಥೆ ಮುಗಿದ ಮೇಲೆ ಸ್ಟೂಡಿಯೋ ಆವರಣದಲ್ಲಿದ್ದ ಮನೆಯ ವ್ಯವಸ್ಥೆ, ಶಾಮಲಾಬಾಯಿಗೆ ಗೊತ್ತುಮಾಡಿದ್ದ ಮನೆಯ ವ್ಯವಸ್ಥೆಯ ಕಡೆ ಚಿನ್ನಪ್ಪ ಲಕ್ಷ್ಯಕೊಡಬೇಕಾಯಿತು.

ಸ್ಟೂಡಿಯೋ ಮನೆಗೆ ಬೇಕಾಗುವ ಸಾಮಾನು, ಫರ್ನೀಚರು ಎಲ್ಲಾ ಹೊಂದಿಸಿ ಸಾಹುಕಾರರಿಗೆ ಪರಿವಾರ ಸಮೇತ ಬರಲು ಚಿನ್ನಪ್ಪ ವೈರ್‌ಮಾಡಿದ.

ಸಾಹುಕಾರರು ಹೊರಡುವ ಸಿದ್ಧತೆಮಾಡಿಕೊಂಡು, ಚಿನ್ನಪ್ಪನ ವೈರಿಗಾಗಿ ಕಾದಿದ್ದರು. ಸಾಹುಕಾರರ ಜತೆಗೆ ಸರೋಜ, ಭಾಗ್ಯಮ್ಮ, ಪಾರ್ವತಿ, ಚೂಡಾಮಣಿ, ಕಾಂತಿಮತಿ ಹೊರಡಬೇಕಾಗಿತ್ತು. ಮುರಿಗೆಯ್ಯನ ಜತೆ ಮಾಡಿ ಪಾರ್ವತಿ, ಚೂಡಾಮಣಿ, ಕಾಂತಿಮತಿಯರನ್ನು ರೈಲಿನಲ್ಲಿ ಕಳುಹಿಸಿಕೊಟ್ಟು ಸಾಹುಕಾರರು ಸರೋಜ, ಭಾಗ್ಯಮ್ಮ ಅಡಿಗೆ ರೇವಣ್ಣನನ್ನು ಕರೆದುಕೊಂಡು ಕಾರಿನಲ್ಲಿ ಹೊರಟರು.

ಧಣಿಗಳ ಆಗಮನವನ್ನು ನಿರೀಕ್ಷಿಸಿಕೊಂಡು ಚಿನ್ನಪ್ಪ, ಸುದರ್ಶನರು, ಭೂಪೆನ್‌ಬಾಬು, ನಟವರ್ಗದವರು ಎಲ್ಲರೂ ಸ್ಟೂಡಿಯೋ ಮನೆಯ ಬಳಿಯಲ್ಲಿ ಕಾದಿದ್ದರು. ನಾರಾಯಣ ಒಲೆಹೊತ್ತಿಸಿ ಬಿಸಿಬಿಸಿ ಉಪ್ಪಿಟ್ಟು ಕಾಫಿ ಸಿದ್ಧಮಾಡಿಟ್ಟಿದ್ದ. ಸ್ನಾನಕ್ಕೆ ಬಿಸಿನೀರೂ ಸಿದ್ಧವಾಗಿತ್ತು.

ನಾಲ್ಕು ಗಂಟೆಗೆ ಮದರಾಸ್ ಮುಟ್ಟುವ ಪ್ಯಾಸೆಂಜರ್ ಗಾಡಿಯಲ್ಲಿ ಮುರಿಗೆಯ್ಯ ಪರಿವಾರದೊಂದಿಗೆ ಬಂದಿಳಿದ. ಅದೇ ಸಂಜೆ ಆರು ಗಂಟೆಯ ಸುಮಾರಿಗೆ ಸಾಹುಕಾರರು ಕಾರಿನಲ್ಲಿ ಬಂದರು.

ಸಾಹುಕಾರರ ಉಪಾಹಾರ, ಸ್ನಾನ ಮುಗಿದ ಮೇಲೆ ಚಿನ್ನಪ್ಪ ತಾನು ಮಾಡಿದ ವ್ಯವಸ್ಥೆಯ ವರದಿ ಒಪ್ಪಿಸಿದ. ಸ್ಟೂಡಿಯೋ ಮನೆ ಪರಾಮರ್ಶಿಸುತ್ತ ಸಾಹುಕಾರರು

"ಈ ರೂಮು ಆಫೀಸಿಗೆ ಚೆಂದಾಕೈತೆ"

ಎಂದರು. ಚಿನ್ನಪ್ಪ

"ಆಫೀಸಿಗೆ ಕಂಪೆನಿ ಮನೆಯಲ್ಲಿ ನಾನು ರೂಮು ಮಾಡಿದ್ದೇನೆ."

"ನಾನಿರೋ ಕಡೆ ಆಫೀಸ್ ಇರಬ್ಯಾಡ್ವಾ ಚಿನ್ನಪ್ಪ – ಇಲ್ಲೇ ಇರ್ಲಿ"

ಎಂದರು. ಆಫೀಸಿನಲ್ಲಿಯೇ ಮುರಿಗೆಯ್ಯ ಇರುವುದೆಂದು ಸಾಹುಕಾರರ ಅಪ್ಪಣೆಯಾಯಿತು.

"ನೀನು ?"

ಎಂದು ಚಿನ್ನಪ್ಪನನ್ನು ಕೇಳಿದರು

"ನಾನು ಕಂಪೆನಿಯಲ್ಲಿರುತ್ತೇನೆ. ಮುರಿಗೆಯ್ಯನೂ ಇಲ್ಲೇ – ನಾನೂ ಇಲ್ಲೇ ಆದರೆ ಅಲ್ಲಿ ಯಾರಾದರೂ ಒಬ್ಬರು ಇರಬೇಡವೇ ?"

"ಇಲ್ಲಿ ನೀನಿಲ್ಲದಿದ್ರೆ ಕೆಲಸ ಆಗಾಕಿಲ್ಲ ಚಿನ್ನಪ್ಪ. ಕಂಪೆನಿ ಮನೇಗೆ ಯಾರನ್ನಾದರೂ ಹಾಕೋಣ. ನೀನು ಇಲ್ಲೇ ಇದ್ದುಬಿಡು."

ಎಂದರು. ಆಫೀಸಿನ ಎದುರಿಗಿದ್ದ ರೂಮು ಸಾಹುಕಾರರ ಶಯ್ಯಾ ಗೃಹವಾಯಿತು. ಅದರ ಪಕ್ಕದ ರೂಮು ಭಾಗ್ಯಮ್ಮನದಾಯಿತು. ಭಾಗ್ಯಮ್ಮನ ರೂಮಿನೆದುರಾಗಿ ಉದ್ದಕ್ಕೆ ಗೋಡೆಯವರೆಗೆ ತೊಟ್ಟಿಯಿತ್ತು. ತೊಟ್ಟಿಯಿಂದ ಮುಂದಕ್ಕೆ ಹೋದರೆ ಅತ್ತಿತ್ತ ಎರಡು ರೂಮುಗಳು. ಅವುಗಳಲ್ಲಿ ಎಡಗಡೆಯಿದ್ದ ರೂಮಿನಲ್ಲಿ ಚೂಡಾಮಣಿ, ಕಾಂತಿಮತಿ, ಪಾರ್ವತಿ ಇರುವುದೆಂದೂ, ಅದರ ಎದುರು ರೂಮಿನಲ್ಲಿ ಚಿನ್ನಪ್ಪ ಇರುವುದೆಂದೂ ನಿಶ್ಚಯವಾಯಿತು.

ಸಾಹುಕಾರರು ಬಾಬುಗಳನ್ನೂ ಸುದರ್ಶನರನ್ನೂ ಮಾತನಾಡಿಸಿ ಅವರೊಂದಿಗೆ ಕಂಪೆನಿ ಮನೆ, ಶಾಮಲಾಬಾಯಿಯ ಮನೆಗಳನ್ನು ನೋಡಿ ಬಂದು ಚಿನ್ನಪ್ಪ ಮಾಡಿದ ವ್ಯವಸ್ಥೆಯನ್ನು ಮೆಚ್ಚಿಕೊಂಡರು.

ಎಲ್ಲರೂ ಬಂದು ಕಂಪೆನಿ ಮನೆಯಲ್ಲಿ ಕುಳಿತಾಗ ಸಾಹುಕಾರರು

"ನಮ್ಮ ಷ್ಟಾರೇ ಬರಲಿಲ್ಲವಲ್ಲೋ ಚಿನ್ನಪ್ಪ."

"ನಾಳೆ ನಾಡಿದ್ದು ಬರಬಹುದು ಸ್ವಾಮಿ—"

ಷೂಟಿಂಗ್ ಎಂದು ಇಟ್ಟುಕೊಂಡಿದ್ದೀರಿ ಸ್ವಾಮಿ."

"ನಾಳೆ ಗುರುವಾರ–ದಿನ ಚೆನ್ನಾಗಿದೆಯೆಂದು ಜ್ಯೋತಿಷಿಗಳು ಹೇಳಿದರು."

"ಈಯಮ್ಮ ಹೊತ್ತಿಗೆ ಬರದೇ ಇದ್ದರೆ ಫಜೀತಿಯಾಗ್ತೈತೆ."

"ಹಾಗೆ ಮಾಡಲಾರರು ಸಾಹುಕಾರರೇ. ನಾಳೆ ನಾನು ಎಕ್ಸ್‌ಪ್ರೆಸ್ ಟೆಲಿಗ್ರಾಂ ಕಳಿಸುತ್ತೇನೆ."

"ಗುರುವಾರ ಷೂಟಿಂಗ್ ಇಟ್ಟುಕೊಂಡರೆ ಎಲ್ಲರೂ ತಯರಾಗವ್ರಾ."

"ಸತ್ಯನಾಥನ್, ವರದರಾಜ ಅಯ್ಯಂಗಾರರು ಹಾಡುಗಳನ್ನು ಕೂಡಿಸುತ್ತಿದ್ದಾರೆ–ಸುದರ್ಶನರು 'ರಿಹರ್ಸಲ್' ಆರಂಭಮಾಡಿದ್ದಾರೆ. ಅವರೂ, ಬಾಬುಗಳೂ ದಿನವೂ ಸ್ಟೂಡಿಯೋಕ್ಕೆ ಹೋಗಿ ಅಲ್ಲಿನ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾರೆ."

"ಸರಿ – ಮಹೂರ್ತ ಯಾವಾಗ ಇಟ್ಟುಕೊಂಡಿದ್ದೀ."

"ಗುರುವಾರವೇ. ಅವತ್ತು ಹೆಚ್ಚಿಗೆ ಕೆಲಸವಾಗೊಲ್ಲ. ಯಾರಾದರೂ ಒಬ್ಬಿಬ್ಬರಿಗೆ ಮೇಕಪ್ (Make-up) ಮಾಡಿ ಕೆಲಸ ಆರಂಭ ಮಾಡೋದು. ಮಾರನೆಯ ದಿನದಿಂದಲೇ ಕಾಲ್ ಷೀಟಿನ (Call sheet) ಲೆಕ್ಕ. ಮಹೂರ್ತಕ್ಕೆ ನೂರಾರು ಜನಗಳನ್ನು ಕರೆಯಬೇಕಾಗತ್ತೆ."

"ಏನು ಬೇಕೋ ಮಾಡು. ನಾನು ಬ್ಯಾಡಾನ್ನುತ್ತೀನಾ ?"

"ಅಧ್ಯಕ್ಷತೆಗೆ ಸರ್ ಸಿ. ಪಿ. ರಾಮಸ್ವಾಮಿ ಅಯ್ಯರ್‌ರವರನ್ನು ಕರೆಯುವುದೊಳ್ಳೆಯದೆಂದು ರಾಮನುಜಂ ಸೂಚಿಸಿದ್ದಾರೆ."

"ಅವರು ಒಪ್ಪುತ್ತಾರೇನಯ್ಯ ?"

"ರಾಮನುಜಂ ಒಪ್ಪಿಸುತ್ತೇನೆಂದಿದ್ದಾರೆ."

"ಭೇಷಾಯಿತು. ಆ ಹೊತ್ತಿಗಾದರೂ ಈ ಸ್ಟಾರ್ ಮಹಾರಾಯ್ತೀ ಬತ್ತಾಳಾ ?"

"ಬರ್ತಾಳೆ ಸಾಹುಕಾರರೇ – ನೀವು ಯೋಚನೆ ಮಾಡಬೇಡಿ."

"ಮಹೂರ್ತದ ದಿವಸ ನನ್ನ ಭಾಷಣ ಮಾಡೂಂತ ಏಳಬೇಡ. ಚಿನ್ನಪ್ಪ."

"ನೀವು ಧಣಿಗಳು – ನೀವು ಭಾಷಣ ಮಾಡದೆ ಇನ್ನು ಯಾರು ಮಾಡಬೇಕು ಸ್ವಾಮಿ."

"ಬಾಬುಗಳು – ಸುದರ್ಶನರು. ಅವತ್ತು ನಾನು ಮಾಡಿದ ಭಾಷಣ ನೆನಸ್ಕೊಂಡ್ರೆ ಕೈಕಾಲು ನಡುಕ ಬತ್ತೈತೆ."

ಸಾಹುಕಾರರ ಮಾತಿಗೆ ಎಲ್ಲರೂ ನಕ್ಕರು.

## ೧೮

ಚಿನ್ನಪ್ಪ ಮುಂಬಯಿಗೆ ದಾದಾ ಸಾಹೇಬ್ ಸಾತೆಗೆ ವೈರ್ ಮಾಡಿದ್ದಲ್ಲದೆ, ಅವರನ್ನು ಕೂಡಲೆ ಕಳಿಸಿಕೊಡುವಂತೆ ಮಾಣಿಕ್ ದಾದರ್‌ಕರ್ ಅವರಿಗೂ ವೈರ್ ಮಾಡಿದ. ದಾದಾ, ಶಾಮಲಾಬಾಯಿ ಮದರಾಸಿಗೆ ಹೊರಟಿರುವುದಾಗಿ ಮಾಣಿಕ್ ಮರು ವೈರ್ ಮಾಡಿದ.

ದಾದಾ ಸಾಹೇಬ್ ಹುಬ್ಬಳ್ಳಿ ತಲುಪಿದ ಕೂಡಲೆ ಚಿನ್ನಪ್ಪನಿಗೆ ವೈರ್ ಮಾಡಿ ತಾವು ಹೊರಟಿರುವ ಸಂಗತಿ ತಿಳಿಸಿದ. ಸಾಹುಕಾರರ ಆತಂಕ ಸ್ವಲ್ಪ ಕಡಿಮೆಯಾಯಿತು.

ಚಿನ್ನಪ್ಪ ದಿನವೆಲ್ಲಾ ಸ್ಟೂಡಿಯೋ ಮನೆಯ ಬಳಿ ದಾದಾ ಸಾಹೇಬನ ಕಾರು ಎದುರು ನೋಡುತ್ತಿದ್ದ. ಅದು ಬರಲು ದಾದಾ ಸಾಹೇಬನನ್ನೂ ಅವನ ಪರಿವಾರವನ್ನೂ ಶಾಮಲಾಬಾಯಿಗೆ ಗೊತ್ತುಮಾಡಿದ ಮನೆಗೆ ಕರೆದುಕೊಂಡು ಹೋದ.

ಶಾಮಲಾಬಾಯಿಗೆ ಸ್ವಾಗತ ಬಯಸಲು ಭೂಪೇನ್ ಬಾಬು, ಸಾಹುಕಾರರು, ಮುರಿಗೆಯ್ಯ, ಶಿವಾನಂದ, ಮಹಂತಯ್ಯ ಎಲ್ಲರೂ ಅವರ ಮನೆಯ ಬಳಿಗೆ ಹೋದರು. ಸುದರ್ಶನರು ಮಾತ್ರ ತಾವು ಬರುವುದಿಲ್ಲವೆಂದರು.

ಚಿನ್ನಪ್ಪನ ಕಾಗದ ಕೈಸೇರಿದೊಡನೆಯೇ ರಾಜಣ್ಣನೂ ಮುಂಬಯಿಯಿಂದ ಹೊರಟು ಮದರಾಸು ಸೇರಿದ.

ಸುದರ್ಶನರ ಬರವಣಿಗೆ ಕೆಲಸಕ್ಕೆ ಯಾರಾದರೂ ಒಬ್ಬರ ನೆರವು ಬೇಕಾಗಿತ್ತು. ನಟನಟಿಯರಿಗೆ ಪಾತ್ರಗಳನ್ನು ಬರೆದುಕೊಡುವುದು, ಡೈರೆಕ್ಟರ ಬಳಿಗೆ ಹೋಗಿ ಬರುವುದು, ಸ್ಟೂಡಿಯೋಕ್ಕೆ ಹೋಗಿಬರುವುದು ಮೊದಲಾದ ಕೆಲಸಗಳಿಗೆ ಒಬ್ಬ ಅಸಿಸ್ಟೆಂಟ್ ಅವಶ್ಯಕವಾಗಿತ್ತು. ಚಿನ್ನಪ್ಪ ಆ ವಿಷಯ ಆಲೋಚಿಸಿ, ಸಾಹುಕಾರರ ಸಲಹೆಯಂತೆ ಪದ್ಮರಾಜುವನ್ನು ನಿಯಾಮಕ ಮಾಡಿದ. ಡೈರೆಕ್ಟರ್ ಅಸಿಸ್ಟೆಂಟ್ ಆಗಿ ಕೆಲಸಮಾಡಲು ರಾಜಣ್ಣನಿಗೆ ಅಪ್ಪಣೆಯಾಯಿತು.

ಸುದರ್ಶನರು ಹಗಲಿರುಳೂ ತಮ್ಮ ಕೆಲಸದಲ್ಲಿ ಅನುರಕ್ತರಾದರು. ನಟರು ಒಬ್ಬೊಬ್ಬರನ್ನಾಗಿ ಬರಮಾಡಿಕೊಂಡು ಅವರಿಗೆ ಪಾತ್ರ ಪರಿಚಯ ಮಾಡಿಕೊಟ್ಟು, ಅವರ ಸಂಭಾಷಣೆಯನ್ನು ತಿದ್ದಲಾರಂಭಿಸಿದರು. ಶಿವಾನಂದರ ಬಾಯಲ್ಲಿ ಹೊರಡುತಿದ್ದ ಅಲ್ಪಪ್ರಾಣ, ಮಹಾಪ್ರಾಣಗಳನ್ನು ತಿದ್ದುವುದರಲ್ಲಿ ಅವರ ಮುಖದ ಮೇಲೆ ಬೆವರಿಳಿಯುತ್ತಿತ್ತು.

ಶಾಮಲಾಬಾಯಿಯೂ ಸಕಾಲಕ್ಕೆ ಬಂದಂತೆ ಆಗಿತ್ತು. ಇನ್ನು 'ಮುಹೂರ್ತ' ವಿಧಿಯನ್ನು ಪೂರೈಸಲು ಯಾವ ಅಡಚಣೆಯೂ ಇರಲಿಲ್ಲ. ಆಹ್ವಾನ ಪತ್ರಿಕೆಗಳನ್ನು ಅಚ್ಚುಹಾಕಿಸಿ ಚಿನ್ನಪ್ಪ ಊರಿನ ಗಣ್ಯ ಮಹನೀಯರು, ಮಹಿಳೆಯರಿಗೂ, ಕಲಾವಿದರಿಗೂ, ಸಿನೀಮಾ ವ್ಯವಸಾಯಿಗಳಿಗೂ, ಹಂಚುವುದರಲ್ಲಿ ತೊಡಗಿದ್ದ.

'ಮುಹೂರ್ತ'ದ ದಿನ ಸಭೆಯಲ್ಲಿ ನಾಲ್ಕು ಹಾಡು ಹೇಳಬೇಕೆಂದು ಸಾಹುಕಾರರು ಶಾಮಲಾಬಾಯಿಯನ್ನು ಅಂಗಲಾಚಿ ಬೇಡಿದರು. 'ಅದು ಕಾಂಟ್ರ್ಯಾಕ್ಟಿನಲ್ಲಿ ಸೇರಿಲ್ಲ' ಎಂದು ಶಾಮಲಾಬಾಯಿ ನಿರಾಕರಿಸಿಬಿಟ್ಟಳು. ಸರೋಜನೇ ಹಾಡತಕ್ಕದ್ದೆಂದು ನಿಶ್ಚಯವಾಯಿತು. ಸ್ವಾಗತ ಭಾಷಣ ಮಾಡಲು ಸಾಹುಕಾರರನ್ನು ಒಪ್ಪಿಸಲು ಸಾಧ್ಯವಾಗಲಿಲ್ಲ. ಭೂಪೇನ್‌ಬಾಬು, ಕಂಪೆನಿಯ ಪರವಾಗಿ ಸ್ವಾಗತ ಭಾಷಣ ಮಾಡುವುದೆಂದೂ ಅಧ್ಯಕ್ಷರ ಭಾಷಣವಾದ ಮೇಲೆ ಸುದರ್ಶನರು ವಂದನಾರ್ಪಣೆ ಮಾಡುವುದೆಂದೂ

ನಿಶ್ಚಯವಾಯಿತು. ಮಹಾದೇವಯ್ಯನ ಕೈಯಲ್ಲಿ ಸ್ವಾಗತ ಪದ್ಯಗಳನ್ನು ಬರೆಸಲು ಚಿನ್ನಪ್ಪ ಒಪ್ಪಬೇಕಾಯಿತು.

ಸ್ಟುಡಿಯೋ ಆವರಣ ತಳಿರು ತೋರಣಗಳಿಂದ, ಬಾವುಟಗಳಿಂದ ಅಲಂಕೃತವಾಯಿತು. ಉಪಾಹಾರ ಹಂಚಿಕೆಯನ್ನೊಪ್ಪಿಕೊಂಡಿದ್ದ 'ಸಿಲ್ವರ್ ಹೊಟೇಲಿ'ನವರೇ ಕುರ್ಚಿ, ಮೇಜುಗಳನ್ನು ತಂದೊದಗಿಸಿದ್ದರು. ವೇದಿಕೆಯ ಮೇಲೆ ಅಧ್ಯಕ್ಷರು, ಸಾಹುಕಾರರು, ಚೆಟ್ಟಿಯಾರರು, ರಾಮಾನುಜಂ, ಭೂಪೆನ್ ಬಾಬು, ಸುದರ್ಶನರು ಕೂಡಲು ವ್ಯವಸ್ಥೆಯಾಯಿತು. ಸಮಾರಂಭ ಐದು ಗಂಟೆಗೆಂದು ನಿಶ್ಚಯವಾಗಿತ್ತು. ಅತಿಥಿಗಳು ನಾಲ್ಕುವರೆಯಿಂದಲೇ ಸೇರುವುದಕ್ಕಾರಂಭಿಸಿದರು. ಚಿನ್ನಪ್ಪ, ರಾಮಾನುಜಂ ಎಲ್ಲರಿಗೂ ಸ್ವಾಗತ ಬಯಸುತ್ತಿದ್ದರು.

ಅಂದಿನ ಸಮಾರಂಭದ ಸಣ್ಣ ಚಿತ್ರವೊಂದನ್ನು ತೆಗೆಯಲು ನಿಶ್ಚಯವಾಗಿತ್ತು. ಕ್ಯಾಮರಾಮನ್ ವೆಂಕಟಾಚಲಂ, ರಿಕಾರ್ಡಿಸ್ಟ್ ಸುಬ್ಬಯ್ಯರ್ ಸಿದ್ಧವಾಗಿದ್ದರು. ಚಕ್ರವರ್ತಿ, ಪಾರ್ವತಿ ಮೇಕಪ್ ಮಾಡಿಕೊಂಡು 'ಕ್ಲಿಕ್' (Click) ಆಗುವ ಕಾಲ ನಿರೀಕ್ಷಿಸುತ್ತಿದ್ದರು.

ಮಾನ್ಯ ಅಧ್ಯಕ್ಷರು ಐದುಗಂಟೆಗೆ ಐದು ನಿಮಿಷ ಮುಂಚಿತವಾಗಿ ದಯೆಮಾಡಿಸಿದರು. ಸಾಹುಕಾರರು, ಚೆಟ್ಟಿಯಾರರು ಅವರನ್ನು ಬಾಗಿಲಿನಲ್ಲಿಯೇ ಸ್ವಾಗತಿಸಿ ಒಳಗೆ ಕರೆತಂದು ಅತಿಥಿಗಳ, ನಟ ನಟಿಯರ, ಸ್ಟುಡಿಯೋ ತಂತ್ರಜ್ಞರ ಪರಿಚಯ ಮಾಡಿಕೊಟ್ಟರು. ಅಧ್ಯಕ್ಷರು ನಸುನಗುತ್ತಾ ಗುರುತಿದ್ದವರನ್ನೆಲ್ಲಾ ಮಾತನಾಡಿಸುತ್ತ ವೇದಿಕೆಯ ಮೇಲೆ ಕುಳಿತರು. ಅವರ ಅತ್ತಿತ್ತ ಚೆಟ್ಟಿಯಾರರು, ಸಾಹುಕಾರರು ಕುಳಿತರು. ಉಪಾಹಾರ ಸೇವನೆಯಾಯಿತು. 'ಸಿಲ್ವರ್ ಹೊಟೇಲಿ'ನವರು ೫೫೫ ಸಿಗರೇಟ್ ಟಿನ್ ಒಡೆದು ಎಲ್ಲರಿಗೂ ಸಿಗರೇಟ್ ಹಂಚಿದರು. ಸ್ವಾಗತ ಪದ್ಯಗಳನ್ನು ರಚಿಸಿದ್ದ ಮಹಾದೇವಯ್ಯನೇ ಅದನ್ನು ಓದುವಂತೆ ಮುರಿಗೆಯ್ಯ ಮುಸಲತ್ತು ಮಾಡಿದ್ದ. ಮುರಿಗೆಯ್ಯನ ವಿರೋಧ ಕಟ್ಟಿಕೊಳ್ಳಲಾರದೆ ಚಿನ್ನಪ್ಪ ಸಮ್ಮತಿ ಕೊಟ್ಟಿದ್ದ.

ಪದ್ಯದ ಹಾಳೆಗಳನ್ನು ಕೈಯಲ್ಲಿ ಹಿಡಿದು ಮೈಕ್ ಮುಂದೆನಿಂತ ಮಹಾದೇವಯ್ಯನ ಕೈಕಾಲುಗಳು ಗಡಗಡನೆ ನಡುಗಲಾರಂಭಿಸಿದವು. ಹಣೆಯ ಮೇಲೆ ಹರಿಯುತ್ತಿದ್ದ ಬೆವರು ಹನಿಗಳು ಕಣ್ಣಲ್ಲಿ ಇಳಿಯುತ್ತಿದ್ದವು. ಅವನ ಪದ್ಯ, ಅದನ್ನು ಹಾಡುವ ಧಾಟಿ ಕೇಳುತ್ತಾ ಸಾಹುಕಾರರು ಕತ್ತು ತಗ್ಗಿಸಿದರು. ಚಿನ್ನಪ್ಪ ಇಂಥ ಅವಿವೇಕ ಮಾಡಿದನಲ್ಲಾ ಎಂದು ಅವರು ಒಳಗೇ ಕುದಿಯ

ಲಾರಂಭಿಸಿದರು. ಮಹಾದೇವಯ್ಯ ಸ್ವಾಗತ ಮುಗಿಸಿದ ಸಂತೋಷದಿಂದ ಸಭಿಕರು ಕರತಾಡನ ಮಾಡಿದರು.

ಸರೋಜ ವೇದಿಕೆಯ ಮೇಲೆ ಕುಳಿತು ಗಂಭೀರವಾಗಿ ತಂಬೂರಿಯನ್ನು ಗಲ್ಲಕ್ಕೆ ಒರಗಿಸಿಕೊಂಡು ನಾಲ್ಕುಕೀರ್ತನೆ ಹಾಡಿದಳು ಅಧ್ಯಕ್ಷರು ಅವಳ ಸಂಗೀತಕ್ಕೆ ತಲೆದೂಗುತ್ತ ಮಧ್ಯೆಮಧ್ಯೆ ಹರ್ಷೋದ್ಗಾರಗಳನ್ನು ತೆಗೆಯುತ್ತಿದ್ದರು.

ಅವಳ ಸಂಗೀತ ಮುಗಿದ ಮೇಲೆ ಶಾಸ್ತ್ರೋಕ್ತವಾಗಿ ಕ್ಯಾಮೆರಾ, ರಿಕಾರ್ಡಿಂಗ್ ವ್ಯಾನ್‌ಗಳ ಪೂಜೆಯಾಯಿತು. ಅಧ್ಯಕ್ಷರು ಕ್ಯಾಮರಾ 'ಕ್ಲಿಕ್' ಮಾಡಿದ ಮೇಲೆ ನಾಲ್ಕು ಸಂಭಾಷಣೆಯಿದ್ದ ಒಂದು ದೃಶ್ಯವನ್ನು ತೆಗೆಯಲಾಯಿತು.

ಭೂಪೆನ್ ಬಾಬು ಕಂಪೆನಿಯ ಉದ್ದೇಶವನ್ನು ವಿವರಿಸಿ ಎಲ್ಲರಿಗೂ ಸ್ವಾಗತ ಬಯಸಿದರು. ಬರೆದುಕೊಂಡು ಬಂದಿದ್ದ ಭಾಷಣವನ್ನು ಓದುವುದೇ ಅವರಿಗೆ ಸಾಕಾಗಿ ಹೋಯಿತು. ಭಾಷಣದಲ್ಲಿ ಅಧ್ಯಕ್ಷರನ್ನೂ, ಸಾಹುಕಾರರನ್ನೂ, ಚೆಟ್ಟಿಯಾರರನ್ನೂ ಮನಸಾರೆ ಹೊಗಳಿದರು.

ಭಾಷಣ ಇಂಗ್ಲೀಷಿನಲ್ಲಿದ್ದುದರಿಂದ ಸಾಹುಕಾರರಿಗೆ ಒಂದು ಶಬ್ದ ಅರ್ಥವಾಗದಿದ್ದರೂ ಎಲ್ಲರೂ ನಕ್ಕಾಗ ನಕ್ಕು, ಎಲ್ಲರೂ ಕರತಾಡನ ಮಾಡಿದಾಗ ತಾವು ಚಪ್ಪಾಳೆ ಬಡಿದು ತೃಪ್ತರಾಗಿದ್ದರು.

ಸಾಹುಕಾರರ ಪ್ರಾರ್ಥನೆಯ ಮೇರೆಗೆ ಅಧ್ಯಕ್ಷರು ಭಾಷಣಕ್ಕೆ ನಿಂತರು.

"ಈ ಚಿತ್ರದ ಮುಹೂರ್ತದಲ್ಲಿ ಭಾಗವಹಿಸಲು ನನಗೆ ತುಂಬ ಸಂತೋಷವಾಗಿದೆ. ಶ್ರೀ ರಾಮಚಂದ್ರ ನನ್ನ ಆರಾಧ್ಯಮೂರ್ತಿ. ಶ್ರೀರಾಮನ ಚರಿತ್ರೆಯೆಂದರೆ ಭಾರತ ಸಂಸ್ಕೃತಿಯ ತಿರುಳು ಎಂದರೂ ತಪ್ಪಾಗಲಾರದು. ಉಪನಿಷತ್ತುಗಳು, ರಾಮಾಯಣ, ಭಾರತಗಳ ಮಹಾಪುರುಷರ ಚರಿತ್ರೆಗಳು ಚಲನಚಿತ್ರಗಳಾಗಿ ಲಕ್ಷಾಂತರ ಮಂದಿಯ ಕಣ್ಣಿಗೆ ಬೀಳಬೇಕಾದುದಗತ್ಯ. ಇಂಥ ಶ್ರೇಯಃಪ್ರದವಾದ ಕೆಲಸ ಕೈಗೊಂಡಿರುವ ಮೈಸೂರಿನ ಸಾಹುಕಾರ ರುದ್ರಪ್ಪನವರನ್ನು ನಾನು ಹೃತ್ಪೂರ್ವಕ ಅಭಿನಂದಿಸುತ್ತೇನೆ. ಅವರಉದ್ಯಮ ಯಶಸ್ವಿಯಾಗಿ ಕೀರ್ತಿ,: ಸಂಪತ್ತನ್ನು ಗಳಿಸಲಿ ಎಂದು ಹಾರೈಸುತ್ತೇನೆ"

ಎಂದರು. ಭಾಷಣ ಚಿಕ್ಕದಾಗಿದ್ದರೂ ಚೊಕ್ಕವಾಗಿತ್ತು. ಅಧ್ಯಕ್ಷರ ಬಾಯಲ್ಲಿ ಇಂಗ್ಲಿಷ್ ಮಾತುಗಾರಿಕೆ ಗಂಗಾಪ್ರವಾಹದಂತೆ ಹರಿಯಿತು.

ಅಧ್ಯಕ್ಷರ ಭಾಷಣ ಮುಗಿದಕೂಡಲೆ ಚಿನ್ನಪ್ಪ ಹಾರ ತುರಾಯಿಗಳನ್ನು ತಂದು ಸಾಹುಕಾರರ ಕೈಗಿತ್ತ. ಸಾಹುಕಾರರು ಮೊದಲು ಅಧ್ಯಕ್ಷರಿಗೂ

ತರುವಾಯ ಚೆಟ್ಟಿಯಾರರು, ರಾಮಾನುಜಂ ಅವರಿಗೂ ಹಾರ ತುರಾಯಿ ಅರ್ಪಿಸಿದರು. ಅತಿಥಿಗಳಿಗೆ ಹೂವಿನ ಬಟನ್ ಹೋಲುಗಳು ಹಂಚಲ್ಪಟ್ಟವು.

ಅಧ್ಯಕ್ಷ ಸನ್ಮಾನದ ಸಂಭ್ರಮ ಕಡಿಮೆಯಾದ ಮೇಲೆ ಸುದರ್ಶನರು ಮೈಕಿನ ಮುಂದೆ ಬಂದು ನಿಂತರು. ಸಾಹುಕಾರರ ಕಂಪೆನಿಯವರು ಕುತೂಹಲದಿಂದ ಅತ್ತ ನೋಡಿದರು. ಮುರಿಗೆಯ್ಯ, ಮಹಾದೇವಯ್ಯ ಇಬ್ಬರ ಮುಖದಲ್ಲಿಯೂ ತಿರಸ್ಕಾರದ ನಗೆ ನಿಂತಿತ್ತು. ಸುದರ್ಶನರು ಇಂಗ್ಲಿಷಿನಲ್ಲಿ ಆರಂಭಿಸಿದುದನ್ನು ಕಂಡು ಮಹಾದೇವಯ್ಯ ಮೆಲ್ಲನೆ ಮುರಿಗೆಯ್ಯನಿಗೆ

"ಇವನೇನೊ ಇವತ್ತು ಆಭಾಸಮಾಡಿಕೊಳ್ಳುತ್ತಾನೆ"

ಎಂದು ಪಿಸುಮಾತಿನಲ್ಲಿ ಹೇಳಿದ.

ಸುದರ್ಶನರು ಗಂಭೀರವಾಗಿ ತಮ್ಮ ಭಾಷಣ ಆರಂಭಿಸಿದರು.

"ವಿದ್ವನ್ಮಣಿಗಳೂ ಭಾರತ ಸಂಸ್ಕೃತಿಯ ರಾಯಭಾರಿಗಳೂ ಆಗಿರುವ ಸರ್ ಸಿ. ಪಿ. ಯವರು ಇಂದಿನ ಸಮಾರಂಭಕ್ಕೆ ಅಧ್ಯಕ್ಷರಾಗಿ ದೊರೆತುದು ನಮ್ಮ ಭಾಗ್ಯವಿಶೇಷ. ಅವರು ನಮ್ಮ ಉದ್ಯಮಕ್ಕೆ ಶುಭಾಶಯ ಕೋರುವುದರ ಜತೆಗೆ ನಮ್ಮ ಮೇಲೆ ಹೆಚ್ಚಿನ ಜವಾಬ್ದಾರಿ ಹೊರಸಿದ್ದಾರೆ. ಈ ಬಗೆಯ ಪೌರಾಣಿಕ ಚಿತ್ರಗಳನ್ನು ಮಾಡುವವರೆಲ್ಲರ ಮೇಲೆ ಗುರುತರ ಜವಾಬ್ದಾರಿಯಿದೆ. ಕೆಲವು ವರ್ಷಗಳ ಹಿಂದೆ ನಾನು ಯೇಸು ಸ್ವಾಮಿಯ ಜೀವನವನ್ನು ಚಿತ್ರಿಸಿದ್ದ ಕಿಂಗ್ ಆಫ್ ಕಿಂಗ್ಸ್ (King of Kings) ಚಿತ್ರ ನೋಡಿದೆ. ಧರ್ಮದ ವಿಷಯದಲ್ಲಿ ಪಾಶ್ಚಾತ್ಯರಿಗಿಂತ ನಮ್ಮ ಆಸ್ಥೆ ಬಹಳವೆಂದು ನಾವು ಜಂಭ ಕೊಚ್ಚಿಕೊಳ್ಳುತ್ತೇವೆ. ನಾವು ಮಾಡುತ್ತಿರುವ ಪೌರಾಣಿಕ ಚಿತ್ರಗಳನ್ನು 'ಕಿಂಗ್ ಆಫ್ ಕಿಂಗ್ಸ್' ಚಿತ್ರಕ್ಕೆ ಹೋಲಿಸಿ ನೋಡಬೇಕು. ಶ್ರೀರಾಮ, ಶ್ರೀಕೃಷ್ಣ, ನಾರದ, ಮಾರ್ಕಂಡೇಯ, ಸತ್ಯವಾನ್ ಸಾವಿತ್ರಿ, ವೈಷ್ಣವ ಭಕ್ತರು, ಶೈವ ಶರಣರು ಎಲ್ಲರ ಮೇಲೆಯೂ ನಮ್ಮಲ್ಲಿ ಚಿತ್ರಗಳು ಬಂದಿವೆ. ವಾಲ್ಮೀಕಿ, ವ್ಯಾಸ, ಕಾಳಿದಾಸ, ಭಾಸ, ಭವಭೂತಿ ಮೊದಲಾದ ಮಹಾಕವಿಗಳ ಕೃತಿಗಳನ್ನು ನಾವು ಉಪಯೋಗಿಸಿಕೊಂಡಿದ್ದೇವೆ. ಆದರೆ ಅದರಲ್ಲಿ ನಾವು ತೋರಿರುವ ದಕ್ಷತೆ, ಭಕ್ತಿ, ಪಾಂಡಿತ್ಯ ಎಂಥದು ? ನಮ್ಮ ದೇವಾದಿ ದೇವತೆಗಳನ್ನು, ಮಹಾಪುರುಷರನ್ನು ಕಪಿಗಳಂತೆ ಕುಣಿಸಿ, ಕೀಳು ಅಭಿರುಚಿಗೆ ಸೊಪ್ಪು ಹಾಕಿ ನಮ್ಮ ಧನದಾಹವನ್ನು ಪೂರೈಸಿಕೊಳ್ಳಲೆತ್ನಿಸಿದ್ದೇವೆ. ಚಿತ್ರರಂಗವನ್ನು ಕೇವಲ ಧನಾರ್ಜನೆಗೆ ಉಪಯೋಗಿಸಿಕೊಂಡು ನಾಡಿನ ಸಂಸ್ಕೃತಿಯ ಅವಹೇಳನ ಮಾಡುತ್ತಿರುವ ಚಿತ್ರನಿರ್ಮಾಪಕರು ರಾಷ್ಟ್ರಕ್ಕೆ ದೊಡ್ಡ ಅಪಮಾನಮಾಡುತ್ತಿದ್ದಾರೆ.

ನಾವೂ ಪೌರಾಣಿಕ ಚಿತ್ರ ಮಾಡುವ ಉದ್ಯಮ ಕೈಗೊಂಡಿದ್ದೇವೆ. ಇಂದಿನ ವಿಕೃತ ಪರಿಸ್ಥಿತಿಯನ್ನು ಈ ಚಿತ್ರದಲ್ಲಿ ಸಂಪೂರ್ಣವಾಗಿ ಸುಧಾರಿಸುವೆವೋ ಇಲ್ಲವೋ ಹೇಳಲಾರೆ. ಆದರೆ ಆ ದೃಷ್ಟಿಯಲ್ಲಿ ನಾವು ಶಕ್ತಿಮೀರಿ ಪ್ರಯತ್ನಿಸುವೆವೆಂದು ಆಶ್ವಾಸನಕೊಡಬಲ್ಲೆ.

ಶ್ರೀರಾಮಚಂದ್ರ ಅಖಿಲ ಭಾರತದ ಆರಾಧ್ಯಮೂರ್ತಿ. ಉತ್ತರದ ಕೊನೆಯಿಂದ ದಕ್ಷಿಣದವರೆಗೆ, ಪೂರ್ವದಿಂದ ಪಶ್ಚಿಮದವರೆಗೆ ಅವನನ್ನು ನಮ್ಮ ಜನ ಭಗವಂತನ ಅವತಾರವೆಂದು ಪೂಜಿಸುತ್ತಾರೆ. ಈ ಭಾವನೆಯೇ ನಮ್ಮ ಜನರ ಒಗ್ಗೂಟದ ಸಂಕೇತ. ನಮ್ಮ ಚಿತ್ರ ಐಚ್ಛಿಕವಾಗಿಯೋ ಅನೈಚ್ಛಿಕವಾಗಿಯೋ ಅದೇ ಭಾವನೆಯನ್ನು ಮುಂದುವರಿಸಿರುವುದನ್ನು ತಾವು ನೋಡಬಹುದು. ನಮ್ಮ ಚಿತ್ರದ ದಿಗ್ದರ್ಶಕರು ಬಂಗಾಳಿಗಳು, ತಂತ್ರಜ್ಞರು ತಮಿಳರು ಮತ್ತು ತೆಲುಗರು, ನಿರ್ಮಾಪಕರು ಕನ್ನಡಿಗರು. ಅಖಿಲ ಭಾರತದ ಮಹಾವ್ಯಕ್ತಿಯನ್ನು ಕುರಿತಾದ ಚಿತ್ರ ಅಖಿಲ ಭಾರತಕ್ಕೆ ಪ್ರಿಯವಾಗಲೆಂದು ಹಾರೈಸುತ್ತೇನೆ.

ನಾವು ಮದರಾಸಿಗೆ ಬಂದು ಈ ಚಿತ್ರ ಮಾಡುವುದಕ್ಕೆ ನಮಗೆ ಸ್ಫೂರ್ತಿಯಿತ್ತವರು ಈ ಸ್ಟೂಡಿಯೋ ಮಾಲಿಕರಾದ ಶ್ರೀ ಚೆಟ್ಟಿಯಾರರು ಮತ್ತು ಕಾರ್ಯದರ್ಶಿಗಳಾದ ಶ್ರೀ ರಾಮಾನುಜಂ ಅವರು. ಈ ಮಹನೀಯರ ನೆರವು, ತಂತ್ರಜ್ಞರ ಸಹಕಾರ, ತಮ್ಮೆಲ್ಲರ ಆಶೀರ್ವಾದದಿಂದ ಚಿತ್ರಗೆಲಸ ಯಶಸ್ವಿಯಾಗಿ ಸಾಗುತ್ತಿದೆಂದು ನಾವು ದೃಢವಾಗಿ ನಂಬಿದ್ದೇವೆ. ಅಧ್ಯಕ್ಷರಿಗೂ, ತಮ್ಮೆಲ್ಲರಿಗೂ ನಮ್ಮ ಚಿತ್ರ ನಿರ್ಮಾಪಕರಾದ ಸಾಹುಕಾರ್ ರುದ್ರಪ್ಪನವರ ಪರವಾಗಿ ಕೃತಜ್ಞತೆ ಅರ್ಪಿಸುತ್ತೇನೆ."

ಸಭಿಕರು ಸಂತೋಷದಿಂದ ಕರತಾಡನ ಮಾಡಿದರು. ಅಧ್ಯಕ್ಷರು ತಮ್ಮ ಪೀಠದಿಂದೆದ್ದು ಸುದರ್ಶನರ ಕೈಕುಲುಕಿ "Beautifully spoken" ಎಂದರು. ಮುರಿಗೆಯ್ಯ ಮಹಾದೇವನ ಮುಖ ನೋಡಿದ. ಇಬ್ಬರ ಮುಖವೂ ಕಪ್ಪಿಟ್ಟಿತ್ತು.

ರಾಷ್ಟ್ರಗೀತೆಯಾದ ಮೇಲೆ ಅಧ್ಯಕ್ಷರೂ, ಅತಿಥಿಗಳೂ ಹೊರಟರು. ಎಲ್ಲರೂ ಸುದರ್ಶನರನ್ನು ಅಭಿನಂದಿಸುವವರೇ ಆದರು. ದಾದಾ ಸಾಹೇಬ್ ಸಾಠೆ ಕೂಡ ತನ್ನ ಹರಕು ಮುರುಕು ಇಂಗ್ಲಿಷಿನಲ್ಲಿ "You very good speaker" ಎಂದು ಹೇಳಿದ.

ಅಂದಿನ ಉತ್ಸವದ ಸಮಸ್ತ ಕೀರ್ತಿಯೂ ಸುದರ್ಶನರಿಗೇ ಸೇರತಕ್ಕುದೆಂದು ಸಾಹುಕಾರರು ಧಾರಾಳವಾಗಿ ಒಪ್ಪಿಕೊಂಡರು.

ಮೂರನೆಯ ದಿನ ರಾತ್ರಿ ಒಂಭತ್ತು ಗಂಟೆಗೆ ಕಾಲ್‌ಷೀಟ್ ತೆಗೆದು ಕೊಂಡು ಚಿನ್ನಪ್ಪ, ಉಳಿದವರೊಂದಿಗೆ ಮನೆಯಕಡೆ ಹೊರಟ. ಬೆಳಿಗ್ಗೆ ೮-೩೦ ಗಂಟೆಗೆ 'ಕಂಪೆನಿಯ ಮನೆ'ಯಲ್ಲಿ ರಿಹರ್ಸಲ್ ಇಟ್ಟುಕೊಂಡಿರುವು ದಾಗಿ ಸುದರ್ಶನರು ಎಲ್ಲರಿಗೂ ತಿಳಿಸಿದರು. ಸ್ಟೂಡಿಯೋ ಮನೆಯಲ್ಲಿಯೇ ರಿಹರ್ಸಲ್‌ಮಾಡಿದರೆ ಸರೋಜ, ಭಾಗ್ಯಮ್ಮ, ಸಾಹುಕಾರರಿಗೆ ಹೋಗಿ ಬರುವ ಕಷ್ಟ ತಪ್ಪುವುದೆಂದು ಮುರಿಗೆಯ್ಯ ಸಲಹೆಯಿತ್ತ.

"ಬೇಡ ಬೇಡ. ಕವಿಗಳು ಹೇಗೆ ಹೇಳುತ್ತಾರೆ ಹಾಗೆ ಮಾಡೋಣ. ನಾವೇನು ನಡೆಯಬೇಕೇ. ಕಾರಿನಲ್ಲಿ ಹೋಗ್ತೇವೆ-ಬರ್ತೇವೆ."

ಎಂದು ಸಾಹುಕಾರರೇ ಉತ್ತರಿಸಿದರು.

ಮೂರನೆಯ ಬೆಳಿಗ್ಗೆ ಸಾಹುಕಾರರು ಅವರ ಪರಿವಾರ 'ಕಂಪೆನಿ ಮನೆ' ಮುಟ್ಟುವ ವೇಳೆಗೆ ೯-೩೦ ಆಗಿತ್ತು. ಸುದರ್ಶನರು ತಮ್ಮ ಕೈಗಡಿಯಾರ ಸಾಹುಕಾರರಿಗೆ ತೋರಿಸಿ

"ಒಂದು ಗಂಟೆ ತಡವಾಯಿತು."

"ಹೌದು ಸ್ವಾಮಿ ತಡವಾಯಿತು."

"ಯಜಮಾನರೇ ತಡಮಾಡಿದರೆ ಉಳಿದವರಿಗೆ ಹಾಸಿಗೆ ಹಾಸಿ ಕೊಟ್ಟಂತಾಗುತ್ತದೆ."

"ನಾಳ್ನಿಂದ ಟೈಮಿಗೆ ಸರಿಯಾಗಿ ಬರ್ತೇನೆ"

ಎಂದರು. ರಿಹರ್ಸಲ್ಲಿಗೆ ಶಾಮಲಾಬಾಯಿ ಬರಲಿಲ್ಲ. 'ಶಾಮಲಾ ಬಾಯಿಯೆಲ್ಲಿ' ಎಂದು ಸುದರ್ಶನರು ಕೇಳಿದಾಗ ಚಿನ್ನಪ್ಪ 'ಆ ಮಾತು ಈಗ ಬೇಡ, ಆಮೇಲೆ ಹೇಳುತ್ತೇನೆ' ಎಂದ.

ರಿಹರ್ಸಲ್ ಮುಗಿದ ಮೇಲೆ ಚಿನ್ನಪ್ಪ

"ಶಾಮಲಾಬಾಯಿಯವರು ಇಲ್ಲಿಗೆ ರಿಹರ್ಸಲ್ಲಿಗೆ ಬರುವುದಿಲ್ಲವಂತೆ ಸುದರ್ಶನರೇ. ಅವರ ಪಾರ್ಟು ಬರೆದುಕೊಟ್ಟರೆ ಸೆಟ್ಟಿನ ಮೇಲೇ ಅವರು ಮಾಡುವರಂತೆ. ತಮಗೆ ರಿಹರ್ಸಲ್ ಅವಶ್ಯಕತೆಯಿಲ್ಲ ಎಂದರು."

ಎಂದು ಹೇಳಿದ ಸಾಹುಕಾರರು.

"ಹಿಂಗಂದರೆ ಹೆಂಗೆ ಸ್ವಾಮಿ ಎಲ್ಲಾರೂ ಬರಬಹುದು ಈಯಮ್ಮನಿಗೆ ಇಲ್ಲದ ದೊಡ್ಡಸ್ತಿಕೆ."

"ಬೊಂಬಾಯಿಯ ದೊಡ್ಡ ಸ್ಟಾರುಗಳು ಸಾಹುಕಾರರೇ. ಕರೆದು ಕೊಂಡು ಬಂದ ತಪ್ಪಿಗೆ ನಾವು ಅನುಭವಿಸಬೇಕು. ಸೆಟ್ ಮೇಲೆ ಆಕೆ ಏನು ಮಾಡುತ್ತಾರೆ ಮಾಡಲಿ ಸುಮ್ಮನಿರಿ."

ಎಂದು ಹೇಳಿ ಕೂಡಲೆ ಆಕೆಯ ಪಾತ್ರದ ಪುಸ್ತಕವನ್ನು ಕಳುಹಿಸಿ ಕೊಟ್ಟರು.

ರಾತ್ರಿ ಎಂಟು ಗಂಟೆಗೇ ಸರೋಜ, ಸಿದ್ಧವೀರಪ್ಪ, ಚೂಡಾಮಣಿ, ಚಕ್ರವರ್ತಿ, ಪದ್ಮರಾಜು, ಪಾರ್ವತಿ ಮೇಕಪ್ ಮಾಡಿಕೊಳ್ಳುವುದಕ್ಕೆ ಸಿದ್ಧವಾಗಿಬಂದಿದ್ದರು. ಶಾಮಲಾಬಾಯಿ ತಾನೇ ಮನೆಯಲ್ಲಿ ಮೇಕಪ್ ಮಾಡಿಕೊಂಡು ಬರುವುದಾಗಿ ಹೇಳಿ ಕಳಿಸಿದ್ದಳು.

ಎಲ್ಲರ ಮೇಕಪ್ ಮುಗಿದು ಸೆಟ್ ಮೇಲೆ ಬರಬೇಕಾದರೆ ರಾತ್ರಿ ೧೦ ಗಂಟೆಯಾಯಿತು. ಮೊದಲನೆಯ ಷಾಟ್‌ಗೆ (Shot) ವಿದ್ಯುದ್ದೀಪಗಳನ್ನು ಅಳವಡಿಸಿಕೊಳ್ಳಬೇಕಾದರೆ ಒಂದು ಗಂಟೆ ಹಿಡಿಯಿತು. ಮಧ್ಯರಾತ್ರಿ ಹನ್ನೆರಡಕ್ಕೆ ವಿರಾಮ, ಒಂದೂವರೆ ಗಂಟೆಯ ಕಾಲ. ವಿರಾಮದ ವೇಳೆಗೆ ೧೫೦ ಅಡಿಗಳಷ್ಟು ಷೂಟಿಂಗ್ ನಡೆದಿತ್ತು. ವಿರಾಮ ಕಾಲದಲ್ಲಿ ಎಲ್ಲರಿಗೂ ಕಾಫಿ, ಉಪ್ಪಿಟ್ಟು ಸರಬರಾಯಿ ಆಯಿತು. ಕೆಲಸ ಮತ್ತೆ ೧-೩೦ ಕ್ಕೆ ಆರಂಭವಾಯಿತು. ಬೆಳಿಗ್ಗೆ ಐದರ ವೇಳೆಗೆ ಮತ್ತೆ ೧೫೦ ಅಡಿಗಳಷ್ಟು ಷೂಟಿಂಗ್ ನಡೆದಿತ್ತು.

ಈ ಮಂದಗತಿಯಲ್ಲಿ ಚಿತ್ರ ಕಂಟ್ರ್ಯಾಕ್ಟಿನ ಅವಧಿಯಲ್ಲಿ ಮುಗಿಯುವುದು ದುಸ್ತರವೆಂಬ ಅಂಶ ಸುದರ್ಶನರ ಮನಸ್ಸಿಗೆ ಖಚಿತವಾಯಿತು.

ಷೂಟಿಂಗ್ ಮುಗಿಸಿಕೊಂಡು ಶಾಮಲಾಬಾಯಿ ಮನೆಗೆ ಹೋಗುವ ಮುನ್ನ ಸುದರ್ಶನರು ಆಕೆಯ ಬಳಿ ಬಂದು

"ಇವತ್ತು ಮಧ್ಯಾನ್ಹ ಎರಡು ಗಂಟೆ ಕಾಲ ಕಂಪೆನಿ ಮನೆಯಲ್ಲಿ ರಿಹರ್ಸಲ್ ಇಟ್ಟುಕೊಂಡಿದ್ದೇನೆ. ನೀವು ಬಂದರೆ ಒಳ್ಳೆಯದು."

"ನಾನು ರಿಹರ್ಸಲ್ ಮಾಡುವ ಅಭ್ಯಾಸವನ್ನಿಟ್ಟುಕೊಂಡಿಲ್ಲ."

"ಹಿಂದಿ, ಮರಾಟಿ ಚಿತ್ರಗಳಿಗೆ ನೀವು ರಿಹರ್ಸ್ ಮಾಡುವ ಅಗತ್ಯವಿಲ್ಲ. ಆದರಿದು ಕನ್ನಡ ಚಿತ್ರ............"

"ಆದರೇನು ?"

"ಏನೂ ಇಲ್ಲ. ನಿಮಗೆ ಭಾಷೆ ಮರೆತುಹೋಗಿದೆ – ಕೌಸಲ್ಯೆ ಮುಖ್ಯಪಾತ್ರ – ಆಕೆ ಮಹಾರಾಣಿ. ಆಕೆಯ ಬಾಯಲ್ಲಿ ತಪ್ಪುಮಾತುಗಳು ಬಂದರೆ ಹಾಸ್ಯಾಸ್ಪದವಾಗುತ್ತದೆ."

"ನನ್ನ ಕರ್ತವ್ಯ ನನಗೆ ಗೊತ್ತಿದೆ ಪಂಡಿತ್‌ಜೀ. ಟೇಕಿನ (Take) ಮುಂಚೆ ಒಂದು ರಿಹರ್ಸಲ್ ನನಗೆ ಕೊಟ್ಟರೆ ಸಾಕು – ನಾನು ಮಾಡಬಲ್ಲೆ"

ಎಂದು ಹೇಳಿ ಅಲ್ಲಿ ನಿಲ್ಲದೆ ಶಾಮಲಾಬಾಯಿ ಹೊರಟುಹೋದಳು. ಶಾಮಲಾಬಾಯಿಗೂ, ಸುದರ್ಶನರಿಗೂ ಆದ ಸಂಭಾಷಣೆ ಪೂರ್ತಿಯಾಗಿ ಸಾಹುಕಾರರು ಕೇಳಿಸಿಕೊಂಡಿದ್ದರು. ಅವಳ ನಡತೆ ಅವರಿಗೂ ಬೇಸರ ವನ್ನುಂಟುಮಾಡಿತ್ತು.

ಸುದರ್ಶನರ ಮುಖ ಚಿಕ್ಕದಾದುದನ್ನು ಕಂಡು

"ಇರಲಿ ಬನ್ನಿ ಸ್ವಾಮಿ"

ಎಂದು ಹೆಗಲ ಮೇಲೆ ಕೈಹಾಕಿ ಜತೆಯಲ್ಲಿ ಕರೆದುಕೊಂಡು ಹೋದರು.

ಶಾಮಲಾಬಾಯಿಯಿಂದಾದ ಅವಹೇಳನಕ್ಕಿಂತ ಹೆಚ್ಚಾಗಿ ಚಿತ್ರದ ಗತಿ ಯೇನು ಎಂಬ ಚಿಂತೆ ಸುದರ್ಶನರನ್ನು ಆವರಿಸಿತು. ಸ್ಟುಡಿಯೋದವರು ನಸನಗುತ್ತಲೇ 'ಬೇಲಿಯೇ ಎದ್ದು ಹೊಲ ಮೇಯುವ ಕೆಲಸ' ಆರಂಭಿಸಿದ್ದರು. ಈ ಸಂಕಷ್ಟಗಳಿಂದ ಚಿತ್ರ ನಿಜವಾಗಿಯೂ. ಪಾರಾಗುತ್ತದೆಯೇ ಎಂದು ಸುದರ್ಶನರು ಯೋಚಿಸಲಾರಂಭಿಸಿದರು.

## ೧೯

ಭಾನುವಾರ ಬೆಳಿಗ್ಗೆ ರಿಹರ್ಸಲ್ ತೊಂದರೆಯಿರಲಿಲ್ಲ. ಚಿನ್ನಪ್ಪನೇ ಬಂದು ಸುದರ್ಶನರನ್ನು ಎಬ್ಬಿಸಿದ. ಕಾಫಿ ಕುಡಿಯುತ್ತ ಕುಳಿತಾಗ ಚಿತ್ರದ ಮುನ್ನಡೆಯ ಬಗ್ಗೆ ತಮಗಿದ್ದ ಅನುಮಾನವನ್ನು ಸುದರ್ಶನರು ಸ್ಪಷ್ಟವಾಗಿ ವ್ಯಕ್ತಗೊಳಿಸಿ.

"ಡೈರೆಕ್ಟರನ್ನು ಗೊತ್ತುಮಾಡಿಕೊಳ್ಳುವುದಕ್ಕೆ ಮುಂಚೆ ನೀವು ಸ್ವಲ್ಪ ಯೋಚಿಸಬೇಕಾಗಿತ್ತು ಚಿನ್ನಪ್ಪನವರೇ" ಎಂದರು.

"ಅದು ನಿಜ ಸ್ವಾಮಿ. ಈ ಡೈರೆಕ್ಟರ್ ಸಿಕ್ಕದಿದ್ದರೆ ಚಿತ್ರದ ಯೋಚನೆ ಕೇವಲ ಯೋಚನೆಯಾಗಿಯೇ ಉಳಿಯುತ್ತಿತ್ತು. ಬಾಬುಗಳ ಹೆಸರನ್ನು ಉಪಯೋಗಿಸಿಕೊಂಡೇ ನಾವು ಮುಂದಡಿಯಿಟ್ಟದ್ದು."

"ಸಾಹುಕಾರರು ನಿಮ್ಮನ್ನು ಸಂಪೂರ್ಣವಾಗಿ ನಂಬಿದ್ದರು."

"ಅವರಿಗೆ ವಂಚನೆ ಮಾಡಬೇಕೆಂದು ನಾನು ಯೋಚಿಸಲಿಲ್ಲ."

"ಛೆ ! ಛೆ ! ವಂಚನೆಯ ಮಾತಲ್ಲ. ನಿಮ್ಮನ್ನು ಆಕ್ಷೇಪಿಸುತ್ತೇನೆಂದು ಭಾವಿಸಬೇಡಿ. ಜವಾಬ್ದಾರಿ ಈಗ ನಮ್ಮೆಲ್ಲರ ಮೇಲೂ ಬಿದ್ದಿದೆ. ನಾಳೆ ಚಿತ್ರದ ಕೆಲಸ ಅರ್ಧಕ್ಕೇ ನಿಂತುಹೋದರೆ ನಮಗೆಲ್ಲಾ ಕೆಟ್ಟ ಹೆಸರು."

"ಎರಡು ದಿನ ಡೈರೆಕ್ಟರ್ ಕೆಲಸ ನೋಡಿದ್ದೀರಿ. ನಿಮ್ಮ ಸ್ಪಷ್ಟವಾದ ಅಭಿಪ್ರಾಯವೇನು ತಿಳಿಸಿ ಸ್ವಾಮಿ."

"ಪಾಪ ! ಡೈರೆಕ್ಟರಿಗೆ ಏನೂ ಅನುಭವವಿಲ್ಲ. ಸ್ವಶಕ್ತಿಯಿಂದ ಒಂದು ಚಿತ್ರ ನಿರ್ವಹಿಸುವುದು ಅವರಿಗೆ ಸಾಧ್ಯವಾಗುತ್ತದೆಂದು ನಾನು ನಂಬಲಾರೆ."

"ಹಾಗಾದರೆ ನಮ್ಮ ಗತಿ ! ಸಾಹುಕಾರರ ಗತಿ ! ಶಿವಾನಂದರು ಒಳ್ಳೇ ಕೈಕೊಟ್ಟರಲ್ಲಾ ?

"ಅವರೂ ನಿಮ್ಮಹಾಗೆ ಮೋಸ ಹೋಗಿರಬಹುದು."

"ಈಗ ಡೈರೆಕ್ಟರನ್ನು ಬದಲಾಯಿಸದಿದ್ದರೆ ಗತ್ಯಂತರವೇ ಇಲ್ಲ."

"ಡೈರೆಕ್ಟರನ್ನು ನಾವು ಬದಲಾಯಿಸಲೆತ್ನಿಸಿದರೆ ಶಾಶ್ವತವಾದ ಅಪಖ್ಯಾತಿ ಬರುತ್ತದೆ. ಸಾಹುಕಾರರಿಗೆ ಆಗದವರು ಚಿತ್ರದ ಮೇಲೆ ಅಪಪ್ರಚಾರ ಮಾಡುವುದಕ್ಕೆ ನಾವೇ ಒಳ್ಳೆಯ ಅಸ್ತಿಭಾರ ಹಾಕಿಕೊಟ್ಟಹಾಗಾಗುತ್ತದೆ."

"ಏನು ಮಾಡಬೇಕು ಹೇಳಿ ಸ್ವಾಮಿ ?"

"ಪ್ರಾಯಶಃ ಇಂದು ರಷ್‌ಪ್ರಿಂಟ್ (Rush print) ಸಿದ್ಧವಾಗುತ್ತದೆಯೆಂದು ಕಾಣುತ್ತದೆ. ಅದನ್ನು ನೋಡಿ ಮುಂದಿನ ದಾರಿ ಯೋಚಿಸೋಣ."

"ಡೈರೆಕ್ಟರಲ್ಲಿ ಬಂಡವಾಳವೇ ಇಲ್ಲದಿದ್ದರೆ ನಾವೇನು ಮಾಡಲುಸಾಧ್ಯ ?"

"ನಿರಾಶರಾಗಬೇಡಿ ಚಿನ್ನಪ್ಪನವರೇ ದಾರಿಯಿದೆ. ಸ್ವಯಂ ಕಲಾವಿದರೂ, ತಂತ್ರಜ್ಞರೂ ಆದ ದೇವಕಿಬೋಸ್, ನಿತಿನ್‌ಬೋಸ್, ಶಾಂತಾರಾಮ್, ಕಿದಾರ್ ಶರ್ಮ ಮೊದಲಾದ ಕೆಲವು ಡೈರೆಕ್ಟರುಗಳನ್ನು ಬಿಟ್ಟರೆ ಉಳಿದವರಿಗೆ ಆ ವಿಷಯ ಗೊತ್ತಿರುವುದು ಅಷ್ಟರಲ್ಲಿಯೇ ಇದೆ. ಕ್ಯಾಮರಾಮನ್, ರಿಕಾರ್ಡಿಂಗ್ ಇಂಜಿನಿಯರ್, ಎಡಿಟರುಗಳ ಆಶ್ರಯದಲ್ಲಿ ಬಹುಮಂದಿ ಡೈರೆಕ್ಟರು ಬದುಕಿಕೊಳ್ಳುತ್ತಾರೆ. ನಾವು ವೆಂಕಟಾಚಲಂ, ಸುಬ್ಬಯ್ಯರ್, ಛಾಯಾಪತಿ ಇವರನ್ನು ಒಳ್ಳೆಯವರನ್ನಾಗಿ ಮಾಡಿಕೊಂಡರೆ ದಡ ಕಾಣಬಹುದೆಂದು ತೋರುತ್ತದೆ. ನಮ್ಮ ಡೈರೆಕ್ಟರು ಪೂರ್ಣ ಸಹಕಾರದೊಂದಿಗೆ ಕೆಲಸ ತೂಗಿಸಬಹುದು."

ಆ ವೇಳೆಗೆ ಕಾಳ ಬಂದು ವೆಂಕಟಾಚಲಂ, ಸುಬ್ಬಯ್ಯರ್ ಬಂದಿರುವುದಾಗಿ ತಿಳಿಸಿದ. 'ಇಲ್ಲಿಗೇ ಅವರನ್ನು ಕರೆದುಕೊಂಡು ಬಾ' ಎಂದು ಸುದರ್ಶನರು ಹೇಳಿದರು. ಚಿನ್ನಪ್ಪನ ಮುಖ ಅರಳಿತು.

"ಶಕುನ ಚೆನ್ನಾಗಿದೆ ಸ್ವಾಮಿ. ನೀವು ಯಾರ ವಿಷಯ ಮಾತನಾಡುತ್ತಿದ್ದಿರೋ ಅವರೇ ಬಂದಿದ್ದಾರೆ."

ವೆಂಕಟಾಚಲಂ, ಸುಬ್ಬಯ್ಯರ್ ಬರಲು ಅವರನ್ನು ಸುದರ್ಶನರು ವಿಶ್ವಾಸಪೂರ್ವಕವಾಗಿ ಸ್ವಾಗತಿಸಿದರು.

ಚಿನ್ನಪ್ಪ ಎದ್ದುಹೋಗಿ ನಾರಾಯಣನ ಕೈಯಲ್ಲಿ ಇಡ್ಡಲಿ, ಪಲ್ಯ, ಚಟ್ಣಿ. ಕಾಫಿ ತೆಗೆಸಿಕೊಂಡು ಬಂದ. ಕಾಳ 'ಗೋಲ್ಡ್‌ಫ್ಲೇಕ್' ಸಿಗರೇಟ್ ಡಬ್ಬ ತಂದಿಟ್ಟ.

ಉಪಾಹಾರ ಮುಗಿದಮೇಲೆ ಸುದರ್ಶನರು

"ನೀವು ಬಂದದ್ದು ಬಹಳ ಸಂತೋಷ. ನಿಮ್ಮನ್ನೆಲ್ಲಾ ಊಟಕ್ಕೆ ಕರೆಯಬೇಕೆಂದು ನಾನೂ ಚಿನ್ನಪ್ಪನವರೂ ಇದೇ ಮಾತನಾಡುತ್ತಿದ್ದೆವು."

"ಆಗಬಹುದು ಸಾರ್. ತುಂಬ ಸಂತೋಷ. ನಿಮ್ಮ ಭಾಷಣ ಕೇಳಿ ತುಂಬ ಸತೋಷವಾಯಿತು. ನಾವೇ ಬಂದು ನಿಮ್ಮ ಪರಿಚಯ ಮಾಡಿ ಕೊಳ್ಳಬೇಕೆಂದಿದ್ದೆವು"

ಎಂದು ಸುಬ್ಬಯ್ಯರ್ ಹೇಳಿದರು. ವೆಂಕಟಾಚಲಂ ಕೈಯಲ್ಲಿ ಹಿಡಿದಿದ್ದ 'ಹಿಂದೂ' ಪತ್ರಿಕೆಯ ಭಾನುವಾರದ ಸಂಚಿಕೆಯನ್ನು ಸುದರ್ಶನರ ಮುಂದಿಟ್ಟು

"ನೀವು ಇಷ್ಟು ದೊಡ್ಡ ಲೇಖಕರೆಂದು ನಮಗೆ ಗೊತ್ತಿರಲಿಲ್ಲ."

"ಸುದರ್ಶನರು ' 'ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾಗಿದ್ದ ತಮ್ಮ 'ಬದುಕಿನ ದಾರಿಯಲ್ಲಿ' ಕಾದಂಬರಿಯ ವಿಮರ್ಶೆ ಓದಿಕೊಂಡು

"ಏನೋ ಬರೆಯುತ್ತಿದ್ದೇನೆ" ಎಂದರು.

" ಸುದರ್ಶನರು ಕನ್ನಡದಲ್ಲಿ ಬಹಳ ದೊಡ್ಡ ಲೇಖಕರು ಸಾರ್. ಈವರೆಗೆ ಹತ್ತು ಹನ್ನೆರಡು ಕಾದಂಬರಿಗಳನ್ನು ಬರೆದಿದ್ದಾರೆ. ಅವರ ಗ್ರಂಥ ಗಳೆಂದರೆ ಕನ್ನಡ ಜನಕ್ಕೆ ಪಂಚಪ್ರಾಣ."

"ನಿಮ್ಮ ಕೃತಿಗಳು ತಮಿಳಿಗೆ ಅನುವಾದವಾಗಿದೆಯೇ ?"

"ಕೆಲವು ಕಥೆಗಳು ಅನುವಾದವಾಗಿ ದಿನಾಸರಿ, ಕಥೈಕ್ಕಡಲ್, ಆನಂದ ವಿಕಟನ್, ಕಲ್ಕಿ, ಕಲೈಮಗಳ್ ಮೊದಲಾದ ಪತ್ರಿಕೆಗಳಲ್ಲಿಯವು ಪ್ರಕಟ ವಾಗಿವೆ."

"ಕಾದಂಬರಿಗಳು."

"ಒಂದು ತಮಿಳಿಗೆ ಅನುವಾದವಾಗಿ 'ದಿನಾಸರಿ' ಪತ್ರಿಕೆಯಲ್ಲಿ ಕ್ರಮಾ ಗತವಾಗಿ ಪ್ರಕಟವಾಯಿತು. ಹೆಸರು 'ರಕ್ತದ ಚಿಲುಮೆ' "

"ಅದನ್ನು ನಾನು ಓದಿದ್ದೇನೆ ಸಾರ್."

ಎಂದು ಸುಬ್ಬಯ್ಯರ್ ಹೇಳಿದರು.

"ನಿಮ್ಮಂಥವರು ಚಿತ್ರ ಪ್ರಪಂಚಕ್ಕೆ ಬಂದುದು ಬಹಳ ಸಂತೋಷಕರವಾದ ಸುದ್ದಿ."

"ಬಂದಿದ್ದೇನೆ. ನೋಡಬೇಕು ನನ್ನ ಹಣೆಯ ಬರಹವೇನಾಗುತ್ತದೆನ್ನುವುದು ಚಿತ್ರ ನಿರ್ಮಾಪಕರಿಗೆ ಉತ್ತಮ ಸಾಹಿತ್ಯ ಬೇಕಿಲ್ಲವಲ್ಲ."

"ತಮಿಳು ಚಿತ್ರ ನಿರ್ಮಾಪಕರನ್ನು ನೋಡಿದರೆ ನೀವು ಏನನ್ನುವಿರೋ? ನಮ್ಮಲ್ಲಿ ಕುಮಾರಸ್ವಾಮಿ, ಚೆಲ್ಲಂ, ಸುಬ್ರಮಣ್ಯಂ, ಷಣ್ಮುಖಸುಂದರಂ, ನಾಡೋಡಿ ಮೊದಲಾದ ಒಳ್ಳೆಯ ಬರೆಹಗಾರರಿದ್ದಾರೆ. ಚಿತ್ರನಿರ್ಮಾಫಕರಿಗೆ ಅವರು ಬೇಕಿಲ್ಲ. ಯಾವನೋ ಮೂರನೆಯ ದರ್ಜೆಯ ಲೇಖಕನನ್ನು ಹಿಡಿಯುತ್ತಾರೆ. ತಾವು ನೋಡಿದ ಯಾವದೋ ಇಂಗ್ಲಿಷ್ ಚಿತ್ರದ ಕಥೆ ಅವನಿಗೆ ಹೇಳಿ ಬರೆಸಿ ಚಿತ್ರಮಾಡುತ್ತಾರೆ. ಈ ಚಿತ್ರರಂಗದಲ್ಲಿ ಕೆಲಸ ಮಾಡುವುದಕ್ಕೇ ನನಗೆ ಇಷ್ಟವಿಲ್ಲ– ಆದರೇನು ಸಾರ್ ಮಾಡಬೇಕು. ಹೊಟ್ಟೆಯ ಪಾಡು."

"ನಮ್ಮ ಸುಬ್ಬಯ್ಯರೂ ಒಳ್ಳೆಯ ಲೇಖಕರು ಸುದರ್ಶನರೇ. ಇವರೂ ಅನೇಕ ಕಥೆಗಳನ್ನು ಬರೆದಿದ್ದಾರೆ"

ಎಂದು ವೆಂಕಟಾಚಲಂ ಹೇಳಿದರು.

"ಹಾಗೇನು ?"

ಎಂದು ಸುದರ್ಶನರು ತಮ್ಮ ಸಂತೋಷ ವ್ಯಕ್ತಗೊಳಿಸಿದರು.

ಸ್ಟೂಡಿಯೋ ತಂತ್ರಜ್ಞರೊಂದಿಗೆ ಸುದರ್ಶನರ ಸ್ನೇಹ ಬೆಳೆಯುತ್ತಿದ್ದುದನ್ನು ಚಿನ್ನಪ್ಪ ನೋಡುತ್ತಾ ಸಂತೋಷಿಸುತ್ತಿದ್ದ.

"ನಮ್ಮ ಲೇಖಕರ ಪರಿಚಯ ನೀವು ಮಾಡಿಕೊಳ್ಳಬೇಕು"

ಎಂದು ಸುಬ್ಬಯ್ಯರು ಹೇಳಿದರು.

"ಅವಶ್ಯಕವಾಗಿ. ಅದು ನನ್ನ ಕರ್ತವ್ಯ. ಸೋದರ ಪ್ರಾಂತ್ಯಗಳ ಸಾಹಿತ್ಯ ಪರಿಚಯ ಮಾಡಿಕೊಳ್ಳಬೇಕಾದುದು ನಮ್ಮ ಧರ್ಮ. ನಮಗೆ ನಾವೇ ಎಂದು ಭಾವಿಯ ಕಪ್ಪೆಯ ಹಾಗೆ ಕುಳಿತಿರುವ ಕಾಲ ಹೋಯಿತು. ನಮ್ಮ ಮೇರೆಗಳನ್ನು ವಿಸ್ತರಿಸಬೇಕು. ಸಾಹಿತ್ಯ ಸೀಮಾತೀತವಾದದ್ದು. ಇದರಲ್ಲಿ ಭಾಷೆ, ಪ್ರಾಂತ್ಯ, ಜಾತಿ, ಮತಗಳ ಪಶ್ನೆಗಳು ಏಳಬಾರದು."

ಸಾಹಿತ್ಯ ಸಂಘದಲ್ಲಿ ನಾನು ಮಿಟಿಂಗ್ ವ್ಯವಸ್ಥೆ ಮಾಡಿ ತಿಳಿಸುತ್ತೇನೆ. ನೀವು ಪುರಸತ್ತು ಮಾಡಿಕೊಂಡು ಬರಬೇಕು."

"ಸಂತೋಷವಾಗಿ ಬರುತ್ತೇನೆ."

ಚಿನ್ನಪ್ಪ ಮೆಲ್ಲನೆ

"ನಮ್ಮ ವಿಷಯ ಸ್ವಲ್ಪ ಪ್ರಸ್ತಾಪಿಸಿ ಸ್ವಾಮಿ."

ಎಂದು ಸೂಚನೆಕೊಟ್ಟ.

"ನಮ್ಮ ಎರಡು ದಿನದ ಕೆಲಸ ನೋಡಿದಿರಾ ವೆಂಕಟಾಚಲಂ-ಸುಬ್ಬಯ್ಯರ್ ?"

"ರಷ್ ನೋಡಿಲ್ಲ. ಈಗ ಸಿದ್ಧವಾಗಿರಬಹುದು."

"ನಿಮ್ಮ ಅಭಿಪ್ರಾಯವೇನು ?"

ವೆಂಕಟಾಚಲಂ ಅನುಮಾನಿಸುತ್ತಿದ್ದುದನ್ನು ಕಂಡು ಸುಬ್ಬಯ್ಯರ್

"ಹೇಳಿ ವೆಂಕಟಾಚಲಂ. ಸುದರ್ಶನರು ಕೈಹಾಕಿರುವ ಕೆಲಸ ಚೆನ್ನಾಗುವಂತೆ ಮಾಡಬೇಕಾದುದು ನಮ್ಮ ಕರ್ತವ್ಯ."

"ನಾನು ತಂತ್ರಜ್ಞನಾಗಿ ಒಂದೆರಡು ಪ್ರಶ್ನೆ ಕೇಳುತ್ತೇನೆ. ನೀವು ಅಸಮಾಧಾನ ಪಟ್ಟುಕೊಳ್ಳಬಾರದು."

"ಅಸಮಾಧಾನವೇಕೆ ? ಕೇಳಿ."

ಈ ಮಾತು ನಮ್ಮಲ್ಲಿಯೇ ಇರಲಿ. ನಮ್ಮ ಯಜಮಾನರ ಕಿವಿಯ ಮೇಲೆ ಬಿದ್ದರೆ ನಮ್ಮ ಸ್ಥಿತಿ ಶೋಚನೀಯವಾಗುತ್ತದೆ."

"ನಿಮ್ಮನ್ನು ನಾವು ತೊಂದರೆಗೆ ಸಿಕ್ಕಿಸುತ್ತೇವೆಯೇ ?"

ಎಂದು ಚಿನ್ನಪ್ಪ ಹೇಳಿದ. ವೆಂಕಟಾಚಲಂ ಯೋಚನೆಮಾಡುತ್ತಾ ಸಾವಕಾಶವಾಗಿ

"ಈ ಡೈರೆಕ್ಟರ್ ಬಾಬುಗಳು ನಿಮಗೆ ಬಹಳ ದಿನದ ಪರಿಚಯವೇ ?"

"ಇಲ್ಲ - ಈಚಿನ ಪರಿಚಯ."

"ಇವರ ಕೆಲಸ ನೀವು ನೋಡಿರುವಿರಾ ?"

"ಇಲ್ಲ. ನಮ್ಮ ಸ್ನೇಹಿತರು ನೋಡಿದ್ದರು. ಅವರೇ ಬಾಬುಗಳನ್ನು ಕರೆದುಕೊಂಡು ಬಂದರು. ಅವರ ವಿಷಯದಲ್ಲಿ ನಿಮ್ಮ ಅಭಿಪ್ರಾಯವೇನು ?"

"ಪಾಪ! ಆತನಿಗೇನೂ ಗೊತ್ತಿಲ್ಲ. ತಿಳಿದವರು ಯಾರೂ ಇಂಥವರನ್ನು ನಂಬಿ ಚಿತ್ರ ಮಾಡುವುದಕ್ಕೆ ಹೊರಡುವುದಿಲ್ಲ. ಎರಡು ದಿನ ಅವರು ಮಾಡಿದ ಡೈರೆಕ್ಷನ್ ನೋಡಿ ನಮ್ಮ ಲೈಟ್ ಹುಡುಗರೂ ನಗುವುದಕ್ಕಾರಂಭಿಸಿದ್ದಾರೆ. ನಿಮ್ಮಲ್ಲಿಯೇ ಯಾರಾದರೂ ಡೈರೆಕ್ಟರ್ ಸಿಕ್ಕುತ್ತಿರಲಿಲ್ಲವೇ-ಬೇರೆಯವರು ಏಕೆ ? ನೀವೇ ಮಾಡಬಹುದಾಗಿತ್ತಲ್ಲ ಸುದರ್ಶನರೇ !"

"ನೀವು ಹೇಳುವುದು ನಿಜ ವೆಂಕಟಾಚಲಂ. ತಮಿಳರಿಗೂ ಕನ್ನಡಿಗರಿಗೂ ಬಹಳ ವ್ಯತ್ಯಾಸವಿದೆ. ನಿಮ್ಮವರ ಯೋಗ್ಯತೆಯಲ್ಲಿ ನಿಮಗೆ ನಂಬಿಕೆ

ಯಿದೆ. ಕನ್ನಡಿಗರಿಗೆ ಹೊರಗಿನವರಲ್ಲಿ ನಂಬಿಕೆಯಿದೆ. ಅದು ಹೋಗಲಿ– ಈಗ ನಮ್ಮ ಚಿತ್ರ ಬದಕುವ ಮಾರ್ಗ ಯಾವದು ?

"ಅದಕ್ಕೊಂದೇ ಮಾರ್ಗ ಸುದರ್ಶನರೇ. ನಿಮ್ಮ ಡೈರೆಕ್ಟರು ವೆಂಕಟಾ ಚಲಂ ಜತೆ ಕುಳಿತುಕೊಂಡು ಪ್ರತಿಯೊಂದು ಸೀಕ್ವೆನ್ಸನ್ನೂ (Sequence) ಅವರ ಜತೆ ಚರ್ಚಿಮಾಡಿ, ಅವರು ಹೇಳಿದಂತೆ ಷಾಟ್ (Shot) ಗಳನ್ನು ನಿರ್ದೇಶಿಸಿಕೊಂಡರೆ ಚಿತ್ರ ಒಂದು ರೂಪಕ್ಕೆ ಬರುತ್ತದೆ. ಅಭಿನಯ, ಸಂಭಾ ಷಣೆ ನೀವೆ ನೋಡಿಕೊಳ್ಳಬೇಕು."

ಎಂದು ಸುಬ್ಬಯ್ಯರ್ ಹೇಳಿದರು.

ಸುದರ್ಶನರು ಮಾತನಾಡಲಿಲ್ಲ.

ಚಿನ್ನಪ್ಪ ವೆಂಕಟಾಚಲಂರನ್ನು ಒಲಿಸಿಕೊಳ್ಳುತ್ತಾ

"ನೀವು ಸ್ವಲ್ಪ ಆಸಕ್ತಿ ವಹಿಸಬೇಕು ಸಾರ್. ನಿಮ್ಮ ಶ್ರಮ ನಿರರ್ಥಕ ವಾಗದಂತೆ ನಾನು ನೋಡಿಕೊಳ್ಳುತ್ತೇನೆ. ನಿಮ್ಮನ್ನು ನಂಬಿಕೊಂಡು ನಾವು ಮದರಾಸಿಗೆ ಬಂದಿದ್ದೇವೆ. ನಮ್ಮನ್ನು ದಡ ಸೇರಿಸುವುದು ನಿಮ್ಮ ಭಾರ."

"ಹಾಗೇ ಆಗಲಿ. ನಮ್ಮ ಕೈಲಾಗುವುದನ್ನು ಅವಶ್ಯ ಮಾಡಿಕೊಡು ತ್ತೇವೆ."

ಎಂದು ವೆಂಕಟಾಚಲಂ ಆಶ್ವಾಸನವಿತ್ತು

"ಎಡಿಟರ್ ಛಾಯಪತಿಗಳನ್ನು ಕಂಡು ಮಾತನಾಡಿ."

ಎಂದರು.

ಚಿನ್ನಪ್ಪ ಅವರಿಬ್ಬರಿಗೂ ಹೃತ್ಪೂರ್ವಕ ಕೃತಜ್ಞತೆಯನ್ನರ್ಪಿಸಿದ. ವೆಂಕಟಾಚಲಂ, ಸುಬ್ಬಯ್ಯರ್ ಅಪ್ಪಣೆ ಪಡೆದು ಸ್ಟೂಡಿಯೋ ಕಡೆಗೆ ಹೊರ ಟರು. ಅವರು ಹೋದ ಮೇಲೆ ಚಿನ್ನಪ್ಪ ಎದ್ದು

ನಾನೂ ಹೋಗಿ ಬರುತ್ತೇನೆ. ರಷ್ ಪ್ರಿಂಟ್ ಸಿದ್ಧವಾಗಿದ್ದರೆ ತಿಳಿಸು ತ್ತೇನೆ. ನೀವೂ ಬಂದುಬಿಡಿ"

ಎಂದು ಹೇಳಿ ಹೋದ.

ಸುದರ್ಶನರಿಗೆ ಸತತವಾಗಿ ಎರಡು ರಾತ್ರಿ ನಿದ್ದೆಯಿರಲಿಲ್ಲ. ತಲೆಯ ಮೇಲೆ ಎಣ್ಣೆಯಿಟ್ಟುಕೊಂಡು ಸ್ನಾನಮಾಡಿ, ಊಟವುಗಿಸಿ ನಿದ್ದೆ ಮಾಡಲೆತ್ನಿ ಸಿದರು. ಪ್ರಯತ್ನ ಸಫಲಿಸಲಿಲ್ಲ. ವೆಂಕಟಾಚಲಂ ಹೇಳಿದ ಮಾತುಗಳು ಗುಂಗಾಡಿಗಳಂತೆ ಬಂದು ಕಿವಿಯಲ್ಲಿ ಮೊರೆಯುತ್ತಿದ್ದವು. ಮನಸ್ಸಿನಲ್ಲಿ ಕಳವಳವೆದ್ದಿತ್ತು.

ಎರಡು ಗಂಟೆಯ ಸುಮಾರಿಗೆ ಕಂಪೆನಿಯ ವ್ಯಾನ್ ತೆಗೆದುಕೊಂಡು ಬಂದ ಡ್ರೈವರ್

"ಈಗಲೇ ಬರಬೇಕಂತೆ ಸಾರ್. ಚಿನ್ನಪ್ಪಾವರು ಹೇಳಿಕಳಿಸಿದ್ದಾರೆ."

ಎಂದ. ಸುದರ್ಶನರು ಮಿಂಚಿನಂತೆದ್ದು ಉಡುಪು ಧರಿಸಿ ಸ್ಟೂಡಿಯೋಕ್ಕೆ ಹೊರಟರು. ಸ್ಟೂಡಿಯೋ ಮನೆಯ ಬಾಗಿಲಲ್ಲಿ ಸಾಹುಕಾರರು, ಚಿನ್ನಪ್ಪ ಇತರರು ಸಿದ್ಧವಾಗಿ ನಿಂತಿದ್ದರು. ಅವರ ಜತೆಗೆ ಸುದರ್ಶನರು ಸ್ಟೂಡಿಯೋಕ್ಕೆ ಹೋದರು.

ಪ್ರೊಜೆಕ್ಷನ್ ರೂಮಿನಲ್ಲಿ (Projection Room) ಕಂಪೆನಿಯವರು ಹೊರತು ಬೇರೆ ಯಾರೂ ಇರಲಿಲ್ಲ.

ಡೈರೆಕ್ಟರಿಗೆ ಹೇಳಿ ಕಳಿಸಬೇಕಾಗಿತ್ತು ಚಿನ್ನಪ್ಪ"

ಎಂದು ಸಾಹುಕಾರರು ಹೇಳಿದರು.

" ಅವರೇ ಸಾಯಂಕಾಲ ಬರಬಹುದು. ಆಗ ಇನ್ನೊಮ್ಮೆ ಹಾಕಿಸಿ ನೋಡಿದರಾಯಿತು."

ಎಂದು ಚಿನ್ನಪ್ಪ ಉತ್ತರವಿತ್ತ.

ಎರಡು ದಿನಗಳ ಕೃತಿ ರಜತಫಲದೆಯ ಮೇಲೆ ರಾರಾಜಿಸಿತು. ೧೧೦೦ ಅಡಿ ತೆಗೆದುದ್ದಾಗಿತ್ತು. ಒಮ್ಮೆ ನೋಡಿದ ಮೇಲೆ ಸುದರ್ಶನರು ಎರಡನೆಯ ಬಾರಿ ನೋಡ ಬಯಸಿದರು. ಎರಡನೆಯ ಬಾರಿ ನೋಡಿದ್ದೂ ಆಯಿತು. ಸಾಹುಕಾರರು

" ಹ್ಯಾಗಿದೆ ಸೋಮಿ." ಎಂದು ಕೇಳಿದರು.

" ಮನೆಗೆ ಹೋಗಿ ಮಾತನಾಡುವ. ಇಲ್ಲಿ ಬೇಡ."

ಎಂದು ಸುದರ್ಶನರು ಹೇಳಿದರು.

ಸಾಹುಕಾರರೊಂದಿಗೆ ಸುದರ್ಶನರು, ಚಿನ್ನಪ್ಪ ಅವರ ರೂಮಿಗೆ ಹೋಗಿ ಕುಳಿತರು. ಸಾಹುಕಾರರು ಆತುರದಿಂದ

" ಪಿಕ್ಚರ್ ಹೇಗಾಗಿದೆ ಸೋಮಿ "

ಎಂದರು. ಸುದರ್ಶನರಿಗೆ ಇಕ್ಕಟ್ಟಿನ ಪರಿಸ್ಥಿತಿಯೊದಗಿತ್ತು. ಇದ್ದ ಸಂಗತಿ ಹೇಳಿದರೆ ಚಿನ್ನಪ್ಪ, ಶಿವಾನಂದ, ಭೂಪೆನ್ ಬಾಬುಯವರನ್ನು ಆಕ್ಷೇಪಿಸಿದಂತಾಗುತ್ತದೆ; ಹೇಳದಿದ್ದರೆ ಸಾಹುಕಾರರಿಗೆ ಅನ್ಯಾಯಮಾಡಿದಂತಾಗುತ್ತದೆ. ಯೋಚನೆ ಮಾಡಿಕೊಂಡು

" ಎರಡು ದಿನಗಳ ಕೆಲಸದಿಂದ ಯಾವದನ್ನು ಖಚಿತವಾಗಿ ಹೇಳಲು ಸಾಧ್ಯ? ಕೆಲವು ಷಾಟ್‌ಗಳು ಚೆನ್ನಾಗಿ ಬಂದಿವೆ. ಕೆಲವನ್ನು ಇನ್ನೊಮ್ಮೆ

ತೆಗೆದುಕೊಳ್ಳಬೇಕಾಗುತ್ತದೆ. ಎಂಟು ಹತ್ತು ದಿನ ಕೆಲಸವಾಗುವವರೆಗೆ ಏನೂ ಹೇಳಲು ಸಾಧ್ಯವಿಲ್ಲ"

"ಡೈರೆಕ್ಟರ್ ಹೆಂಗೆ? ಪರವಾಗಿಲ್ಲವೋ?"

"ಈಗ ಯಾವ ಮಾತೂ ಆಡುವುದು ಸರಿಯಲ್ಲ ಸಾಹುಕಾರರೇ. ಇನ್ನು ಎಂಟು ದಿನ ಕಾಯುವುದು ಒಳ್ಳೆಯದು."

ಅವರು ಮಾತನಾಡುತ್ತ ಕುಳಿತಿರುವಂತೆ ಸ್ಟೂಡಿಯೋ ಆಳು ಬಂದು

"ಸಾಹುಕಾರರನ್ನು ಕರೆದುಕೊಂಡು ಬರಬೇಕೆಂದು ರಾಮಾನುಜಂ ಹೇಳಿ ಕಳಿಸಿದ್ದಾರೆ ಸಾರ್"

ಎಂದ. ಸಾಹುಕಾರರ ಕೈಕಾಲುಗಳು ಸೋತುಬಿದ್ದವು.

"ಯಾಕೆ ಸ್ವಾಮಿ"? ಎಂದರು.

"ಏಕೋ ಏನೋ ಹೋಗಿ ವಿಚಾರಿಸಿಕೊಂಡು ಬನ್ನಿ."

"ಜತೆಯಲ್ಲಿ ನೀವೂ ಬನ್ನಿ."

ಸಾಹುಕಾರರು, ಸುದರ್ಶನರು, ಚಿನ್ನಪ್ಪನೊಂದಿಗೆ ಹೊರಟರು.

ಸ್ಟೂಡಿಯೋ ಆಫೀಸಿನಲ್ಲಿ ರಾಮಾನುಜಂ ಬಾಯಲ್ಲಿ ಸಿಗರೇಟ್ ಕಚ್ಚಿ ಕುಳಿತಿದ್ದರು. ಅವರ ಪಕ್ಕದಲ್ಲಿ ಎಲೆಕ್ಟ್ರಿಕ್ ಫ್ಯಾನ್ ಓಡುತ್ತಿತ್ತು. ಎದುರಿಗೆ ವೆಂಕಟಾಚಲಂ, ಸುಬ್ಬಯ್ಯರ್ ಕುಳಿತಿದ್ದರು. ಆ ದೃಶ್ಯಕಂಡೊಡನೆಯೇ 'ಏನೋ ವಿಚಾರಣೆ ಕಾದಿದೆ' ಎಂದು ಸುದರ್ಶನರು ತಿಳಿದುಕೊಂಡರು. ಎಲ್ಲರೂ ಕುಳಿತುಕೊಂಡ ಮೇಲೆ ರಾಮಾನುಜಂ ಕಾಫಿ ತರಿಸಿಕೊಟ್ಟು

"ನಿಮ್ಮ ಪಿಕ್ಚರ್ ರಷ್ ನೋಡಿದರಂತೆ" ಎಂದರು.

"ಈಗ ತಾನೆ ನೋಡಿ ಹೋದೆವು."

"ನಿಮ್ಮ ಅಭಿಪ್ರಾಯವೇನು?"

ಸಾಹುಕಾರರು ಸುದರ್ಶನರ ಮುಖ ನೋಡಿದರು. ಸುದರ್ಶನರಿಂದಲೂ ಉತ್ತರ ಬರದಿರಲು ರಾಮಾನುಜಂ

"ನಿಮ್ಮ ಡೈರೆಕ್ಟರ್ ಕೆಲಸ ತೃಪ್ತಿಕರವಾಗಿದೆಯೇ ಸುದರ್ಶನರೇ"

"ಎರಡು ದಿವಸಗಳಲ್ಲಿ ಏನು ಹೇಳಲು ಸಾಧ್ಯ ಸರ್."

"ಸಾಧ್ಯವೆಂದು ಕಾಣುತ್ತದೆ. ನಾನೂ ರಷ್ ನೋಡಿದೆ. ನಿಮ್ಮ ಡೈರೆಕ್ಟರ್ ಹುಡುಕಿರುವ ಆ್ಯಂಗಲ್ಸ್ (Angles) ಎಲ್ಲಾ ತಪ್ಪು – ಅವರ ದಿಗ್ದರ್ಶನ ಹೀಗೇ ನಡೆದರೆ ನಮ್ಮ ಸ್ಟೂಡಿಯೋ ಹೆಸರು ಕೆಟ್ಟುಹೋಗುತ್ತದೆ."

ಸಾಹುಕಾರರು ಭೂಮಿಗೆ ಇಳಿದು ಹೋದರು.

" ಈಗಲೂ ನೀವು ಡೈರೆಕ್ಟರನ್ನು ಬದಲಾಯಿಸುವುದು ಒಳ್ಳೆಯದು. ಸರಿಯಾದವರು ನಿಮಗೆ ಸಿಕ್ಕದಿದ್ದರೆ ನಾನು ಹುಡುಕಿ ಕೊಡುತ್ತೇನೆ. ನಮ್ಮ ಸ್ಟೂಡಿಯೋಕ್ಕೆ ಬಂದು ನೀವು ಸೋಲುಚಿತ್ರ ಮಾಡಿಕೊಂಡು ಹೋದರೆ ನಮಗೆ ತುಂಬ ಅಪಮಾನಕರ."

" ನೀವು ವಹಿಸುತ್ತಿರುವ ಆಸಕ್ತಿಗಾಗಿ ತುಂಬ ಉಪಕೃತರಾಗಿದ್ದೇವೆ ರಾಮಾನುಜಂ ಅವರೇ. ಒಂದು ವಾರ ಕಳೆಯಲಿ. ನಮ್ಮ ಚಿತ್ರದ ಮುನ್ನಡೆ ಉತ್ತೇಜಕವಾಗಿಲ್ಲದಿದ್ಧರೆ ನಿಮ್ಮ ಸಲಹೆಯಂತೇ ಮಾಡಬಹುದು. ಈ ಚಿತ್ರ ನಂಬಿಕೊಂಡು ಭೂಪೆನ್ ಬಾಬು ಕಲ್ಕತ್ತೆಯಲ್ಲಿದ್ದ ಕೆಲಸ ಕೂಡ ಬಿಟ್ಟು ಬಂದಿದ್ದಾರೆ. ಅವರನ್ನು ಒಮ್ಮಿಂದೊಮ್ಮೆಲೇ ಹೋಗೆಂದು ಹೇಳುವುದು ನ್ಯಾಯವಲ್ಲ."

" ಯೋಚನೆ ಮಾಡಿನೋಡಿ. ಭೂಪೆನ್ ಬಾಬೂಗೆ ಉಪಕಾರ ಮಾಡುವುದಕ್ಕೆ ಹೋಗಿ ನಿಮ್ಮ ತಲೆಯ ಮೇಲೆ ಕಲ್ಲು ಎತ್ತಿ ಹಾಕಿಕೊಳ್ಳಬೇಡಿ."

" ಆಗಲಿ—ಒಂದು ವಾರ ಅವಕಾಶ ಕೊಡಿ. ನೀವೂ ನಿಮ್ಮ ಸ್ಟೂಡಿಯೋ ತಂತ್ರಜ್ಞರೂ ಪೂರ್ಣ ಸಹಕಾರ ಕೊಟ್ಟರೆ ನಮ್ಮ ಕೆಲಸ ಕೆಡುವುದಿಲ್ಲ."

" ನಿಮ್ಮ ಇಷ್ಟ "

ಎಂದರು.

ಪರೀಕ್ಷೆ ಮುಗಿಸಿಕೊಂಡು ಬಂದ ವಿದ್ಯಾರ್ಥಿಯಂತಾಗಿತ್ತು ಸಾಹುಕಾರರ ಪಾಡು. ರೂಮಿಗೆ ಬಂದು ಮುಖದಲ್ಲಿಳಿಯುತ್ತಿದ್ದ ಬೆವರು ಒರಸಿಕೊಳ್ಳುತ್ತ ಕುಳಿತರು. ಅವರ ಕೋಪಾಗ್ನಿ ನೇತ್ರಗಳು ಚಿನ್ನಪ್ಪನ ಕಡೆ ನೋಟ ನೆಟ್ಟವು.

" ಪಿಕ್ಚರ್ – ಪಿಕ್ಚರ್ – ಬಡಕೊಳ್ಳುತ್ತಿದ್ದೆಯಲ್ಲಾ, ನೋಡಿದೆಯೋ ಹೇಗೆ ಮಾಡಿದ್ದಾನೆ ನಿಮ್ಮ ಡೈರೆಕ್ಟರು. ಅವನು ಹಾಗೆ, ಹೀಗೆ ಎಂದು ನನಗೆ ಹೇಳಿಯೇ ಹೇಳಿದೆ. ನನ್ನ ಮುಳುಗಿಸೋಕೆ ಒಳ್ಳೆ ಏರ್ಪಾಟು ಮಾಡಿದೆ ಬಿಡು. ಹಾಲೆರೆದೋನಿಗೆ ವಿಷವೆರೆದೆ."

" ಏನೂ ಪ್ರಮಾದವಾಗಿಲ್ಲ ಸಾಹುಕಾರರೇ. ನೀವು ಅಧೀರರಾಗಬೇಡಿ. ಚಿನ್ನಪ್ಪನವರು ತ್ರಿಕರಣಪೂರ್ವಕವಾಗಿ ದುಡಿದಿದ್ದಾರೆ. ನಿಮ್ಮ ಶ್ರೇಯಸ್ಸನ್ನಲ್ಲದೆ ಅವರು ಬೇರೆ ಯೋಚನೆ ಮಾಡಿಲ್ಲ."

" ರಾಮಾನುಜಂ ಹೇಳಿದ್ದು ನೀವೇ ಕೇಳಿದಿರಲ್ಲಾ ಸ್ವಾಮಿ "

" ಇನ್ನೊಬ್ಬ ಡೈರೆಕ್ಟರನ್ನು ಹುಡುಕಿ ಕೊಡುವ ವಿಷಯವನ್ನೂ ಅವರು ಹೇಳಿದರು. ನೀವು ಗಮನಿಸಿದಿರೋ ಇಲ್ಲವೋ? "

" ಗಮನಿಸಿದೆ."

" ಸ್ಟುಡಿಯೋದವರ ತಂತ್ರವಿಧಾನವೇ ಹೀಗೆ. ಅವರ ಮಾತು ಕೇಳಿಕೊಂಡು ನಾವು ಸೋತರೆ ನಮ್ಮ ಗತಿ ಮುಗಿದುಹೋಗುತ್ತದೆ."

" ಈ ಬಂಗಾಳಿ ಬಾಬು ನಿಜವಾಗಿ ನಮ್ಮ ಚಿತ್ರ ಮಾಡಬಲ್ಲನೇ? ಇವತ್ತು ನಾವು ನೋಡಿದ ಹಾಗೇ ಚಿತ್ರವಿದ್ದರೆ ಯಾರು ಕಾಸುಕೊಡುತ್ತಾರೆ ಸ್ವಾಮಿ."

" ಚಿತ್ರದ ಬೆಲೆ ಈಗಲೇ ಕಟ್ಟಲು ಸಾಧ್ಯವಿಲ್ಲ ಸಾಹುಕಾರರೇ. ಇನ್ನೂ ಎಡಿಟಿಂಗ್ ಆಗಬೇಕು. ದೃಶ್ಯಗಳ ಜೋಡಣೆಯಾಗಬೇಕು. ಕ್ಲ್ಯಾಪ್ ಸ್ಟಿಕ್ (Clap Stick) ಗಳನ್ನು ಕೂಡ ಕತ್ತರಿಸಿಲ್ಲ. ಸಂಸ್ಕಾರ ವಿಧಿಯೆಲ್ಲಾ ಆದ ಮೇಲೆ ಚಿತ್ರಕ್ಕೆ ಟೆಂಪೋ (Tempo) ಬರುತ್ತದೆ. ಅರೆಗುದಿಯನ್ನೇ ಪಾಕವೆಂದು ತಿಳಿಯಬಾರದು."

" ಅದೆಲ್ಲಾ ಹೋಗಲಿ. ನೀವು ನಿಮ್ಮವರು. ನನ್ನ ಹಿತೈಷಿಗಳು. ದೊಡ್ಡ ವಿದ್ವಾಂಸರು. ಮರೆಮಾಜದೆ ನನ್ನಲ್ಲಿ ನಿಜಸ್ಥಿತಿ ಹೇಳುವಿರಾ ಸ್ವಾಮಿ."

" ಏನು ಕೇಳಿ ? "

" ಈ ಡೈರೆಕ್ಟರ್ ಕೈಯಿಂದ ಚಿತ್ರ ಮಾಡುವುದು ಸಾಧ್ಯವೇ ? "

" ಭೂಪೆನ್ ಬಾಬುಗಳು ಬುದ್ಧಿವಂತರು. ಅವರಿಗೆ ಕೆಲಸವೂ ಗೊತ್ತಿದೆ. ಅನುಭವ ಸಾಲದು. ಒಂದೆರಡು ದಿನಗಳಲ್ಲಿ ಕುದುರಿಕೊಳ್ಳುತ್ತಾರೆ. ಸ್ಟುಡಿಯೋ ತಂತ್ರಜ್ಞರನ್ನು ನಾವು ಕೈಯಲ್ಲಿಟ್ಟುಕೊಂಡರೆ ಕೆಲಸ ಸುಲಭ ಸಾಧ್ಯವಾಗುತ್ತದೆ. ಕ್ಯಾಮರಾಮನ್ ವೆಂಕಟಾಚಲಂ, ರಿಕಾರ್ಡಿಂಗ್ ಇಂಜನಿಯರ್ ಸುಬ್ಬಯ್ಯರ್, ಎಡಿಟರ್ ಛಾಯಾಪತಿ, ಲ್ಯಾಬೊರೇಟರಿ ಚೀಫ್ ಚಂದ್ರಶೇಖರನ್, ಪ್ರೊಡಕ್ಷನ್ ಮ್ಯಾನೇಜರ್ ವಿಶ್ವನಾಥಂ, ಆರ್ಟ್ ಡೈರೆಕ್ಟರ್ ಬಾಲಮೂರ್ತಿ – ಈ ಆರು ಜನಗಳನ್ನೂ ಒಳ್ಳೆಯವರನ್ನಾಗಿ ಮಾಡಿಕೊಂಡರೆ ನಾವು ಕೆಡುವುದಿಲ್ಲ. ಇದಕ್ಕಾಗಿ ಸಾವಿರಾರು ರೂಪಾಯಿ ಖರ್ಚಾದರೂ ನೀವು ಯೋಚನೆ ಮಾಡಬಾರದು."

" ನೀವು ಹೇಗೆ ಹೇಳಿದರೆ ಹಾಗೆ ಮಾಡುತ್ತೇನೆ ಸ್ವಾಮಿ. ನಾನು ದಿವಾಳಿ ತೆಗೆಯದ ಹಾಗೆ ಕಾಪಾಡಿ "

ಎಂದರು. ಸಾಹುಕಾರರ ದೈನ್ಯಾವಸ್ಥೆ ನೋಡಿ ಸುದರ್ಶನರ ಮನಸ್ಸಿಗೆ ವಿಷಾದವುಂಟಾಯಿತು. ಹೊರಡಲನುವಾಗಿ

" ನಾನು ಡೈರೆಕ್ಟರನ್ನು ನೋಡಿಕೊಂಡು ಬರುತ್ತೇನೆ."

" ಮುಂದಿನ ಷೂಟಿಂಗ್ ಯಾವಾಗ ಇಟ್ಟುಕೊಳ್ಳುತ್ತೀರಿ ಸ್ವಾಮಿ."

"ಒಂದೆರಡು ದಿನ ಬಿಟ್ಟು ಇಟ್ಟುಕೊಳ್ಳುವುದು ಒಳ್ಳೆಯದೆಂದು ಕಾಣು ತ್ತದೆ ಬುಧವಾರದಿಂದ ಕ್ರಮವಾಗಿ ಕೆಲಸ ಮಾಡಿಕೊಂಡು ಹೋಗೋಣ. ಆ ವೇಳೆಗೆ ಸರಿಯಾದ ವ್ಯವಸ್ಥೆ ಮಾಡಿಕೊಳ್ಳಲು ನಮಗೂ ಅನುಕೂಲ ವಾಗುತ್ತದೆ."

"ನಿಮಗೆ ಹೇಗೆ ಸೂಕ್ತವೋ ಹಾಗೆ ಮಾಡಿ. ಕಾರು ತೆಗೆದುಕೊಂಡು ಹೋಗಿ."

ಸುದರ್ಶನರು ಜತೆಗೆ ಚಿನ್ನಪ್ಪನನ್ನೂ ಕರೆದುಕೊಂಡು 'ಎಂಬಾಸಿ ಹೊಟೇಲಿ'ಗೆ ಹೋದರು.

ಹೊಟೇಲಿನ ಮಹಡಿಯ ಮೇಲೆ ಕೊನೆಯ ರೂಮು ಭೂಪೇನ್ ಬಾಬು ಗಳದ್ದಾಗಿತ್ತು. ರೂಮಿನ ಮುಂದಿದ್ದ ವೆರಾಂಡದಲ್ಲಿದ್ದ ಸ್ಕ್ರೀನಿನ ಮರೆಯಲ್ಲಿ ಡೈರೆಕ್ಟರು ತಮ್ಮ ಆಫೀಸ್ ಮಾಡಿಕೊಂಡಿದ್ದರು.

ಸುದರ್ಶನರು, ಚಿನ್ನಪ್ಪ ಹೊಟೇಲಿಗೆ ಹೋದಾಗ ಡೈರೆಕ್ಟರು ಇರಲಿಲ್ಲ. ರಾಜಣ್ಣ ಅವರನ್ನು ಬರಮಾಡಿಕೊಂಡು

"ರೂಮು ಬಾಗಿಲು ತೆಗೆಯುತ್ತೇನೆ. ಒಳಗೆ ಕುಳಿತುಕೊಳ್ಳಿ" ಎಂದ.

"ಏನೂ ಬೇಡ – ಇಲ್ಲೇ ತಣ್ಣಗಿದೆ"

ಎಂದು ಸುದರ್ಶನರು ವೆರಾಂಡದಲ್ಲಿಯೇ ಕುಳಿತರು. ಚಿನ್ನಪ್ಪ ಕೇಳಿದ

"ಎಲ್ಲಯ್ಯ ನಿನ್ನ ಡೈರೆಕ್ಟರ್ ಸಾಹೇಬರು."

"ಮಧ್ಯಾಹ್ನವೇ ಎಲ್ಲಿಗೋ ಹೋದರು. ಇನ್ನೇನು ಬರುವ ಸಮಯ."

ಬೇಸರ ಪರಿಹಾರಕ್ಕೆ ರಾಜಣ್ಣ ಕೆಲವು 'ಲೈಫ್ ಇಂಟರ್ ನ್ಯಾಷ ನಲ್' – 'ರೀಡರ್ಸ್ ಡೈಜೆಸ್ಟ್' – ಇಲ್ಲಸ್ಟ್ರೇಟೆಡ್ ವೀಕ್ಲಿ' – ಪತ್ರಿಕೆಗಳ ಹಳೆಯ ಸಂಚಿಕೆಗಳನ್ನು ತಂದಿತ್ತ. ಚಿನ್ನಪ್ಪ ಅವುಗಳಲ್ಲಿನ ಬೊಂಬೆಗಳನ್ನು ನೋಡುತ್ತ ಕುಳಿತ. ಸುದರ್ಶನರು ಲೇಖನಗಳನ್ನು ಓದುತ್ತ ಕುಳಿತರು.

ಏಳು ಗಂಟೆಯ ಸುಮಾರಿಗೆ ಭೂಪೇನ್ ಬಾಬುಗಳ ಸವಾರಿ ಚಿತ್ತೈ ಸಿತು. ಚಿನ್ನಪ್ಪ, ಸುದರ್ಶನರ ಮುಖ ಕಂಡಕೂಡಲೇ ಅವರು ಉತ್ಸಾಹ ದಿಂದ ಸ್ವಾಗತ ಬಯಸಿ

"ಬಾಗಿಲು ತೆಗೆದು ಒಳಗೆ ಕೂಡಿಸಬಾರದಾಗಿತ್ತೇ ರಾಜಣ್ಣ."

"ಒಳಗೆ ಕೂಡಲು ಹೇಳಿದೆ ಸಾರ್. ತಣ್ಣಗಿದೆ ಇಲ್ಲೇ ಕೂಡು ತ್ತೇವೆಂದರು."

"ಹೋಗಿ ಚಹಮಾಡಿಸಿ, ಜತೆಯಲ್ಲಿ ಬಿಸ್ಕತ್ತು, ಕೇಕ್ಸ್ ತೆಗೆಸಿ ಕೊಂಡು ಬಾ"

ಎಂದು ಚಿನ್ನಪ್ಪ, ಸುದರ್ಶನರನ್ನು ಒಳಕ್ಕೆ ಕರೆದುಕೊಂಡು ಹೋದರು.

" ನೀವು ಬಂದು ಬಹಳ ಹೊತ್ತಾಯಿತೇ ? "

" ಬಹಳವೇನಿಲ್ಲ – ಎರಡು ಗಂಟೆಗಳಾಗಿರಬಹುದು." ಎಂದು ಚಿನ್ನಪ್ಪ ನುಡಿದ.

" ತುಂಬಾ ಕಾಯಿಸಿದೆ ಕ್ಷಮಿಸಿ – ಏನು ಸಮಾಚಾರ ? "

" ಸಮಾಚಾರ ಕೇಳುವುದಕ್ಕೆ ನಿಮಗೆ ವ್ಯವಧಾನವಿದೆಯೇ ? "

" ವ್ಯವಧಾನವಿಲ್ಲದೆ ಏನು."

" ಬುದ್ಧಿ ಸ್ಥಿಮಿತವಾಗಿದೆಯೇ ? "

ಭೂಪೆನ್ ಬಾಬು ಗಹಗಹಿಸಿ ನಕ್ಕು

" ಇಷ್ಟಕ್ಕೆಲ್ಲಾ ಬುದ್ಧಿ ಕೆಡುವುದಿಲ್ಲ ಚಿನ್ನಪ್ಪನವರೇ, ನಾನು ತೆಗೆದು ಕೊಂಡಿರುವುದೆಲ್ಲಾ ಎರಡು ಪೆಗ್ ವಿಸ್ಕಿ."

" ಮದರಾಸಿನಲ್ಲಿ ಪಾನನಿರೋಧ (Prohibition) ಇದೆಯೆಂದು ಕೇಳಿದ್ದೆ "

ಎಂದು ಸುದರ್ಶನರು ಸೂಚಿಸಿದರು.

" ಇರುವವರಿಗೆ ಇದೆ. ಇಲ್ಲದವರಿಗೆ ಇಲ್ಲ."

" ನಿಮಗೆ ಕುಡಿಯುವ ಅಭ್ಯಾಸವಿಲ್ಲವೆಂದು ತಿಳಿದಿದ್ದೆ."

ಎಂದು ಸುದರ್ಶನರು ಹೇಳಿದರು.

" ಅಭ್ಯಾಸವಿಲ್ಲ. ಜೊಗೆನ್ ಬಲವಂತ ಮಾಡಿದ. ಅವನ ಮನೆ ಯಲ್ಲಿ ಒಂದು ಪಾರ್ಟಿಯಿತ್ತು. ಪಾರ್ಟಿಯಲ್ಲಿ ನಾನೊಬ್ಬ ಕರಿಕುರಿ (Black Sheep) ಆಗಬಾರದೆಂದು ಸ್ವಲ್ಪ ಸ್ವೀಕರಿಸಿದೆ."

ರಾಜಣ್ಣ ಹೊಟೇಲ್ ಬಾಯ್ ಕೈಯಲ್ಲಿ ಚಾಹಾ, ಕೇಕ್ಸ್, ಬಿಸ್ಕತ್ತು ತೆಗೆಸಿಕೊಂಡು ಬಂದ. ಉಪಾಹಾರ ಮುಗಿದ ಮೇಲೆ ಬಾಬು ರಾಜಣ್ಣನಿಗೆ

" ನೀನು ಹೊರಗೇ ಇರು ರಾಜಣ್ಣ, ಯಾರನ್ನೂ ಒಳಗೆ ಬಿಡಬೇಡ. ಬಾಗಿಲುಹಾಕಿಕೊಂಡು ಹೋಗು "

ಎಂದು ಆಜ್ಞೆ ವಿಧಿಸಿ ಅತಿಥಿಗಳ ಕಡೆ ತಿರುಗಿ

" ಹೇಳಿ – ನೀವು ಬಂದ ಸಮಾಚಾರವೇನು ? "

ಸುದರ್ಶನರು ಚಿನ್ನಪ್ಪನ ಕಡೆ ನೋಡಿದರು. ಚಿನ್ನಪ್ಪ ಆರಂಭಿಸಿದ

" ಬಾಬುಗಳೇ, ನಾವೆಲ್ಲಾ ಮದರಾಸಿಗೆ ಬಂದಿರುವುದು ಏಕೆಗೊತ್ತೇ?"

" ಪಿಕ್ಚರ್ ಮಾಡೋದಿಕ್ಕೆ."

"ಈ ಪಿಕ್ಚರ್ ಮೇಲೆ ನಮ್ಮೆಲ್ಲರ ಭವಿಷ್ಯ, ಸಾಹುಕಾರರ ಬದುಕು ಸಾವು ನಿಂತಿದೆಯೆನ್ನುವುದು ನಿಮಗೆ ಗೊತ್ತಿರಬೇಕು"

"ಅದರಲ್ಲಿ ಸಂದೇಹವೇನು? ಈಗೇನಾಯಿತು."

"ಎಲ್ಲಾ ನೀರಿನಲ್ಲಿ ಹೋಮಮಾಡಿದಂತಾಯಿತು. ನಾವು ಈ ಮಧ್ಯಾನ ರಷ್ ನೋಡಿದೆವು."

"ಹೇಗಾಗಿದೆ?"

"ಸುದರ್ಶನರನ್ನು ಕೇಳಿ"

"ತುಂಬ ನಿರಾಶಾಜನಕವಾಗಿದೆ ಬಾಬು. ರಾಮಾನುಜಂ ಸಾಹುಕಾರರನ್ನು ಆಫೀಸಿಗೆ ಕರೆಸಿಕೊಂಡು ತುಂಬ ಆಕ್ಷೇಪಿಸಿದರು. ನಿಮ್ಮನ್ನು ಕೆಲಸದಿಂದ ನಿವೃತ್ತಿಗೊಳಿಸಿ ಬೇರೆ ಡೈರೆಕ್ಟರನ್ನು ಇಟ್ಟುಕೊಳ್ಳಬೇಕೆಂದು ಸಲಹೆಯಿತ್ತರು."

"ಮದರಾಸಿ ಬದ್ಮಾಷ್. ಅವನನ್ನು ಖೂನಿಮಾಡಿಬಿಡುತ್ತೇನೆ."

"ಒರಟು ಮಾತಿನಿಂದ ಏನೂ ಪ್ರಯೋಜನವಿಲ್ಲ ಬಾಬು."

"ಕತ್ತೆಗೇನು ಗೊತ್ತು ಕಸ್ತೂರಿಯ ಪರಿಮಳ. ನನ್ನ ಟೆಕ್ನಿಕ್ (Technique) ಈ ಮದರಾಸಿಗೆ ಹೇಗೆ ಅರ್ಥವಾಗಬೇಕು. ಮಾಂಟಾಜ್ (Montage) ಹೆಸರನ್ನಾದರೂ ರಾಮಾನುಜಂ ಕೇಳಿದ್ದಾನೆಯೇ?"

"ಬಾಬು, ರಾಮಾನುಜಂ ಆಗಲಿ, ನಾವಾಗಲಿ ತೀರ ದಡ್ಡರಲ್ಲ. ನೀವು ಮಾಂಟಾಜ್ ಎಂದು ದೊಡ್ಡ ಹೆಸರನ್ನು ಹೇಳಿ ನಮ್ಮನ್ನು ಬೆದರಿಸುವುದಕ್ಕಾಗುವುದಿಲ್ಲ. ಇದೇ ರೀತಿಯಲ್ಲಿ ಚಿತ್ರ ಮುಂದುವರಿದರೆ ಸಾಹುಕಾರರು ದಿವಾಳಿ ತೆಗೆಯಬೇಕಾಗುತ್ತದೆ."

"ನೀವೂ ಮದರಾಸಿಗಳ ಗುಂಪು ಸೇರಿಕೊಂಡು ಬಿಟ್ಟಿರೇನು? ನಾನು ನಿಮ್ಮಲ್ಲಿ ತುಂಬ ನಂಬಿಕೆಯನ್ನಿಟ್ಟಿದ್ದೆ."

"ನಾನೂ ಅಷ್ಟೇ ನಂಬಿಕೆಯನ್ನಿಟ್ಟಿದ್ದೆ....ಗೌರವವನ್ನೂ ಇಟ್ಟಿದ್ದೆ. ಎರಡನ್ನೂ ನೀವೇ ಹಾಳು ಮಾಡಿಕೊಳ್ಳುತ್ತಿರುವಿರಿ. ನಿಮ್ಮ ಭೋಗ, ವಿಲಾಸಕ್ಕೆ ಸಾಹುಕಾರರನ್ನು ಬಲಿಕೊಡಲು ನಾನು ಸಿದ್ಧವಾಗಿಲ್ಲ. ಆತ ನಮಗೆ ಅನ್ನವಿಟ್ಟಿದ್ದಾನೆ. ಅದಕ್ಕೆ ಪ್ರತಿಯಾಗಿ, ವಿಷವುಣಿಸಲು ನಾನು ಒಪ್ಪುವುದಿಲ್ಲ. ನಿಮ್ಮ ನಡತೆ ತೃಪ್ತಿಕರವಾಗಿದೆಯೆಂದು ಯಾರೂ ಹೇಳಲು ಸಾಧ್ಯವಿಲ್ಲ."

ಗೌರೀಶಂಕರದ ಮೇಲೆ ಕುಳಿತಿದ್ದ ಭೂಪೆನ್ ಬಾಬುಗಳು ಒಂದೇ ಕ್ಷಣದಲ್ಲಿ ಪಾತಾಳಕ್ಕಿಳಿದು ಹೋದರು.

" ಇದೇನು ಸುದರ್ಶನ್‌ಜೀ, ನೀವೂ ನನ್ನ ಮೇಲೆ ಇಷ್ಟು ಕೋಪ ಮಾಡಿಕೊಂಡಿರುವಿರಿ ? "

" ಕೋಪಮಾಡಿಕೊಳ್ಳುವುದಕ್ಕೆ ಕಾರಣವಿವೆ ಬಾಬೂ. ಎಲ್ಲವನ್ನೂ ಬಿಡಿಸಿ ಹೇಳಲೇನು ? "

" ಹೇಳಿ."

" ದಿಗ್ದರ್ಶನದಲ್ಲಿ ನೀವು ತುಂಬ ನಿಪುಣರೆಂಬ ತಪ್ಪು ಅಭಿಪ್ರಾಯವನ್ನು ಕಲ್ಪನೆಮಾಡಿದಿರಿ. ನಿಮ್ಮ ಮಾತು ನಂಬಿಕೊಂಡ ಶಿವಾನಂದರು, ಚಿನ್ನಪ್ಪನವರು ಸಾಹುಕಾರರ ಮನವೊಲಿಸಿ ಈ ಚಿತ್ರನಿರ್ಮಾಣಕ್ಕೆ ಅವರನ್ನು ಎಳೆದರು. ಚಿತ್ರ ದಿಗ್ದರ್ಶನ ನಿಮಗೆಷ್ಟು ಗೊತ್ತಿದೆಯೆನ್ನುವುದು ಈಗ ಎಲ್ಲರಿಗೂ ಸ್ಪಷ್ಟವಾಗಿ ಗೊತ್ತಾಗಿದೆ. ನಿಮ್ಮ ದಿಗ್ದರ್ಶನದ ವಿಷಯ ಸ್ಟೂಡಿಯೋದಲ್ಲಿ ಹಾಸ್ಯದ ಮಾತಾಗಿದೆ. ದಕ್ಷಿಣದ ಈ ಜನ ತೀರ ಪೆದ್ದರು – ನಾವು ಏನು ಮಾಡಿದರೂ ನಡೆಯುತ್ತೆ ಎಂದು ನೀವು ಭಾವಿಸಿಕೊಂಡ ಹಾಗೆ ಕಾಣುತ್ತದೆ. ಆ ಅಭಿಪ್ರಾಯ ಬಿಟ್ಟುಬಿಡಿ. ಇಲ್ಲಿಯವರು ಘಟಾನುಘಟಿಗಳು. ಬೆರಳು ತೋರಿದರೆ ಹಸ್ತ ನುಂಗಬಲ್ಲರು. ಹೊರಗಿನಿಂದ ಬರುವ ನಮ್ಮ ಕೆಲಸ, ಸಾಮರ್ಥ್ಯವನ್ನು ಕುತೂಹಲದಿಂದ, ತಿರಸ್ಕಾರದಿಂದ ನೋಡುತ್ತಿರುತ್ತಾರೆ. ನಾವೂ ಕೆಲಸದಲ್ಲಿ ದಕ್ಷರೆಂದು ತೋರಿಸಿಕೊಂಡರೇ ಇವರ ಗೌರವ ಗಳಿಸುವುದು ಸಾಧ್ಯ. ಮೊನ್ನೆ ಷೂಟಿಂಗ್ ಆದ ಮೇಲೆ ನೀವು ಆ ಕಡೆ ಸುಳಿದಿಲ್ಲ. ರಷ್‌ಪ್ರಿಂಟ್ ನೋಡುವುದಕ್ಕೂ ಬರಲಿಲ್ಲ. ನಿಮ್ಮ ಚಿತ್ರ ನೀವೇ ನೋಡಿ – ಟೆಂಪೋ ಎಷ್ಟರಮಟ್ಟಿಗೆ ಬಂದಿದೆಯೆನ್ನುವುದನ್ನು ನೀವೇ ವಿಮರ್ಶೆ ಮಾಡಿ ಹೇಳಿ. ಬಾಬೂ – ನಾನು ಖಂಡಿತವಾಗಿ ಮಾತನಾಡುತ್ತೇನೆಂದು ನಿಮಗೆ ಅಸಮಾಧಾನವಾಗಬಹುದು. ಆದರೂ ಹೇಳುತ್ತೇನೆ. ನೀವು ಸರಿಯಾದ ದಾರಿಯಲ್ಲಿ ಹೋಗುತ್ತಿಲ್ಲ. ಚಿತ್ರದ ಶ್ರೇಯಸ್ಸಿಗಾಗಿ ನಾವು ನಮ್ಮ ಸುಖ ಸಂತೋಷಗಳನ್ನು ಮರೆಯಬೇಕು. ನಮ್ಮನ್ನು ನಂಬಿಕೊಂಡಿರುವ ಸಾಹುಕಾರರ ತಲೆಯ ಮೇಲೆ ಕಲ್ಲೆತ್ತಿ ಹಾಕಬಾರದು."

" ಸಾಹುಕಾರರು ಏನು ಹೇಳಿದರು ? "

" ಯಾವ ವಿಷಯ."

" ಬೇರೆ ಡೈರೆಕ್ಟರನ್ನು ಗೊತ್ತು ಮಾಡುವ ವಿಷಯ."

" ಅದನ್ನು ನಮಗೊಪ್ಪಿಸಿದ್ದಾರೆ."

" ನೀವೇನು ಹೇಳುವಿರಿ."

" ನಾನು ನಿಮ್ಮಲ್ಲಿ ನಂಬಿಕೆ ಕಳೆದುಕೊಂಡಿಲ್ಲ."

" ನನ್ನ ಕೆಲಸ ಸಮರ್ಪಕವಾಗಿಲ್ಲವೆಂದು ನೀವೇ ಹೇಳಿದಿರಿ."

" ಇನ್ನೊನ್ಮೆ ಬೇಕಾದರೆ ಅದೇ ಮಾತು ಹೇಳುತ್ತೇನೆ. ಆದರೆ ಅದನ್ನು ಸಮರ್ಪಕ ಮಾಡಲು ಸಾಧ್ಯ."

" ಹೇಗೆ ಸಾಧ್ಯ."

" ಸ್ಟೂಡಿಯೋ ತಂತ್ರಜ್ಞರು ನಿಪುಣರು. ವೆಂಕಟಾಚಲಂ ಕ್ರ್ಯಾಂಕ್ (Crank) ಮಾಡಿದ ಕೆಲವು ಚಿತ್ರಗಳನ್ನು ನಾನು ನೋಡಿದ್ದೇನೆ. ಸುಬ್ಬಯ್ಯರ್ ವಿದ್ಯಾವಂತರು, ಸುಸಂಸ್ಕೃತರು. ಅವರ ಪೂರ್ಣ ಸಹಕಾರ ತೆಗೆದುಕೊಂಡರೆ ನಾವು ಚಿತ್ರವನ್ನು ಯಶಸ್ವಿ ಮಾಡಬಹುದು. ಯಾವ ಪುಣ್ಯಫಲದಿಂದಲೋ ಸಾಹಿತಿಯೆನ್ನುವ ಕಾರಣಕ್ಕಾಗಿ ವೆಂಕಟಾಚಲಂ, ಸುಬ್ಬಯ್ಯರ್ ನನ್ನ ವಿಷಯದಲ್ಲಿ ವಿಶ್ವಾಸಿಗಳಾಗಿದ್ದಾರೆ. ನಮಗೆ ಶಕ್ತಿ ಮೀರಿ ಸಹಾಯ ಮಾಡಲೊಪ್ಪಿದ್ದಾರೆ. ನೀವು ಅವರ ವಿಶ್ವಾಸ ಸಂಪಾದಿಸಿಕೊಂಡು ಕೆಲಸ ಮುಂದುವರಿಸಬೇಕು."

" ಸುದರ್ಶನ್‌ಜೀ, ನೀವು ನನ್ನ ಕೈಬಿಡುವುದಿಲ್ಲವೇ ? "

" ನಮ್ಮ ಅತಿಥಿಯಾಗಿ ಬಂದಿರುವ ನಿಮ್ಮ ಕೈ ನಾನು ಬಿಡುತ್ತೇನೆಯೇ? ನಿಮ್ಮ ಕೈಯಲ್ಲೇ ಈ ಕೆಲಸ ಚೆನ್ನಾಗುವಂತೆ ಮಾಡಿಸಬೇಕೆಂಬುದೇ ನನ್ನ ಆಶಯ. ನೀವೂ ಚಿಕ್ಕವರು–ಎಲ್ಲ ಲೋಭ ಮೋಹಗಳನ್ನೂ ಬಿಟ್ಟು ತ್ರಿಕರಣ ಪೂರ್ವಕವಾಗಿ ಕೆಲಸಕ್ಕೆ ಮನಸ್ಸು ಹಾಕಿ. ಶ್ರದ್ಧೆ ಯೋಗ್ಯತೆಯನ್ನೂ ತಂದುಕೊಡುತ್ತದೆ."

ಭೂಪೇನ್ ಬಾಬುಗಳ ಹೃದಯ ಕೃತಜ್ಞತೆಯಿಂದ ತುಂಬಿತು. ಅವರ ಕಣ್ಣುಗಳಿಂದ ಹನಿಗಳುದುರಿದವು. ಸುದರ್ಶನರು ಎರಡು ಕೈಗಳನ್ನೂ ಹಿಡಿದು

" ಸುದರ್ಶನ್‌ಜೀ, ನನ್ನ ಅಪರಾಧ ಕ್ಷಮಿಸಿ. ನೀವೇ ನನ್ನ ಗುರುಗಳು. ನೀವು ಹೇಳಿದಂತೆ ಕೆಲಸ ಮಾಡಿಕೊಂಡು ಹೋಗುತ್ತೇನೆ."

ಎಂದರು.

ಸುದರ್ಶನರು ಬಾಬುಗಳನ್ನು ನೇವರಿಸಿ, ಸಂತೈಸಿ ಚಿನ್ನಪ್ಪನೊಂದಿಗೆ ಹೊರಡುತ್ತಾ

" ಬೆಳಿಗ್ಗೆ ಕಂಪೆನಿ ಮನೆಗೇ ಬನ್ನಿ. ಅಲ್ಲಿಗೇ ನಾನು ವೆಂಕಟಾಚಲಂ, ಸುಬ್ಬಯ್ಯರ್ ಅವರನ್ನು ಬರಮಾಡಿರುತ್ತೇನೆ "

ಎಂದು ಹೇಳಿದರು. ಬಾಬು ಅವರೊಂದಿಗೆ ಕಾರಿನವರೆಗೆ ಬಂದು ಅವರು ಹೊರಟ ಮೇಲೆ ರೂಮು ಸೇರಿದರು,

## ೨೦

ಬೆಳಿಗ್ಗೆ ಎಂಟು ಗಂಟೆಗೇ ಚಿನ್ನಪ್ಪ ಸಾಹುಕಾರರನ್ನು ಕರೆದುಕೊಂಡು ಕಂಪೆನಿ ಮನೆಗೆ ಬಂದ. ಸ್ವಲ್ಪ ಹೊತ್ತಿನೊಳಗಾಗಿ ಡೈರೆಕ್ಟರ್ ಸಾಹೇಬರ ಸವಾರಿ ಚಿತ್ತೈಸಿತು. ಡೈರೆಕ್ಟರನ್ನು ಸ್ಟೂಡಿಯೋಕ್ಕೆ ಕರೆದುಕೊಂಡು ಹೋಗಿ 'ರಷ್‌ಪ್ರಿಂಟ್' ತೋರಿಸಿಕೊಂಡು ಬರುವಂತೆ ಸುದರ್ಶನರು ಹೇಳಿದರು. ಅವರು ಹೋದ ಮೇಲೆ ಸಾಹುಕಾರರು ಬಂದು ಸುದರ್ಶನರ ರೂಮಿನಲ್ಲಿ ಕುಳಿತರು. ಹಿಂದಿನ ರಾತ್ರಿ ಸುದರ್ಶನರಿಗೂ, ಭೂಪೆನ್ ಬಾಬುಗಳಿಗೂ ಆಗಿದ್ದ ಸಂಭಾಷಣೆಯನ್ನು ಚಿನ್ನಪ್ಪ ಚಾ-ಚೂ ಬಿಡದೆ ಸಾಹುಕಾರರಿಗೆ ವರದಿಯೊಪ್ಪಿಸಿದ್ದ. ಅದನ್ನು ಕೇಳಿ ಸಾಹುಕಾರರಿಗೆ ಆನಂದ ಉಕ್ಕಿ ಬಂದಿತ್ತು.

"ನಿಮ್ಮ ಉಪಕಾರ ನಾನು ಜಲ್ಮಜಲ್ಮಾಂತರಕ್ಕೂ ಮರೆಯಲಾರೆ ಸೋಮಿ."

"ಉಪಕಾರವೇನು ಬಂತು ಸಾಹುಕಾರರೇ."

"ಡೈರೆಕ್ಟರಿಗೆ ನೀವು ಹೇಳಿದ ಬುದ್ಧಿ ಮಾತು ಕೇಳಿ ಸಂತೋಷವಾಯಿತು."

"ಚಿನ್ನಪ್ಪ ಎಲ್ಲಾ ಹೇಳಿಬಿಟ್ಟಿದ್ದಾರೆ."

"ಹೊಳೆ ಒಳಗಂತೂ ಇಳಿದುಬಿಟ್ಟಿದ್ದೀವಿ. ನಮ್ಮನ್ನು ಮುಳುಗಿಸುವುದೂ ತೇಲಿಸುವುದೂ ನಿಮ್ಮಭಾರ."

"ಇದೇನು ಸಾಹುಕಾರರೇ ನನಗೆ ಉಪಚಾರ ಹೇಳುತ್ತಾ ಇದ್ದೀರಲ್ಲಾ. ನೀವು ವಿಶ್ವಾಸವಿಟ್ಟು ನನ್ನ ಕೈಯಲ್ಲಿ 'ಚಿತ್ರ-ನಾಟಕ' ಬರೆಯಿಸಿ ನನಗೆ ದುಡ್ಡುಕೊಟ್ಟಿರುವಾಗ ನನ್ನ ಕರ್ತವ್ಯ ನಾನು ಪೂರೈಸದಿದ್ದರೆ ದೇವರು ಮೆಚ್ಚುತ್ತಾನೆಯೇ?"

"ನಿಮ್ಮಂಥಾವರು ಲೋಕದಲ್ಲಿ ವಿರಳ ಸ್ವಾಮಿ. ಎಲ್ಲರೂ ನಮಕ್ ಹರಾಮಿಗಳು."

"ಮಾಡಿದ ಉಪಕಾರ ಸ್ಮರಿಸದಿರುವವರು ಬಾಳುವುದು ಕಷ್ಟ ಸಾಹುಕಾರರೇ. ನಮ್ಮ ಕೃತಜ್ಞತಾ ಬುದ್ಧಿಯೇ ನಮ್ಮನ್ನು ಕಾಪಾಡುವ ದೇವರು."

"ಸೋಮಿ, ಇನ್ನು ನಾನು ಯಾವ ಕೆಲಸ ಮಾಡಿದರೂ ನಿಮ್ಮನ್ನು ಮುಂದಿಟ್ಟುಕೊಂಡೇ ಮಾಡ್ತೀನಿ. ನಮ್ಮ ಮುಂದಿನ ಪಿಕ್ಚರಿಗೆ ನೀವೇ ಡೈರೆಕ್ಟರು."

"ಚಿತ್ರದ ಡೈರೆಕ್ಷನ್ ನನಗೇಕೆ ಸಾಹುಕಾರರೇ. ನಾನು ಸಾಹಿತಿ. ಸಾಹಿತಿಯಾಗಿಯೇ ಉಳಿಯಲು ನಾನು ಇಷ್ಟಪಡುತ್ತೇನೆ. ನಿಮ್ಮ ಮುಂದಿನ ಚಿತ್ರವನ್ನು ಭೂಪೆನ್ ಬಾಬುಗಳೇ ಡೈರೆಕ್ಟ್ ಮಾಡಬೇಕು."

ಸಾಹುಕಾರರು ರೂಮನ್ನು ಪರಾಮರ್ಶಿಸಿ

“ ಫರ್ನಿಚರು ತರಿಸಿಕೊಳ್ಳಲಿಲ್ವಾ ಸ್ವಾಮಿ.”

“ ತರಿಸಿಕೊಳ್ಳುತ್ತೇನೆ. ಒಂದು ಮೇಜು ಒಂದು ಕುರ್ಚಿ ಅಗತ್ಯವಾಗಿ ಬೇಕಾಗಿದೆ. ನನಗೆ ನೆಲದ ಮೇಲೆ ಕುಳಿತುಕೊಂಡು ಬರೆಯುವ ಅಭ್ಯಾಸವಿಲ್ಲ.”

ಕಾಳ, ವೆಂಕಟಾಚಲಂ, ಸುಬ್ಬಯ್ಯರ್ ಅವರನ್ನು ಕರೆದುಕೊಂಡು ಬಂದ. ಸಾಹುಕಾರರು ಎದ್ದು ಅವರನ್ನು ಸ್ವಾಗತಿಸಿದರು. ನೆಲದವರೆಗೆ ಬಾಗಿ ಅತ್ಯಂತ ವಿನಯದಿಂದ ಅವರ ಸಹಕಾರವನ್ನು ಬೇಡಿದರು.

“ ಸುದರ್ಶನರಿಗೆ ನಾವು ಮಾತು ಕೊಟ್ಟಿದ್ದೇವೆ ಸಾಹುಕಾರರೇ. ನೀವು ಯೋಚನೆಯಿಟ್ಟುಕೊಳ್ಳಬೇಡಿ. ನಿಮ್ಮ ಚಿತ್ರ ಕೆಡದಂತೆ ನಾವು ನೋಡಿಕೊಳ್ಳುತ್ತೇವೆ ”

ಎಂದು ಸುಬ್ಬಯ್ಯರ್ ಧೈರ್ಯ ಹೇಳಿದರು.

ಡೈರೆಕ್ಟರೊಂದಿಗೆ ಚಿನ್ನಪ್ಪ ಹಿಂದಿರುಗಿದ ಮೇಲೆ ನಾರಾಯಣ ಎಲ್ಲರಿಗೂ ಉಪ್ಪಿಟ್ಟು, ಕಾಫಿ ತಂದುಕೊಟ್ಟ. ಸಾಹುಕಾರರು ಕಾಳನ ಕೈಗೆ ಹಣಕೊಟ್ಟು ಒಂದು ಡಬ್ಬ ಗೋಲ್ಡ್ ಫ್ಲೇಕ್ ಸಿಗರೇಟ್ ತರಿಸಿ ಎಲ್ಲರ ಮುಂದಿಟ್ಟರು.

ಭೂಪೇನ್ ಬಾಬುಗಳ ಮುಖ ಕಂಗೆಟ್ಟಿರುವುದನ್ನು ಕಂಡು ವೆಂಕಟಾಚಲಂ

“ ಯೋಚನೆಮಾಡಬೇಡಿ ಬಾಬುಗಳೇ. ಎಲ್ಲವನ್ನೂ ಸರಿಪಡಿಸೋಣ. ಎಲ್ಲಿ, ನಿಮ್ಮ ಸಿನಾರಿಯೊ (Scenerio) ಕೊಡಿ ”

ಎಂದರು. ಡೈರೆಕ್ಟರು ತಮ್ಮ ಕೈಯಲ್ಲಿದ್ದ ಚೀಲ ತೆಗೆದು ಟೈಪಾಗಿದ್ದ ಸಿನಾರಿಯೊ ಹಾಳೆಗಳನ್ನು ವೆಂಕಟಾಚಲಂ ಕೈಗಿತ್ತರು.

“ ದೃಶ್ಯಗಳನ್ನು ನೀವು ವಿವರಿಸುತ್ತ ಬನ್ನಿ ಸುದರ್ಶನರೇ.”

ಸುದರ್ಶನರು ದೃಶ್ಯಗಳನ್ನು, ಸಂಭಾಷಣೆಗಳನ್ನು ವಿವರಿಸುತ್ತಿದ್ದಂತೆ ವೆಂಕಟಾಚಲಂ ತಂತ್ರ ನಿಯೋಜನೆ ಮಾಡುತ್ತಾ, ಎಲ್ಲಿ ಎಲ್ಲಿ ಯಾವ ಯಾವ ಷಾಟುಗಳನ್ನು ತೆಗೆದುಕೊಳ್ಳಬೇಕೆನ್ನುವುದನ್ನು ಗುರುತಿಸುತ್ತ ಬಂದರು. ಬಿಗ್ ಕ್ಲೋಸ್ ಅಪ್ (Big close-up) ಎಲ್ಲಿ ಕೊಡಬೇಕು, ಲಾಂಗ್, ಮಿಡ್ಲ್, ಕ್ಲೋಸ್ ಅಪ್ (Long, middle, close-up) ಷಾಟ್‌ಗಳನ್ನು ಹೇಗೆ ನಿಯೋಜಿಸಬೇಕೆನ್ನುವುದನ್ನು ವಿವರಿಸಿದರು. ಅರ್ಥಗೆಡದಂತೆ ತಂತ್ರಕ್ಕನುಗುಣವಾಗಿ ಸಂಭಾಷಣೆಗಳನ್ನು ಸುದರ್ಶನರು ವಿಭಾಗಮಾಡಿಕೊಟ್ಟು, ಅವುಗಳ ಅರ್ಥವನ್ನು ವಿವರಿಸಿದರು.

“ ನೀವು ಈಗ ತೆಗೆದುಕೊಂಡಿರುವ ದೃಶ್ಯದಲ್ಲಿರುವ ಒಂದು ದೊಡ್ಡ ತಪ್ಪನ್ನು ಹೇಳಿಂದರೆ ಹೇಳುತ್ತೇನೆ ”

ಎಂದು ವೆಂಕಟಾಚಲಂ ಸೂಚಿಸಿದರು. ಭೂಪೆನ್ ಬಾಬುಗಳೇ

"ಹೇಳಿ ಸರ್. ತಪ್ಪನ್ನು ತಿದ್ದಿಕೊಳ್ಳುತ್ತೇನೆ."

"ಪ್ರತಿಯೊಂದು ಸಲವೂ ನೀವು ಕ್ಯಾಮರಾವನ್ನು ಮಾತನಾಡುವವರ ಕಡೆಗೇ ತಿರುಗಿಸಿದ್ದೀರಿ. ಕೆಲವು ಸಲ ಹೀಗೇ ಮಾಡಬೇಕು – ಆದರೆ ಕೆಲವು ಸಲ ಮಾತಾಡುವವರಿಗಿಂತಲೂ ಮಾತು ಕೇಳುವವರು ಮುಖ್ಯ. ಆಡಿದ ಮಾತು ಕೇಳುವವರ ಮನಸ್ಸಿನ ಮೇಲೆ ಯಾವ ಪರಿಣಾಮವನ್ನುಂಟುಮಾಡುತ್ತಿದೆಯೆನ್ನುವುದನ್ನು ನಾವು ಗಮನಿಸಬೇಕು."

ಭೂಪೆನ್ ಬಾಬುಗಳು ತಮ್ಮ ತಪ್ಪನ್ನು ಒಪ್ಪಿಕೊಂಡರು.

'ಅಂತಃಪುರದ ದೃಶ್ಯ'ದ ಕೆಲಸ ಮುಗಿಯುವ ವೇಳೆಗೆ ಎರಡು ಗಂಟೆಯಾಗಿತ್ತು. ವೆಂಕಟಾಚಲಂ, ಸುಬ್ಬಯ್ಯರ್ ಇಬ್ಬರನ್ನೂ ಅಲ್ಲೇ ಊಟಕ್ಕೆ ಸುದರ್ಶನರು ನಿಲ್ಲಿಸಿಕೊಂಡರು.

"ಬುಧವಾರ ಕಾಲ್‌ಷೀಟ್ ತೆಗೆದುಕೊಳ್ಳಲೇ ?"

ಎಂದು ಚಿನ್ನಪ್ಪ ಕೇಳಿದ.

"ಅವಶ್ಯಕವಾಗಿ"

ಎಂದು ವೆಂಕಟಾಚಲಂ ಹೇಳಿದರು.

"ನಾಳೆ ಬೆಳಿಗ್ಗೆ ರಿಹರ್ಸಲ್ಲಿಗೆ ಬರುವಂತೆ ಎಲ್ಲರಿಗೂ ತಿಳಿಸಿ ಚಿನ್ನಪ್ಪ"

ಎಂದರು ಸುದರ್ಶನರು.

"ಈಗಾಗಿರುವ ಷೂಟಿಂಗ್ ಏನು ಮಾಡೋಣ"

ಎಂದು ಚಿನ್ನಪ್ಪ ಕೇಳಿದ.

"ಇದನ್ನು ಒಂದು ಮೂಲೆಗೆ ಹಾಕಿಬಿಡಿ. ಎಲ್ಲಾ ದೃಶ್ಯಗಳನ್ನೂ ರೀಟೇಕ್ (Retake) ತೆಗೆದುಕೊಂಡು ಕೆಲಸ ಮುಂದುವರಿಸೋಣ"

ಎಂದು ವೆಂಕಟಾಚಲಂ ಹೇಳಿದರು

ಭೂಪೆನ್ ಬಾಬು ಎಲ್ಲರ ಅಪ್ಪಣೆ ಪಡೆದು ಬೆಳಿಗ್ಗೆ ರಿಹರ್ಸಲ್ಲಿಗೆ ಬರುವುದಾಗಿ ಹೇಳಿ ಹೋದರು.

ಸಾಹುಕಾರರು, ಚಿನ್ನಪ್ಪ ಹೋದ ಮೇಲೆ ಸುದರ್ಶನರು ವೆಂಕಟಾಚಲಂ, ಸುಬ್ಬಯ್ಯರ್ ಅವರ ಜತೆಯಲ್ಲಿ ಊಟ ಮುಗಿಸಿದರು. ಮೂವರಿಗೂ ಕಾಳ ಜಮಖಾನ ಹಾಸಿ ದಿಂಬು ಅಣಿಮಾಡಿಕೊಟ್ಟ. ಮೂವರೂ ಸ್ವಲ್ಪ ಕಾಲ ಹರಟೆ ಹೊಡೆದು ವಿಶ್ರಾಂತಿಗೆ ತೆರಳಿದರು.

ಐದೂವರೆಯ ಗಂಟೆಯ ವೇಳೆಗೆ ಚಿನ್ನಪ್ಪ ಬಂದು ಎಬ್ಬಿಸಿದಾಗಲೇ ಅವರಿಗೆ ಎಚ್ಚರ.

"ಏನು ಸ್ವಾಮಿ, ಸುಖವಾಗಿ ಮಲಗಿಬಿಟ್ಟಿರಿ" ಎಂದ.

"ಮುಂದೆ ಜಾಗರಣೆಯಿದೆಯಲ್ಲಾ, ಅದಕ್ಕೆ ಪೂರ್ವಸಿದ್ಧತೆ" ಎಂದು ಸುದರ್ಶನರು ಹೇಳಿದರು.

"ಸ್ವಲ್ಪ ಎಲ್ಲರೂ ತೊಟ್ಟಿಯಲ್ಲಿ ಕುಳಿತುಕೊಳ್ಳಿ ಸ್ವಾಮಿ."

"ಏಕೆ ಚಿನ್ನಪ್ಪನವರೇ."

"ಮುಖ ತೊಳೆದುಕೊಂಡು ಕಾಫಿಗೀಫಿ ತೆಗೆದುಕೊಳ್ಳಿ."

ಸುದರ್ಶನರು ವೆಂಕಟಾಚಲಂ, ಸುಬ್ಬಯ್ಯರ್ ಜತೆಯಲ್ಲಿ ತೊಟ್ಟಿಯಲ್ಲಿ ಕುಳಿತರು. ನಾರಾಯಣ ಬಿಸಿಬಿಸಿ ಕಾಫಿ ತಂದಿಟ್ಟ.

ಚಿನ್ನಪ್ಪ ಇಬ್ಬರು ಕೂಲಿಯವರು ಮತ್ತು ಕಾಳನ ಜತೆ ಫರ್ನೀಚರನ್ನು ಸುದರ್ಶನರ ರೂಮಿಗೆ ಸಾಗಿಸಿದ. ಕರೀಮರದ ಮಂಚ, ಮೇಜು, ಕುರ್ಚಿ, ಒಂದು ಸೋಫಾ ಸೆಟ್, ಬಟ್ಟೆ ಸ್ಟ್ಯಾಂಡ್, ಒಂದು ಚೆಸ್ಟ್ ಆಫ್ ಡ್ರಾಯರ್ಸ್ ಸುದರ್ಶನರ ರೂಮನ್ನಲಂಕರಿಸಿದವು.

ಸುದರ್ಶನರು ಅವುಗಳನ್ನು ನೋಡಿ

"ಇದೆಲ್ಲಾ ಏನು ಚಿನ್ನಪ್ಪನವರೇ?" ಎಂದು ಕೇಳಿದರು.

"ನನಗೇನು ಗೊತ್ತು ಸ್ವಾಮಿ. ಸಾಹುಕಾರರ ಅಪ್ಪಣೆ. ನಿಮ್ಮ ರೂಮಿಗೆ ದೊಡ್ಡದೊಡ್ಡವರು ಬರುತ್ತಾರೆ – ಅಲ್ಲಿ ಸಾಕಷ್ಟು ಫರ್ನೀಚರ್ ಇಲ್ಲದಿದ್ದರೆ ಕಂಪೆನಿಗೆ ಅಗೌರವವೆಂದು ಸಾಹುಕಾರರು ತಿಳಿಸಿದರು."

"ಊಟ ಮಾಡಿದಿರೋ ಇಲ್ಲವೋಪ್ಪ."

"ಊಟ ಮುಗಿಸಿಕೊಂಡೇ ಪೇಟೆಯ ಕಡೆ ಹೋಗಿ ಬಂದೆ."

"ಕಾರ್ ತೆಗೆದುಕೊಂಡು ಹೋಗಿದ್ದರೋ ವ್ಯಾನ್ ತೆಗೆದುಕೊಂಡು ಹೋಗಿದ್ದರೋ."

"ಸಾಮಾನು ತರುವುದಿತ್ತು. ವ್ಯಾನಿನಲ್ಲೇ ಹೋಗಿದ್ದೆ. ಏಕೆ, ಕಾರ್ ಬೇಕಾಗಿತ್ತೇನು?"

"ಹೇಗೂ ಸಂಜೆಯಾಗುತ್ತ ಬಂತು. ವೆಂಕಟಾಚಲಂ, ಸುಬ್ಬಯ್ಯರ್‌ರನ್ನು ಬೀಚಿನಲ್ಲಿ ಸುತ್ತಾಡಿಸಿಕೊಂಡು, ಮನೆಗಳಿಗೆ ಬಿಟ್ಟುಬರಬಹುದಾಗಿತ್ತು."

"ಅದಕ್ಕೇನು – ವ್ಯಾನ್ ಕಳಿಸಿ ಐದು ನಿಮಿಷದಲ್ಲಿ ಕಾರು ತರಿಸಿ ಕೊಡುತ್ತೇನೆ."

"ಬೇಡಿ – ಸಾಹುಕಾರರು, ಸರೋಜಮ್ಮ ಎಲ್ಲಿಯಾದರೂ ಹೊರಗೆ ಹೋಗಬಹುದು."

"ಹೋಗೋದಿದ್ದೇ ಇದೆ – ತಡೀರಿ ಸ್ವಾಮಿ."

ಎಂದು ಚಿನ್ನಪ್ಪ ಕೆಳಗಿಳಿದು ಹೋಗಿ ಪ್ಯಾನ್ ಬಿಟ್ಟು, ಕಾರ್ ತರಲು ಡ್ರೈವರಿಗೆ ಹೇಳಿದ.

ಕಾರ್ ಬಂದಕೂಡಲೆ ಸುದರ್ಶನರು, ವೆಂಕಟಾಚಲಂ, ಸುಬ್ಬಯ್ಯರ್ ಚಿನ್ನಪ್ಪನೊಂದಿಗೆ ಬೀಚಿನ ಕಡೆ ಹೋಗಿ, ಅಲ್ಲಿ ಸುತ್ತಾಡಿಕೊಂಡು, ತಂತ್ರಜ್ಞರನ್ನು ಮನೆ ಮುಟ್ಟಿಸಿ ಮನೆಗೆ ಹಿಂದಿರುಗಿದರು.

ಬೆಳಿಗ್ಗೆಯಿಂದ ನಡೆಯುತ್ತಿದ್ದ ವಿದ್ಯಮಾನಗಳನ್ನು ಮಹಾದೇವಯ್ಯ ಪರಿಶೀಲಿಸುತ್ತಲೇ ಇದ್ದ. ಸುದರ್ಶನರ ರೂಮಿಗೆ ಒಳ್ಳೆಯ ಫರ್ನೀಚರು ಬಂದದ್ದು ನೋಡಿ ಅವನ ಹೊಟ್ಟೆ ಉರಿದು ಹೋಯಿತು. ಅಸಹನೆ, ಅಸಂತುಷ್ಟಿಯ ದಳ್ಳುರಿ ಒಳಗೇ ಹೊಗೆಯಾಡಲಾರಂಭಿಸಿತು.

## ೨೧

ಕಂಪೆನಿ ಮನೆಯಲ್ಲಿ ಬೇರೆ ಬೇರೆ ಪ್ರಾಂತ್ಯಗಳ, ಬೇರೆ ಬೇರೆ ಭಾಷೆ ಮಾತನಾಡುವ ಜನ ಸೇರಿದ್ದರು. ಹೊರಗಣ್ಣಿಗೆ ಕಾಣಬರುವ ಭಿನ್ನತೆಯ ಹಿಂದೆ ಭಾರತ ಶಕ್ತಿಯ ಏಕಸೂತ್ರ ಸುಪ್ತವಾಗಿರುವಂತೆ, ಕಂಪೆನಿ ಮನೆಯ ವೈವಿಧ್ಯದ ಹಿಂದೆ ಸುದರ್ಶನರ ಅಂತಃಕರಣ ತಿಳಿಬೆಳಕನ್ನು ಚೆಲ್ಲುತ್ತಿತ್ತು.

ಸಂಗೀತ ದಿಗ್ದರ್ಶಕರಾದ ಸತ್ಯನಾಥನ್ ಪರಮ ಭಗವದ್ಭಕ್ತರು. ಅವರ ಸ್ನಾನ, ಪೂಜೆಯ ಸಂಭ್ರಮವಂತೂ ಹೇಳತೀರದು. ಎಲ್ಲರಿಗಿಂತ ಮುಂಚೆ ಎದ್ದು ತಣ್ಣೀರು ಸ್ನಾನ ಮಾಡಿ ಪೂಜೆಗೆ ಕೂಡುತ್ತಿದ್ದರು. ಆದರೆ ತಮ್ಮ ಪೂಜೆ, ಸ್ನಾನದಿಂದ ಇತರರಿಗೆ ತೊಂದರೆಯಾಗದಂತೆ ಎಚ್ಚರವಾಗಿರುತ್ತಿದ್ದರು. ಸತ್ಯನಾಥನ್ ಅವರಿಗೆ ಯಾವ ಚಟವೂ ಇರಲಿಲ್ಲ. ಹಸುವಿನ ಹಾಲಿನ ಮೇಲೆ ಮಾತ್ರ ಅವರಿಗೆ ಹೇಳಲಾಗದಷ್ಟು ಪ್ರೀತಿ. ಸ್ವಂತ ಖರ್ಚಿನಿಂದ ದಿನಕ್ಕೆ ಮೂರು ಸೇರು ಹಾಲು ಕೊಳ್ಳುತ್ತಿದ್ದರು. ರಾತ್ರಿ ಮಲಗುವ ಮುನ್ನ ಅದನ್ನು ತಾವೇ ಕಾಯಿಸಿ, ತಮಗೆ ತೃಪ್ತಿಯಾಗುವಷ್ಟು ಕುಡಿದು, ಕಂಪೆನಿಯಲ್ಲಿದ್ದ ಎಲ್ಲರಿಗೂ ಸ್ವಲ್ಪ ಸ್ವಲ್ಪ ಕೊಡುತ್ತಿದ್ದರು. ಹಸುವಿನ ಮಹಿಮೆ, ಹಸುವಿನ ಹಾಲಿನ ಅಮೃತಗುಣಗಳನ್ನು ಎಷ್ಟು ವರ್ಣಿಸಿದರೂ ಅವರಿಗೆ ತೃಪ್ತಿಯಿಲ್ಲ.

ವರದರಾಜ ಅಯ್ಯಂಗಾರ್ಯರು ತಮ್ಮ ಸಂಗೀತ ಪ್ರಪಂಚವನ್ನು ಬಿಟ್ಟು ಬೇರೆ ಏನೂ ಕಂಡಿರಲಿಲ್ಲ. ಮಿತಭಾಷಿ. ವಿನಯಪರ. ಯಾರು ಮಾತನಾಡಿಸಿದರೂ ಕೈಮುಗಿದುಕೊಂಡೇ ಮಾತು. ಸದಾ ಮುಗುಳ್ನಗೆ.

ಕೆಲವೇ ದಿನಗಳಲ್ಲಿ ಸುದರ್ಶನರಿಗೂ ಸತ್ಯನಾಥನ್, ವರದರಾಜ ಅಯ್ಯಂಗಾರ್ಯರಿಗೂ ನಿಕಟ ಸ್ನೇಹ ಬೆಳೆಯಿತು. ಸುದರ್ಶನರ ವಿದ್ಯಾರ್ಜನೆಯ ಹಂಬಲ ಕಂಡು ಅಯ್ಯಂಗಾರ್ಯರಿಗೆ ಅವರಲ್ಲಿ ಪರಮ ಗೌರವವುಂಟಾಯಿತು.

ಅಯ್ಯಂಗಾರ್ಯರ 'ವಾದ್ಯಮೇಳ' ಒಂದು ಸರ್ಕಸ್ ಕಂಪೆನಿಯಂತೆಯೇ ಇತ್ತು. ವಾದ್ಯಗಾರರ ಕೆಲವರು ಹಲವು ನಾಟಕದ ಕಂಪೆನಿಗಳಲ್ಲಿ, ಸಿನೀಮಾ ಕಂಪೆನಿಗಳಲ್ಲಿ ನುರಿತವರು ಲೋಕ ಕಂಡವರು. ಬಾಂಜೋ, ಮಾಂಡೋಲಿನ್ ವಾದ್ಯಗಳನ್ನು ನುಡಿಸುತ್ತಿದ್ದ ವಿನಾಯಗಂ, 'ಮಾವಾಳಿ' ಯೆಂದು ಪ್ರಸಿದ್ಧನಾಗಿದ್ದ. ಮಾತಾಡಿದರೆ ಸಿಟ್ಟಾಗಿ ಹೊಡೆದಾಟಕ್ಕೆ ನಿಲ್ಲುವುದು ಅವನ ಸ್ವಭಾವವಾಗಿತ್ತು. ಸ್ಯಾಕ್ಸೊಫೋನ್, ಕ್ಲಾರಿಯನೆಟ್ ವಾದ್ಯಗಳನ್ನು ನುಡಿಸುತ್ತಿದ್ದ ಪೆರುಮಾಳ್ ವಿನಾಯಗಂನ ಪರಮ ಮಿತ್ರ. ಕುಳಿತರೆ ನಿಂತರೆ ಅವನಿಗೆ ಕುದುರೆಗಳ ಚಿಂತೆ. ರೇಸ್ ಟಿಪ್ಸ್ ಕೊಡುವ ಪುಸ್ತಕಗಳು, ಪತ್ರಿಕೆಗಳೇ ಅವನ ಆಸ್ತಿ. ಪಿಟೀಲು ವಾದ್ಯಕಾರ ಬುಚ್ಚಿಬಾಬು, ತಬಲ ರಂಗಯ್ಯನಾಯಿಡು ಜತೆಗಾರರು. ಇಬ್ಬರಿಗೂ ಕಳ್ಳೆಂದರೆ ಪಂಚಪ್ರಾಣ. ರಂಗಯ್ಯನಾಯಿಡು ಕುಡಿಯುವುದರಲ್ಲಿ ಸ್ವಲ್ಪ ಇತಿಮಿತಿಯಿತ್ತು. ಬುಚ್ಚಿಬಾಬು ಹೆಂಡದ ಪೀಪಾಯಿಗೇ ಬಾಯಿ ಹಾಕುತ್ತಿದ್ದ ಮಹಾನುಭಾವ. ಬುಚ್ಚಿಬಾಬು ಮಿತಿಮೀರಿ ಕುಡಿಯುವುದನ್ನು ಅಭ್ಯಾಸ ಮಾಡಿಕೊಳ್ಳುವುದಕ್ಕೆ ಒಂದು ಕಾರಣವಿತ್ತು. ನೆಲ್ಲೂರಿನ ಒಂದು ನಾಟಕದ ಕಂಪೆನಿಯಲ್ಲಿ ಬುಚ್ಚಿಬಾಬು, ರಂಗಯ್ಯನಾಯಿಡು ಕೆಲಸಕ್ಕಿದ್ದರು. ಬುಚ್ಚಿಬಾಬೂಗೆ ಕೆಲಸ ಸಿಕ್ಕಬೇಕಾದರೆ ಅವನ ಜತೆಗಿದ್ದ ಶುಕ್ರಗ್ರಹವೇ ಕಾರಣ. ಕಾಲಕ್ರಮೇಣ ಶುಕ್ರಗ್ರಹದ ಮೇಲೆ ಕಂಪೆನಿ ಮಾಲಿಕರ ಕಣ್ಣುಬಿತ್ತು. ಬುಚ್ಚಿಬಾಬು ಕೈಕೊಡವಿಕೊಂಡು ಕಂಪೆನಿ ಬಿಟ್ಟು ಹೊರಬರಬೇಕಾಯಿತು. ಅಂದಿನಿಂದ ಬಾಬೂಗೆ ಕಳ್ಳಂಗಡಿಯೇ ತೌರುಮನೆಯಾಯಿತು.

ಸಾರಂಗಿ ನುಡಿಸುತ್ತಿದ್ದ ಸತ್ತಾರ್ ಸಾಬಿ ವಾದ್ಯಮೇಳದವರ ಜತೆಗಿರುತ್ತಿರಲಿಲ್ಲ. ಅವನು ಊರೊಳಗೆ ಮನೆ ಮಾಡಿಕೊಂಡಿದ್ದ. ರಿಹರ್ಸಲ್, ರಿಕಾರ್ಡಿಂಗಿಗೆ ಬಂದು ತನ್ನ ಕೆಲಸ ನೋಡಿಕೊಂಡು ಹೋಗುತ್ತಿದ್ದ.

ವೀಣೆ ಸೌಂದರರಾಜನ್ ಉತ್ತಮ ಕಲಾವಿದನಾಗಿದ್ದ. ಹೊಸ ಶೋಧಗಳ ಕಡೆಗೂ ಅವನ ಮನಸ್ಸು ಓಡುತ್ತಿತ್ತು. ಕಛೇರಿಗಳಲ್ಲಿ ನುಡಿಸುವುದಕ್ಕೆ ವೀಣೆಯ ಬುರುಡೆಯಲ್ಲಿ ಮೈಕ್ ಹಾಕಿದ ಒಂದು ವೀಣೆ ತಯಾರು ಮಾಡಿಸಿಕೊಂಡಿದ್ದ. ವೀಣೆಯಷ್ಟೇ ಚೆನ್ನಾಗಿ ಗೋಟುವಾದ್ಯವನ್ನೂ ನುಡಿಸುತ್ತಿದ್ದ. ಹೆಣ್ಣೆಂದರೆ ಸರ್ವಸ್ವವನೂ ಬಲಿದಾನವಾಗಿ ಅರ್ಪಿಸುವ

ದೌರ್ಬಲ್ಯ ಅವನಲ್ಲಿ ಮನೆ ಮಾಡಿಕೊಂಡಿತ್ತು. ಹೆಣ್ಣಿನ ಸಲುವಾಗಿ ಅವನು ಬೀದಿ ಜಗಳಗಳಲ್ಲಿ ಸೇರಿಕೊಂಡು ಏಟುಗಳನ್ನು ತಿಂದದ್ದೂ ಉಂಟು.

ಇವರೆಲ್ಲರನ್ನೂ ವರದರಾಜ ಅಯ್ಯಂಗಾರ್ಯರ ಸದ್ಗುಣ, ಸೌಶೀಲ್ಯ ಸೆರೆ ಹಿಡಿದಿತ್ತು. ವರದರಾಜ ಅಯ್ಯಂಗಾರ್ಯರು ಸ್ವಯಂ ಹಾಡುತ್ತಿದ್ದು ದಲ್ಲದೆ, ಎಂಟು ಹತ್ತು ವಾದ್ಯಗಳನ್ನು ನುಡಿಸುತ್ತಿದ್ದರು.

ಕಂಪೆನಿ ಮನೆಯಲ್ಲಿದ್ದ ವಾದ್ಯಗಾರರು, ನಟರು, ನೌಕರರು ಎಲ್ಲರೂ ಸುದರ್ಶನರ ಬಗ್ಗೆ ನಿಸ್ಸೀಮ ಪ್ರೇಮ ಗೌರವಗಳನ್ನು ತಳೆದಿದ್ದರು. ಇದಕ್ಕೆ ಸುದರ್ಶನರ ನಿರ್ವ್ಯಾಜ ಅಂತಃಕರಣವೇ ಕಾರಣವಾಗಿತ್ತು. ತಾವು ವಿದ್ಯಾವಂತರೆಂಬ ಸೊಕ್ಕು ತೋರಿಸದೆ ಎಲ್ಲರೊಂದಿಗೆ ಸರಿಸಮರಂತೆ ನಡೆದುಕೊಳ್ಳುತ್ತಿದ್ದರು. ತಾವು ಊಟಕ್ಕೆ ಕೂಡುವ ಮುನ್ನ, ಊಟ ಮಾಡದಿರುವವರನ್ನೆಲ್ಲಾ ಎಬ್ಬಿಸಿ ಕರೆದುಕೊಂಡು ಬಂದು ಜತೆಯಲ್ಲಿ ಕೂಡಿಸಿಕೊಂಡು ಊಟ ಮಾಡುತ್ತಿದ್ದರು. ಪದವಿ, ಅಂತಸ್ತು, ವಿದ್ಯೆ, ಜಾತಿಗಳ ಭೇದವೆಣಿಸದೆ ಸುದರ್ಶನರು ಎಲ್ಲರ ಪ್ರೇಮ ಗಳಿಸಿಕೊಂಡರು.

ಸತ್ಯನಾರ್ಥ ಅವರಿಗೆ ಇಸ್ಪೇಟ್ ಆಡುವುದಕ್ಕೆ ಬರದು. ಆದರೂ ಆಡಬೇಕೆಂದು ವಿಪರೀತ ಚಪಲ. ದಿನವೂ ರಾತ್ರಿ ಊಟ ಮುಗಿದ ಮೇಲೆ ಅವರು ಒಂದು ಗಂಟೆಯಾದರೂ ಇಸ್ಪೇಟ್ ಆಡಬೇಕು. ಸುದರ್ಶನರಿಗೆ ಇಸ್ಪೇಟಿನ ತಲೆ ಕಂಡರಾಗದಿದ್ದರೂ ಎಲ್ಲರೊಂದಿಗೆ ತಾವೂ ಕುಳಿತು ಸ್ವಲ್ಪ ಹೊತ್ತು ಆಡಿ ಸಂತೋಷವಾಗಿ ಎರಡು ಮೂರು ಆಣೆ ಕಳೆದುಕೊಂಡು ಮೇಲಕ್ಕೇಳುತ್ತಿದ್ದರು.

ಕಂಪೆನಿಮನೆ, ಸ್ಟೂಡಿಯೋ, ಸಾಹುಕಾರರು ಎಲ್ಲ ಕಡೆಯಲ್ಲಿಯೂ ಸುದರ್ಶನರಿಗಿದ್ದ ವರ್ಚಸ್ಸು ಕಂಡು ಮಹಾದೇವಯ್ಯ ಕರುಬಿ ಒಳಗೊಳಗೇ ಕುದಿಯುತ್ತಿದ್ದ. ಮಹಾದೇವಯ್ಯನ ಅಂತಸ್ತಾಪದಲ್ಲಿ ಮಹಂತಯ್ಯ ಭಾಗಿಯಾಗಿದ್ದ. ಮಹಂತಯ್ಯನಲ್ಲಿ ಅಸಮಾಧಾನ ಮೊಳೆಯುವುದಕ್ಕೆ ಒಂದು ಕಾರಣವಿತ್ತು. ಶಿವಾನಂದ, ಅವನೂ ತುಂಬ ಸ್ನೇಹಿತರು, ಸಹಪಾಠಿಗಳು. ಶಿವಾನಂದ ಸುದರ್ಶನರ ಕಡೆ ಸೇರಿಕೊಂಡುದನ್ನು ನೋಡಿ ಮಹಂತಯ್ಯನ ಮನಸ್ಸಿಗೆ ತುಂಬ ಬೇಸರವಾಗಿತ್ತು.

ಆದರೆ ಶಿವಾನಂದನಿಗೆ ಸುದರ್ಶನರನ್ನು ಅನುಸರಿಸದೆ ಗತ್ಯಂತರವೇ ಇಲ್ಲವೆಂಬುದನ್ನು ಮಹಂತಯ್ಯ ತಿಳಿದಿರಲಿಲ್ಲ. ಮೊದಲನೆಯ ವರ್ಗದ ಸಿನೀಮಾ ನಟನಾಗಿ ಅಪಾರ ಖ್ಯಾತಿ, ಹಣಗಳಿಸಬೇಕೆಂಬ ಆಕಾಂಕ್ಷೆ ಶಿವಾನಂದನಲ್ಲಿ ಪ್ರಬಲವಾಗಿ ಮೂಡಿತ್ತು. ಆದರೆ ಅದಕ್ಕೆ ಅವಶ್ಯಕವಾದ

ಯೋಗ್ಯತೆ ಮಾತ್ರ ಇರಲಿಲ್ಲ. ಶಿವಾನಂದನ ವ್ಯಕ್ತಿತ್ವ (Personality) ಘನವಾಗಿದ್ದರೂ, ಅದನ್ನು ಉಪಯೋಗಿಸಿಕೊಳ್ಳುವ ಕಲೆ ಅವನ ಕರಗತವಾಗಿರಲಿಲ್ಲ. ಧ್ವನಿ ಅತಿ ಕರ್ಕಶ. ಧ್ವನಿಯನ್ನು ಯಾವ ರೀತಿಯಲ್ಲಿ ಮಾರ್ಪಾಡು ಮಾಡಿಕೊಳ್ಳಬೇಕೆನ್ನುವುದು ಶಿವಾನಂದನಿಗೆ ಗೊತ್ತಿರಲಿಲ್ಲ. ಕರುಣಾರಸಪ್ರಧಾನವಾದ ಭರತನ ಮಾತುಗಳು ಅವನ ಬಾಯಲ್ಲಿ ವೀರರಸ ಪ್ರಧಾನವಾಗಿ ಬರುತ್ತಿದ್ದವು. ರಷ್ ಪ್ರಿಂಟ್ ನೋಡಿದ ಮೇಲಂತೂ ಶಿವಾನಂದ ಸುದರ್ಶನರನ್ನು ಬಿಟ್ಟರೆ ಕೆಟ್ಟೆನೆಂದು ಮನಸ್ಸಿಗೆ ಖಚಿತಮಾಡಿಕೊಂಡ.

ಶಿವಾನಂದನಿಂದಲೇ ತಾವು ಈ ಕಂಪೆನಿಗೆ ಬಂದುದೆನ್ನುವುದನ್ನು ಸುದರ್ಶನರು ಮರೆತಿರಲಿಲ್ಲ. ಉತ್ಸಾಹಿಯಾದ ಶಿವಾನಂದನ ಕೆಲಸ ಚೆನ್ನಾಗಿ ಅವನಿಗೆ ಕೀರ್ತಿ ಬರಬೇಕೆಂದು ಸುದರ್ಶನರು ಮನಃಪೂರ್ವಕವಾಗಿ ಹಾರೈಸುತ್ತಿದ್ದರು. ಅವಕಾಶವಿದ್ದಾಗಲೆಲ್ಲಾ ಶಿವಾನಂದನನ್ನು ತಮ್ಮ ರೂಮಿಗೆ ಬರಮಾಡಿಕೊಂಡು ಅವನ ಪಾತ್ರದ ಸಂಕ್ತಿಗಳನ್ನು ಹಲವು ಸಾರಿ ಹೇಳಿಸಿ, ಧ್ವನಿ ವೈವಿಧ್ಯ, ಧ್ವನಿ ಸಂಯಮದ ರಹಸ್ಯಗಳನ್ನೆಲ್ಲಾ ಅವನಿಗೆ ತಿಳಿಸಿದರು. ಸುದರ್ಶನರ ಶಿಕ್ಷಣ ಪ್ರಭಾವದಿಂದ ಶಿವಾನಂದನ ಓರೆಕೋರೆಗಳು ಸುಧಾರಿಸುತ್ತ ಬಂದವು. ಅರ್ಥವಿಲ್ಲದೆ ಕೈತೂಗುವುದೂ, ಕತ್ತು ಕುಣಿಸುವುದೂ ನಿಲ್ಲುತ್ತ ಬಂದಿತು.

ಶಿವಾನಂದನ ಧ್ವನಿ ಹದಕ್ಕೆ ಬರಲೆಂದು ಸುದರ್ಶನರು ತಾವೇ ವರದರಾಜ ಅಯ್ಯಂಗಾರ್ಯರಿಗೆ ಹೇಳಿ ಅವನಿಗೆ ಸಂಗೀತಾಭ್ಯಾಸ ಆರಂಭಮಾಡಿಸಿದರು. ಬೆಳಿಗ್ಗೆ ಬೇಗ ಎದ್ದು ಸ-ಪ-ಸ ಕೂಗಬೇಕೆಂದು ಅಯ್ಯಂಗಾರ್ಯರು ವಿಧಾಯಕ ಮಾಡಿದ್ದರು. ಶ್ರುತಿಯನ್ನನುಸರಿಸಿ ಸಪಸ ಕೂಗುತ್ತ ಕೂಗುತ್ತ ಶಿವಾನಂದನ ಧ್ವನಿಯಲ್ಲಿ ಮಾರ್ದವತೆ ಮೂಡಲಾರಂಭವಾಯಿತು. ಅವನ ಸಂಗೀತಾಭ್ಯಾಸಕ್ಕೆ ಕಂಪೆನಿ ಮನೆಯಲ್ಲಿದ್ದ ಎಲ್ಲರಿಗೂ ತಲೆಚಿಟ್ಟು ಹಿಡಿದು ಹೋಗಿತ್ತು. ಸುದರ್ಶನರ ಮೇಲಣ ಗೌರವದಿಂದ ಯಾರೂ ಅಪಶಬ್ದ ನುಡಿಯಲು ಮುಂದಾಗಲಿಲ್ಲ.

೨೨

ಕಂಪೆನಿ ಮನೆಯ ಕೆಳಭಾಗದಲ್ಲಿದ್ದ ತೊಟ್ಟಿಯಲ್ಲಿ ಸಂಗೀತ ದಿಗ್ದರ್ಶಕರು, ವಾದ್ಯಗೋಷ್ಠಿಯವರು 'ರಿಹರ್ಸಲ್' ಆರಂಭ ಮಾಡಿದರು. ಸುದರ್ಶನರು ತಮ್ಮ 'ರಿಹರ್ಸಲ್ಲ' ನ್ನು ಮಹಡಿಯ ಮೇಲಣ ತೊಟ್ಟಿಯಲ್ಲಿಯೇ ಇಟ್ಟುಕೊಳ್ಳಬೇಕಾಗಿ ಬಂತು.

ಸಂಗೀತ ನಿಯೋಜನೆಗೆ ಕುಳಿತ ಮೊದಲನೆಯ ದಿವಸವೇ ಸತ್ಯನಾಥನ್, ವರದರಾಜ ಅಯ್ಯಂಗಾರ್ ಇಬ್ಬರಿಗೂ ಮಹಾದೇವಯ್ಯನ ಬಂಡವಾಳ ತಿಳಿದುಹೋಯಿತು. ಅವರು ಕೂಡಿಸಿದ ಸಂಗೀತಕ್ಕೆ ಶಬ್ದ ನಿಯೋಜಿಸುವುದಕ್ಕೆ ಅವನು ಪಾಡುಪಡುತ್ತಿದ್ದ. ಅವನು ಬರೆಯುತ್ತಿದ್ದ ಹಾಡುಗಳು ತುಂಬ ಉದ್ದವಾದವೆಂದು ಸತ್ಯನಾಥನ್ ತಿರಸ್ಕರಿಸುತ್ತಿದ್ದರು. ಮಹಾದೇವಯ್ಯನ ಕೈಯಲ್ಲಿ ಗುದ್ದಾಡಿ ಗುದ್ದಾಡಿ ಬೇಸತ್ತಿದ್ದ ಸತ್ಯನಾಥನ್ ಒಂದು ದಿನ ಎಲ್ಲರೆದುರಿಗೆ ಸಾಹುಕಾರರಿಗೆ

"ಇಂಥ ಹಾಡು ಬರೆಯುವವರನ್ನು ನಮಗೆ ಗಂಟು ಹಾಕಿದರೆ ನಾವೇನು ಮಾಡಬೇಕು ಸರ್. ಮೃದುವಾದ ಶಬ್ದಗಳನ್ನು ಜೋಡಿಸುವುದಕ್ಕೇ ಇವರಿಗೆ ಬರುವುದಿಲ್ಲವಲ್ಲ"

ಎಂದು ಬಿಟ್ಟರು. ಸಾಹುಕಾರರು ಉತ್ತರ ಕೊಡದೆ ಮಹಾದೇವಯ್ಯನ ಮುಖ ನೋಡಿದರು. ಅವನು ತಲೆ ತಗ್ಗಿಸಿಬಿಟ್ಟ. ಸಾಹುಕಾರರು ಮೆಲ್ಲನೆ ಮಹಡಿಯೇರಿ ಬಂದು ಸುದರ್ಶನರನ್ನು ಹೊರಗೆ ಕರೆದು

"ಮಾದೇವನಿಗೂ ಮ್ಯೂಸಿಕ್ ಡೈರೆಕ್ಟರಿಗೂ ಯಾಕೋ ಬಗೆಹರಿಯಲ್ಲ ಸ್ವಾಮಿ. ನೀವು ಸ್ವಲ್ಪ ಹಾಡುಗಳನ್ನೂ ನೋಡಿಕೊಳ್ಳಿ."

"ಮಹಾದೇವಯ್ಯನವರ ಕೆಲಸಕ್ಕೆ ನಾನು ಕೈಹಾಕುವುದು ನ್ಯಾಯವಲ್ಲ ಸಾಹುಕಾರರೇ."

"ನ್ಯಾಯ ಅನ್ಯಾಯ ನೋಡ್ತಾ ಹೋದರೆ ಪಿಕ್ಚರ್ ಏನಾಗಬೇಕು ಸ್ವಾಮಿ. ಈ ದಡ್ಡ ಸೂಳೇಮಗ ಬೇಡಾಂತ ನಾನು ಬಡ್ಕೊಂಡೆ. ಮುರಿಗಾ ಕೇಳಬೇಕಲ್ಲ. ಈ ದೆವ್ವಾನ ತಂದು ನಮ್ಮ ತಲೇಮ್ಯಾಕೆ ಹಾಕಿದ."

"ಮಹಾದೇವಯ್ಯನವರಿಗೂ ಕೆಲಸ ಹೊಸದು. ಸ್ವಲ್ಪ ರೂಢಿಯಾದರೆ ಅವರೇ ಸರಿಯಾಗಿ ಮಾಡಿಕೊಂಡು ಹೋಗುತ್ತಾರೆ."

"ಯಾವತ್ತಿಗೂ ಇಷ್ಟೇ ಸ್ವಾಮಿ ಅವನ ಹಣೇಬರಹ. ನೀವು ಏನಾದ್ರೂ ಮಾಡ್ದೇಯಿದ್ರೆ ನಾನು ಮುಣುಗಿಹೋಗ್ತೇನೆ."

ಸುದರ್ಶನರಿಗೆ ಉಭಯ ಸಂಕಟಕ್ಕಿಟ್ಟುಕೊಂಡಿತು. ವಿಚಾರಮಾಡಿ

"ನಾನಾಗಿ ನಾನೇ ಈ ವಿಷಯಕ್ಕೆ ಕೈಹಾಕಲಾರೆ ಸಾಹುಕಾರರೇ. ಮುಂದಕ್ಕೆ ಇದು ವಿಕೋಪಕ್ಕೆ ಹೋಗುತ್ತದೆ. ಮಹಾದೇವಯ್ಯನವರೇ ಬಂದು ನನ್ನನ್ನು ಕೇಳಿದರೆ ತಿಳಿದದ್ದು ಹೇಳುತ್ತೇನೆ."

"ಹಾಗೇ ಮಾಡಿ ಸ್ವಾಮಿ. ನಾನು ಮಾದೇವನಿಗೆ ಹೇಳಿಬಿಟ್ಟು ಹೋಗ್ತೀನಿ."

ಎಂದರು. ಈ ಪ್ರಕರಣದ ಪರಿಣಾಮವೆಂತಾಗುವುದೋ ಎಂದು ಸುದರ್ಶನರು ಚಿಂತಾಕ್ರಾಂತರಾದರು.

ಶಾಮಲಾಬಾಯಿ ಮಾತ್ರ ರಿಹರ್ಸಲ್ ಕಡೆ ತಲೆಯಿಡಲಿಲ್ಲ. ಚಿನ್ನಪ್ಪ ಅವಳ ಮನೆಗೆ ಹೋಗಿ ಗೋಗರೆದು ಕೇಳಿಕೊಂಡರೂ ಅವಳು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ.

ಸರೋಜ ಮಾತ್ರ ರಿಹರ್ಸ್‌ಲ್ಲಿಗೆ ತಪ್ಪಿಸಿಕೊಳ್ಳುತ್ತಿರಲಿಲ್ಲ. ಹತ್ತು ಸಲ ವಾಗಲಿ, ಇಪ್ಪತ್ತು ಸಲವಾಗಲಿ ಒಂದೊಂದು ಪಂಕ್ತಿಯನ್ನಾಡಿ ಅಭ್ಯಾಸ ಮಾಡಿಕೊಂಡು ಸುದರ್ಶನರ ಒಪ್ಪಿಗೆ ಪಡೆದ ಹೊರತೂ ಅವಳು ಸಮಾಧಾನ ಹೊಂದುತ್ತಿರಲಿಲ್ಲ. ಸುದರ್ಶನರು ಸ್ಟೂಡಿಯೋ ಕೆಲಸಕ್ಕೆ ಹೋದಾಗ ಮನೆಯ ಬಳಿಗೆ ಬಂದಾಗಲೂ ರಿಹರ್ಸ್‌ಮಾಡಿಕೊಂಡು ತನ್ನ ಪಂಕ್ತಿಗಳ ನ್ನೊಪ್ಪಿಸುತ್ತಿದ್ದಳು. ತನ್ನ ಕೆಲಸವನ್ನು ಸೊಗಸಾಗಿ ನಿರ್ವಹಿಸಿ ಒಳ್ಳೆಯ ಹೆಸರು ತೆಗೆದುಕೊಳ್ಳಬೇಕೆಂಬ ಆಕಾಂಕ್ಷೆ ಅವಳಲ್ಲಿ ಬಲವಾಗಿ ಮೂಡಿತ್ತು. ಸರೋಜನ ಶ್ರದ್ಧೆ, ಕಷ್ಟಸಹಿಷ್ಣುತೆ, ಕಲಿಯುವ ಆಸೆಗಳನ್ನು ಕಂಡು ಸುದರ್ಶನರು ಆಶ್ಚರ್ಯಚಕಿತರಾಗಿದ್ದರು.

ಬುಧವಾರದಿಂದ ಮತ್ತೆ ಷೂಟಿಂಗ್ ಆರಂಭವಾಯಿತು. ಬುಧವಾರ, ಗುರುವಾರ ಶಾಮಲಾಬಾಯಿಗೆ ಹೆಚ್ಚು ಕೆಲಸವಿರಲಿಲ್ಲ. ಶುಕ್ರವಾರದ ದಿನದ ಷೂಟಿಂಗೆಲ್ಲಾ ಅವಳ ದೃಶ್ಯ ಸಂಬಂಧವಾಗಿಯೇ ಇತ್ತು. ರಾಮ ತಾಯಿ ಕೌಸಲ್ಯೆಯನ್ನು ಕಾಣಬರುವ ದೃಶ್ಯ. ಕೌಸಲ್ಯೆ ರಾಮನನ್ನು ಕಂಡು

"ಕ್ಷಣಕಾಲ ನಿಲ್ಲುರಾಮ—ಕಣ್ತುಂಬ ಮನದಣಿಯ ನಿನ್ನನ್ನು ನೋಡು ತ್ತೇನೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ರಾಜ್ಯಾಭಿಷೇಕ ಮಾಡಿಸಿಕೊಳ್ಳುವ ರಾಮಚಂದ್ರ—ಇಕ್ಷ್ವಾಕು ಕುಲಲಲಾಮನಾದ ರಾಮಚಂದ್ರ ನನ್ನ ಮಗ ನೆಂದು ಎಷ್ಟು ಹೆಮ್ಮೆ ಪಡುತ್ತಿರುವೆನು ಬಲ್ಲೆಯಾ?"

ಸೆಟ್ಟಿನ ಮೇಲೆ ಬಂದ ನಿಂತ ತರುವಾಯವೇ ಶಾಮಲಾಬಾಯಿ ಪುಸ್ತಕ ತೆಗೆದು ನೋಡಿದುದು. ಸುದರ್ಶನರು ಆಕೆಯ ಸಮೀಪಕ್ಕೆ ಬಂದು

"ನಿಮ್ಮ ಮಾತುಗಳನ್ನು ಹೇಳಿ" ಎಂದರು.

ಶಾಮಲಾಬಾಯಿ ಪುಸ್ತಕವನ್ನು ಹಿಡಿದು ಓದಿದಳು

"ಕ್ಷಣಕಾಲ ನಿಲ್ಲು ರಾಮ—ಕಣ್ತುಂಬ ಮನದಣಿಯ ನಿನ್ನನ್ನು ನೋಡುತ್ತೇನೆ. ಇನ್ನು ಸೊಲ್ಪಒತ್ತಿನಲ್ಲಿ ರಾಜ್ಯಾಭಿಷೇಕ ಮಾಡಿಸಿಕೊಳ್ಳುವ ರಾಮಚಂದ್ರ—ಇಕ್ಷ್ವಾಕು—ಇಕ್ಷ್ವಾಕು—ಇಕ್ಷ್ವಾಕು ಕುಲಲಲಾಮನಾದ ರಾಮಚಂದ್ರನನ್ನು ಮಗನೆಂದು ಎಷ್ಟು ಎಮ್ಮೆ ಪಡುತ್ತಿರುವೆನು ಬಲ್ಲೆಯಾ?"

ಸುದರ್ಶನರು ಪ್ರತಿಶಬ್ದದ ಉಚ್ಚಾರಣೆಯನ್ನೂ ತಿದ್ದಲಾರಂಭಿಸಿದರು. ಕೌಸಲ್ಯೆಯ ಮಾತುಗಳನ್ನು ಒಂದು ರೂಪಕ್ಕೆ ತರಬೇಕಾದರೆ ಅರ್ಧಗಂಟೆ ಹಿಡಿಯಿತು. ಡೈರೆಕ್ಟರ್, ಕ್ಯಾಮರಾಮನ್ 'ಹೊತ್ತಾಯಿತು' ಎಂದು ಬೊಬ್ಬೆ ಹಾಕತೊಡಗಿದರು. 'ಆರ್ಟಿಸ್ಟ್ ಇನ್ನೂ ಸಿದ್ಧವಾಗಿಲ್ಲ' ಎಂದು ಸುದರ್ಶನರು ಅವರ ಬಾಯಿ ಮುಚ್ಚಿಸಿದರು. ಕೊನೆಯ ರಿಹರ್ಸಲ್ ನೋಡಿ 'ಷೂಟ್' ಎಂದರು.

ಶಾಮಲಾಬಾಯಿ ಬಹು ಪ್ರಯಾಸದಿಂದ 'ಕ್ಷಣಕಾಲದಿಂದ ರಾಮಚಂದ್ರನವರೆಗೆ' ಬಂದಳು. ಇಕ್ಷ್ವಾಕು ಶಬ್ದ ಅವಳ ಮುಳುವಾಯಿತು. ಅದನ್ನು ತಪ್ಪಿ ನುಡಿದೊಡನೆಯೇ ಸುದರ್ಶನರು 'ಕಟ್ – ಕಟ್' ಎಂದು ಕೂಗಿದರು.

ಮೊದಲಿನಿಂದ ಮತ್ತೆ ರಿಹರ್ಸಲ್ ಆಗಿ 'ಟೇಕ್'ಗೆ ಸಿದ್ಧವಾಯಿತು. ಈ ಸಾರಿ ನಾಲ್ಕನೆಯ ಶಬ್ದಕ್ಕೇ ಶಾಮಲಾಬಾಯಿ ಮುಗ್ಗರಿಸಿದಳು. ಅವಳು 'ಕಣ್ತುಂಬ' ಎಂದೊಡನೆಯೇ ಸುದರ್ಶನರು 'ಕಟ್' ಎನ್ನಬೇಕಾಯಿತು.

ಈ ಭಾಷಣದ ಒಟ್ಟು ಹನ್ನೊಂದು 'ಟೇಕ್'ಗಳಾದವು. ಇಡಿಯ ಸ್ಟೂಡಿಯೋ ಬೇಸತ್ತುಹೋಯಿತು. ತನಗಾಗಿದ್ದ ಅಪಮಾನಕ್ಕೆ ಶಾಮಲಾಬಾಯಿ ಹಣ್ಣಾಗಿ ಹೋಗಿದ್ದಳು. ಅವಳ ಕಣ್ತುಂಬ ನೀರು ತುಂಬಿತ್ತು. ಹನ್ನೆರಡನೆಯ ಸಲ ಸುದರ್ಶನರು ಬೇಸತ್ತು 'ಓಕೆ' (O.K.) ಎಂದರು.

ಸುದರ್ಶನರಿಗೆ ಒಳಗೇ ಕುದಿಯುತ್ತಿದ್ದ ಅಸಮಾಧಾನ ಉಕ್ಕಿಬಂತು. ಆಯಾಸ, ಬೇಸರಿಕೆ, ಕಂಠಶೋಷಣೆಯಿಂದ ಅವರ ಮುಖ ಕಾದಕಬ್ಬಿಣದಂತೆ ಕೆಂಪಾಗಿತ್ತು. ಶಾಮಲಾಬಾಯಿಯ ಕಡೆ ತಿರುಗಿ

" ಶಾಮಲಾಬಾಯಿಯವರೇ, ನೀವು ಮುಂಬಯಿಯ ದೊಡ್ಡ ಸ್ಟಾರು. ರಿಹರ್ಸಲ್ ಕೂಡ ಮಾಡದೆ, ಸಂಭಾಷಣೆ ಗಟ್ಟಿಮಾಡದೆ ಹಿಂದಿ, ಮರಾಟಿ ಚಿತ್ರಗಳಲ್ಲಿ ಅಭಿನಯಿಸಬಲ್ಲ ಪ್ರತಿಭಾಶಾಲಿಗಳು. ಕನ್ನಡದ ಎರಡು ಪಂಕ್ತಿ ಹೇಳುವುದಕ್ಕೆ ಹನ್ನೊಂದು ಸಲ ಮುಗ್ಗರಿಸಿದಿರಿ. ಕನ್ನಡವೆಂದರೆ ನಿಮಗೆ ಮಕ್ಕಳಾಟವಲ್ಲವೇ ? ಕಾಲು ನಿಮಿಷದ ಎರಡು ಪಂಕ್ತಿಗೆ ಎರಡೂವರೆ ಗಂಟೆ ವ್ಯರ್ಥವಾಯಿತು – ಸುಮಾರು ಆರುನೂರು ಅಡಿ ಫಿಲ್ಮ್ ದಂಡವಾಯಿತು. ಒಪ್ಪಿಕೊಂಡಿರುವ ಕೆಲಸ ಮಾಡುವುದಕ್ಕೆ ಇಷ್ಟವಿಲ್ಲದಿದ್ದರೆ ಬಿಟ್ಟು ಬಿಡುವುದೊಳ್ಳೆಯದು."

ಎಂದರು. ಶಾಮಲಾಬಾಯಿಯ ಕಣ್ಣಲ್ಲಿ ಪ್ರವಾಹವೇ ಹೊರಟು ಬಿಟ್ಟಿತು. ಅವಳು ಮೆಲ್ಲನೆ ಸುದರ್ಶನರ ಬಳಿಗೆ ಬಂದು

"ಅಣ್ಣಾ, ನನ್ನದು ತಪ್ಪಾಯಿತು. ನಾಳೆಯಿಂದ ನೀವು ಹೇಳಿ ಕೊಟ್ಟಂತೆ ಮಾಡುತ್ತೇನೆ. ಯಾವಾಗ ಬೇಕಾದರೂ ರಿಹರ್ಸಲ್ಲಿಗೆ ಬರುತ್ತೇನೆ" ಎಂದಳು.

ಕಂಪೆನಿಯ ಜನಗಳು, ಸ್ಟೂಡಿಯೋ ಜನಗಳು ಎಲ್ಲರೂ ಸುದರ್ಶನರ ನಡತೆಯನ್ನು ಮೆಚ್ಚಿಕೊಂಡರು, ಶಾಮಲಾಬಾಯಿಗಾದ ಅಪಮಾನ ಕಂಡು ಎಲ್ಲರಿಗಿಂತ ಹೆಚ್ಚು ಸಂತೋಷಿಸಿದವರು ಸರೋಜ, ಭಾಗ್ಯಮ್ಮ.

ಅಂದಿನ ಷೂಟಿಂಗ್ ಮುಂದುವರಿಸಿ ಪ್ರಯೋಜನವಿಲ್ಲವೆಂದರಿತುಕೊಂಡ ಸುದರ್ಶನರು ಷೂಟಿಂಗ್ ನಿಲ್ಲಿಸಿದರು. ಮಾರನೆಯ ದಿನ ರಾತ್ರಿಗೆ ಕಾಲ್-ಷೀಟ್ ತೆಗೆದುಕೊಳ್ಳಲಾಯಿತು.

ಬೆಳಿಗ್ಗೆ ಕಂಪೆನಿ ಮನೆಗೆ ಎಲ್ಲರಿಗಿಂತ ಮುಂಚೆ 'ರಿಹರ್ಸಲ್'ಗೆ ಬಂದವಳು ಶಾಮಲಾಬಾಯಿ. ಅತ್ಯಂತ ಶ್ರದ್ಧೆಯಿಂದ ಭಕ್ತಿಯಿಂದ ತನ್ನ ಉಚ್ಚಾರಣೆ ಗಳನ್ನೆಲ್ಲಾ ತಿದ್ದಿಕೊಂಡು ರಿಹರ್ಸಲ್ ಮುಗಿಸಿಕೊಂಡಳು. ಹೊರಡುವ ಮುನ್ನ ಸುದರ್ಶನರಿಗೆ

"ನಿನ್ನೆ ಅಣ್ಣಾವರು ತುಂಬ ಕೋಪಮಾಡಿಕೊಂಡು ಬಿಟ್ಟರು."

"ಫಿಲಂ ಕೆಲಸದಲ್ಲಿ ನುರಿತ ನೀವೇ ಉದಾಸೀನ ಮಾಡಿದರೆ ಕೋಪ ಬರದಿರುತ್ತದೆಯೇ? ನಮ್ಮನ್ನು ನಂಬಿಕೊಂಡು ಈ ಫಿಲ್ಮಿಗೆ ಕೈಹಾಕಿದವರು ಉದ್ಧಾರವಾಗಬೇಕೋ ಬೇಡವೋ?"

"ಶ್ರದ್ಧೆಯಿಂದ ಕೆಲಸ ಮಾಡುತ್ತೇನಣ್ಣಾ. ನೀವು ಬೇಸರ ಪಟ್ಟು ಕೊಳ್ಳಬೇಡಿ."

ಎಂದು ಹೇಳಿದಳು.

ಅಂದೇ ರಾತ್ರಿ ಶಾಮಲಾಬಾಯಿ ಸೆಟ್ಟಿನ ಮೇಲೆ ತನ್ನ ಕಲಾನೈಪುಣ್ಯ ವನ್ನು ತೋರಿಸದೆ ಬಿಡಲಿಲ್ಲ. ಆಕೆಯ ಮುಖದಲ್ಲಿ ತೇಲಿದ ಭಾವಗಳು, ಆವಳ ಭಂಗಿಯಲ್ಲಿನ ಕಲಾವಂತಿಕೆಯನ್ನು ಕಂಡು ಸುದರ್ಶನರು ಮುಗ್ಧರಾಗಿ ಬಿಟ್ಟರು. ಷೂಟಿಂಗ್ ಮುಗಿದೊಡನೆ ಆಕೆಯ ಬಳಿ ಹೋಗಿ

"ಶಾಮಲಾಬಾಯಿ, ನೀವು ನಿಜವಾಗಿ ದೊಡ್ಡ ಕಲಾವಿದರು. ಪ್ರತಿಭಾ ಶಾಲಿಗಳು. ಅದರಲ್ಲಿ ಸಂದೇಹವೇ ಇಲ್ಲ. ಇಂದಿನ ನಿಮ್ಮ ಅಭಿನಯ ನನ್ನನ್ನು ವಿಸ್ಮಯಿಗೊಳಿಸಿದೆ."

ಸುದರ್ಶನರ ಸುಹೃದಯತೆ, ಕಲಾಭಿಮಾನ ಕಂಡು ಶಾಮಲಾಬಾಯಿಗೆ ಆಶ್ಚರ್ಯವೇ ಆಯಿತು.

"ನಿನ್ನೆ ನೀವೇ ನನ್ನನ್ನು ಬಯ್ದಿರಲ್ಲಣ್ಣಾ."

"ಹೌದು ತಾಯಿ ಬಯ್ದಿ. ನಿಮ್ಮ ಅಹಂಕಾರವನ್ನು ಪ್ರತಿಭಟಿಸಿದೆ– ಆದರೆ ನಿಮ್ಮಲ್ಲಿ ಮೂರ್ತೀಭವಿಸಿರುವ ಕಲಾಸಿರಿಗಿದೋ ಕೈಮುಗಿಯುತ್ತಿದ್ದೇನೆ." ಎಂದರು.

೨೩

ಒಂದು ಬೆಳಿಗ್ಗೆ ಕಂಪೆನಿ ಮನೆಯಲ್ಲಿ ರಿಹರ್ಸಲ್ ನಡೆಯುತ್ತಿದ್ದಾಗ ಸುಬ್ಬಯ್ಯರ್, ವೆಂಕಟಾಚಲಂ ಬಂದು ರಿಹರ್ಸಲ್ ಮುಗಿಯುವವರೆಗೆ ಕಾದಿದ್ದು ತರುವಾಯ ಸುದರ್ಶನರಿಗೆ

"ನಾಳೆ ಬುಧವಾರ ಸಾಯಂಕಾಲ ಪಾರ್ಟಿ ಇಟ್ಟುಕೊಳ್ಳುವುದೆಂದು ನಿಶ್ಚಯಿಸಿದ್ದೇವೆ ನೀವು ಒಪ್ಪಿಕೊಳ್ಳಬೇಕು" ಎಂದು ಹೇಳಿದರು.

"ಯಾವ ಪಾರ್ಟಿ?"

"ಇಲ್ಲಿರುವ ತಮಿಳು ಲೇಖಕರು ನಿಮ್ಮ ಪರಿಚಯ ಮಾಡಿಕೊಳ್ಳಬೇಕೆಂದಿರುವ ವಿಷಯ ತಿಳಿಸಿದೆನಲ್ಲಾ."

"ಅದಕ್ಕೆ ಪಾರ್ಟಿಯೇಕೆ? ನೀವು ಯಾವಾಗ ಹೇಳಿದರೂ ನಾನು ಬರುವುದಕ್ಕೆ ಸಿದ್ಧವಾಗಿರುವೆನಲ್ಲಾ."

"ಅದು ಗೌರವವೇ ಸರ್? ನಿಮ್ಮನ್ನು ಕರೆದ ಮೇಲೆ ಸರಿಯಾದ ವ್ಯವಸ್ಥೆ ಮಾಡಲೇಬೇಕು. ನೀವು ಒಪ್ಪಿಗೆಯಿತ್ತರೆ ಆಹ್ವಾನ ಪತ್ರಿಕೆ ಅಚ್ಚಿಗೆ ಕಳಿಸುತ್ತೇವೆ. ನಿಮ್ಮ ಕಂಪೆನಿಯವರೆಲ್ಲರೂ ಬರಬೇಕು."

"ನೀವೇ ಎಲ್ಲರನ್ನೂ ಕರೆದುಬಿಡಿ."

"ಹಾಗೇ ಆಗಬಹುದು. ನಿಮ್ಮ ಪರಿಚಯ ಮಾಡಿಕೊಳ್ಳಬೇಕಾಗುತ್ತದೆ. ನಿಮ್ಮ ಜೀವನ ಚರಿತ್ರೆ, ಸಾಹಿತ್ಯಸೇವೆ, ಕಲಾಸೇವೆಯ ಬಗ್ಗೆ ಕೆಲವು ವಿಷಯಗಳನ್ನು ತಿಳಿಸಬೇಕು."

"ನನ್ನ ವಿಷಯ ಹೇಳಿಕೊಳ್ಳುವುದೇನಿದೆ? ನಾನೊಬ್ಬ ಶ್ರಮಜೀವಿ ಲೇಖಕ. ಕನ್ನಡವನ್ನು ದೃಢವಾಗಿ ನಂಬಿರುವವನು. ಕನ್ನಡದ ಮೇಲೆ ನನಗಿರುವ ಪ್ರೇಮವೇ ಇತರ ಭಾಷೆಗಳನ್ನೂ ಪ್ರೀತಿಸುವಂತೆ ಮಾಡಿದೆ. ಯಾವ ಶಕ್ತಿಯೋ ನನ್ನನ್ನು ಸಾಹಿತ್ಯಕ್ಕೆ ಗಂಟುಹಾಕಿತು. ಸಾಹಿತ್ಯವನ್ನು ನಂಬಿಕೊಂಡು ನಾನು ಜೀವನ ಸಾಗಿಸುವುದೂ ಕಷ್ಟವಾಯಿತು. ಇದಕ್ಕಾಗಿ ಪರಿತಪಿಸಿದೆ. ನಾನು ಸಾಹಿತ್ಯಸೇವೆ ಆರಂಭಿಸಿದ ಕಾಲದಲ್ಲಿ ಅದೇ ತಾನೇ ಕನ್ನಡದ ನವೋದಯ ಆರಂಭವಾಗಿತ್ತು. ಕೆಲವು ಪ್ರತಿಭಾಶಾಲಿಗಳಾದ ಹಿರಿಯರು ಮಾರ್ಗದರ್ಶನ ಮಾಡಿದರು. ಅವರ ಶಿಷ್ಯರು ಆ ಮಾರ್ಗಗಳಲ್ಲಿ

ನಡೆದರು. ಆ ಕಾಲಕ್ಕೆ ನಮ್ಮಲ್ಲಿ ಒಳ್ಳೊಳ್ಳೆಯ ಭಾವಗೀತೆಗಳೂ, ಸಣ್ಣ ಕಥೆಗಳೂ ಬಂದವು. ಆಲೂರ ವೆಂಕಟರಾಯರು, ಬಿ. ಎಂ. ಶ್ರೀಯವರು, ಪಂಜೆ ಮಂಗೇಶರಾಯರು, ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು, ಡಿ. ವಿ. ಗುಂಡಪ್ಪನವರು, ಪಂಡಿತ ತಾರಾನಾಥರು, ಟಿ. ಪಿ. ಕೈಲಾಸಂ ನಮ್ಮ ಸಾಹಿತ್ಯದ ಆಚಾರ್ಯ ಪುರುಷರು."

"ಕೈಲಾಸಂ ಕನ್ನಡದಲ್ಲಿ ಬರೆದಿದ್ದಾರೆಯೇ ?"

"ಅವರು ಬರೆದಿರುವುದೇ ಕನ್ನಡದಲ್ಲಿ. ಕನ್ನಡದಲ್ಲಿ ೫೦-೬೦ ನಾಟಕ ಗಳನ್ನು ಬರೆದಿದ್ದಾರೆ ಇಂಗ್ಲಿಷ್, ತಮಿಳು, ಮಲಯಾಳಿ ಭಾಷೆಗಳಲ್ಲಿಯೂ ಬರೆದಿದ್ದಾರೆ. ನೀವು ಅವರನ್ನು ಬಲ್ಲಿರಾ ?"

"ಚೆನ್ನಾಗಿ ಬಲ್ಲೆ ಸರ್. ಅದ್ಭುತವ್ಯಕ್ತಿ. ನಾನು ಅಂಥ ವ್ಯಕ್ತಿಯನ್ನೇ ನೋಡಿಲ್ಲ. ಅವರ ಇಂಗ್ಲಿಷೇನು – ತಮಿಳೇನು ! ಅವರ ಮುಂದೆ ತಮಿಳು ಮಾತನಾಡುವುದಕ್ಕೆ ನಮಗೆ ಭಯವಾಗುತ್ತಿತ್ತು. ನಾನು ಆಗ ಕ್ರಿಶ್ಚಿಯನ್ ಕಾಲೇಜಿನ ಯೂನಿಯನ್ ಸೆಕ್ರೆಟರಿಯಾಗಿದ್ದೆ. ಕೈಲಾಸಂ ಅವರನ್ನು ಅನೇಕ ಸಲ ನಮ್ಮ ಯೂನಿಯನ್ನಿಗೆ ಕರೆದುಕೊಂಡು ಹೋಗಿದ್ದೆ. ನಿಮಗೂ ಕೈಲಾಸಂ ಅವರಿಗೂ ತುಂಬ ಪರಿಚಯವಿದ್ದಿರಬೇಕು."

"ತುಂಬ ಸ್ನೇಹವೇ ಇತ್ತು. ಅವರ ಎಷ್ಟೋ ನಾಟಕಗಳಲ್ಲಿ ನಾನು ಪಾತ್ರವಹಿಸಿದ್ದೇನೆ."

"ನವೋದಯ ಕಾಲದ ಹಿರಿಯರ ವಿಷಯ ಏನೋ ಹೇಳುತ್ತಿದ್ದಿರಿ."

"ಈ ಹಿರಿಯರ ಶಿಷ್ಯರಲ್ಲಿ ಕೆಲವರು ಮಾತ್ರ ಸ್ವತಂತ್ರ ಮಾರ್ಗಗಳನ್ನು ಆವಿಷ್ಕಾರಮಾಡಿಕೊಂಡರು. ಅವರಲ್ಲಿ ಕೆ. ವಿ. ಪುಟ್ಟಪ್ಪ, ದ. ರಾ. ಬೇಂದ್ರೆ, ಶಿವರಾಮ ಕಾರಂತ ಇವರೇ ಮುಖ್ಯರಾದವರು. ನಮ್ಮ ನವೋದಯದ ಹಿರಿಯರ ಶಿಷ್ಯನಾಗುವ ಪುಣ್ಯ ನನಗೆ ಲಭಿಸಲಿಲ್ಲ. ನನ್ನ ಸಂಸ್ಕಾರ ಎಳೆದ ಕಡೆಗೆ ನಾನು ಹೋದೆ. ನನ್ನ ಸ್ವತಂತ್ರವೃತ್ತಿ ಆಕಾಲದ ನಮ್ಮ ಸಾಹಿತಿ ಗಳಿಗೆ ಸ್ವಚ್ಛಂದವೃತ್ತಿ ಎನಿಸಿತು. ನನ್ನ ಸಾಹಿತ್ಯದ ಮೇಲೆ ಪ್ರತ್ಯಕ್ಷವಾಗಿ ಪರೋಕ್ಷವಾಗಿ ಗದಾಪ್ರಹಾರ ಆರಂಭವಾಯಿತು. ಹೊರಗೆ ಈ ವೇದನೆ ನನಗೆ. ಒಳಗಿನ ವೇದನೆ ಕೇಳಿ. ನಮ್ಮ ಮನೆಯಲ್ಲಿ ಯಾರಿಗೂ ನನ್ನ ಸಾಹಿತ್ಯಬೇಕಿಲ್ಲ. ಸಾಹಿತ್ಯದ ಬಿಸಿಲ್ಗುದುರೆಯನ್ನು ಮರೆತು ನಾನೂ ಎಲ್ಲ ರಂತೆ ಒಂದು ಡಿಗ್ರಿ ತೆಗೆದುಕೊಂಡು ಯಾವದಾದರೂ ನೌಕರಿ ಹಿಡಿಯ ಬೇಕೆಂದು ಮನೆಯವರ ಆಕಾಂಕ್ಷೆ. ಒಳಗಿನ, ಹೊರಗಿನ ವೇದನೆಗಳ ಜತೆಗೆ ದಾರುಣವಾದ ಬಡತನ. ಪುಸ್ತಕ ಕೊಳ್ಳಲು ದುಡ್ಡಿಲ್ಲ. ಲೇಖನ

ಸಾಮಗ್ರಿ ಕೊಳ್ಳಲು ಕಾಸಿಲ್ಲ. ಮೈಮುಚ್ಚುವಂತೆ ನಾಲ್ಕು ಬಟ್ಟೆ ಹೊಲಸಿ ಕೊಳ್ಳಲು ಹಣವಿಲ್ಲ. ಹೀಗೇ ಸುಮಾರು ಇಪ್ಪತ್ತು ವರ್ಷಗಳು ತಳ್ಳಿದೆ. ಹಣದ ತಾಪತ್ರಯಕ್ಕೆ ಸಿಕ್ಕಿ, ಸಾಲ ಕೊಟ್ಟವರಿಂದ ಕೇಳಬಾರದ ಮಾತು ಗಳನ್ನು ಕೇಳಿದಾಗ ಸಾಹಿತ್ಯಕ್ಕೆ ತಿಲತರ್ಪಣ ಕೊಟ್ಟು ಯಾವದಾದರೂ ವೃತ್ತಪತ್ರಿಕೆಯ ಕಛೇರಿಯಲ್ಲಿ ಕೂಲಿಗೆ ಸೇರಿಕೊಳ್ಳುವ ಎಂದು ಮನಸ್ಸಾಗು ತ್ತಿತ್ತು. ಆದರೆ ಯಾವದೋ ದೈವ ನನ್ನ ಕೈಹಿಡಿದು ಸಾಹಿತ್ಯ ಮಾರ್ಗ ದಲ್ಲಿಯೇ ನಡೆಸುತ್ತಿತ್ತು."

"ಈಗಲಾದರೂ ನಿಮ್ಮ ಪರಿಸ್ಥಿತಿ ಸುಧಾರಿಸಿದೆಯೇ?"

ಸ್ವಲ್ಪ ಸುಧಾರಿಸಿದೆಯೆನ್ನಬಹುದು. ಜನ ನನ್ನ ಪುಸ್ತಕಗಳನ್ನು ಓದಲಾರಂಭಿಸಿದ್ದಾರೆ. ನನ್ನ ವಿಚಾರಗಳನ್ನು ಗಂಭೀರವಾಗಿ ಚರ್ಚೆಮಾಡು ತ್ತಾರೆ. ಅಪಪ್ರಚಾರ ಮಾಡುವವರೂ, ಈರ್ಷೆಯಿಂದ ತೆಗಳುವವರೂ ಇದ್ದೇ ಇದ್ದಾರೆ. ರಷ್ಯದ ಬಗ್ಗೆ ನಾನು ಒಂದು ಒಳ್ಳೆಯ ಮಾತು ಆಡಿದಾಗ 'ಇವನಿಗೆ ಮಾಸ್ಕೋಯಿಂದ ಹಣ ಬರುತ್ತಿದೆ. ಅದಕ್ಕೆ ರಷ್ಯಾ ಪ್ರಚಾರ ಮಾಡುತ್ತಾನೆ' ಎಂದು ಕೆಲವರಂದರು. ಅಮೇರಿಕೆಯಲ್ಲಿಯೂ ಮನುಷ್ಯರಿದ್ದಾರೆ. ಆ ದೇಶವೂ ವ್ಹಿಟ್‌ಮನ್, ಕಾರ್ಲ್ ಸಾಂಡ್‌ಬರ್ಗ್, ರಾಬರ್ಟ್ ಫ್ರಾಸ್ಟ್ ಮೊದಲಾದ ಮಹಾ ಕವಿಗಳಿಗೆ ಜನನವಿತ್ತಿದೆಯೆಂದರೆ 'ಇವನಿಗೆ ಅಮೇರಿಕೆಯಿಂದ ಹಣ ಬರುತ್ತಿದೆ. ಯಾಂಕಿಗಳ ಪ್ರಚಾರ ಮಾಡುತ್ತಾನೆ' ಎಂದು ನಮ್ಮ ಕಮ್ಯೂನಿಸ್ಟ್ ಮಿತ್ರ ರೆಂದರು. ಈ ಪ್ರಚಾರ, ಅಪಪ್ರಚಾರಗಳಿಂದ ಆಗುವದೇನು, ಹೋಗುವುದೇನು ಹೇಳಿ. ಸತ್ಯಸೂರ್ಯನ ಮೇಲೆ ಸ್ವಲ್ಪಕಾಲ ಮೋಡ ಮುಸುಕ ಹಾಕ ಬಹುದು. ಆದರೆ ಅವನನ್ನು ಸದಾ ಮುಚ್ಚಿಡಲು ಸಾಧ್ಯವೇ?"

"ನಿಮ್ಮ ಸಾಹಿತ್ಯದ ಮೂಲೋದ್ದೇಶವೇನು?"

"ಹಾಗೆಂದರೆ?"

"ಯಾವ ಧ್ಯೇಯವನ್ನು ನೀವು ಸಾಹಿತ್ಯದ ಮೂಲಕ ಸಾಧಿಸಲು ಹೊರಟಿದ್ದೀರಿ?"

"ಅದು ಬಹಳ ದೊಡ್ಡ ಪ್ರಶ್ನೆಯಾಯಿತು. ನಾಲ್ಕು ಮಾತುಗಳಲ್ಲಿ ನಿಮಗೆ ಸಮಂಜಸವಾಗಿ ಉತ್ತರ ಹೇಳುವುದಕ್ಕೆ ಸಾಧ್ಯವಾಗುವುದೋ ಇಲ್ಲವೋ? ಇಂದು ನಮ್ಮ ದೇಶದಲ್ಲಿ – ಅದೂ ೧೯೪೭ ರ ತರುವಾಯ ನಾನಾ ಶಕ್ತಿಗಳ ತಾಂಡವ ಆರಂಭವಾಗಿದೆ. ೧೯೪೭ ರ ಮುಂಚೆ ಇದ್ದುದು ಒಂದೇ ಶಕ್ತಿಯ ಆಘಾತ. ಸಂಘಟಿತ ಪ್ರಯತ್ನ ಮಾಡಿದಲ್ಲದೆ ಈ ದೇಶ ಸ್ವತಂತ್ರ ವಾಗುವುದಿಲ್ಲ – ಪರಕೀಯರ ವಜ್ರಮುಷ್ಠಿಯಿಂದ ಪಾರಾಗುವುದಿಲ್ಲ ಎಂದು

ಗಾಂಧೀಜಿ ಸಾರಿದರು. ಭಿನ್ನಭಿನ್ನ ಮನೋಭಾವಗಳ ಜನರನ್ನು ಕಾಂಗ್ರೆಸ್ಸಿನಲ್ಲಿ ಕಲೆಹಾಕಿ ಸಾಮ್ರಾಜ್ಯಶಾಹಿಯ ಪಾಶವೀಶಕ್ತಿಯ ವಿರುದ್ಧ ಮಹಾ ಸಮರ ಹೂಡಿದರು. ಅವರ ಪ್ರಯತ್ನ – ತಪಸ್ಸಿನಿಂದಾಗಿ ನಮಗೆ ೧೯೪೭ರಲ್ಲಿ ಸ್ವಾತಂತ್ರ್ಯ ಲಭಿಸಿತು. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ಸಂಘಟನೆ ನುಚ್ಚುನೂರಾಯಿತು. ಗುರಿ ಮುಟ್ಟುವುದರಷ್ಟೇ ಮುಖ್ಯವಾದುದು ಗುರಿಯ ಗೌರವವನ್ನು ಉಳಿಸಿಕೊಳ್ಳುವುದು ಎನ್ನುವ ತತ್ತ್ವ ನಮ್ಮ ಜನಕ್ಕೆ ಮರೆತು ಹೋಯಿತು. ಮುಸ್ಲಿಂ ಲೀಗ್, ಹಿಂದೂ ಮಹಾಸಭೆ, ಆರ್. ಎಸ್. ಎಸ್. ಷೆಡ್ಯೂಲ್ಡ್ ಕಾಸ್ಟ್ಸ ಫೆಡರೇಷನ್, ದ್ರಾವಿಡ ಕಜಗಂ ಮೊದಲಾದ ಕೋಮುವಾರು ಭೂತಗಳು ತಲೆಯೆತ್ತಿನಿಂತವು. ಇವುಗಳನ್ನೆದುರಿಸಿ ದೇಶಕ್ಕೆ ಶಾಂತಿ, ಸೌಖ್ಯ, ಸುಭಿಕ್ಷೆಯನ್ನೊದಗಿಸಬಲ್ಲ ಕಾಂಗ್ರೆಸ್ ನೀತಿಭ್ರಷ್ಟವಾಯಿತು. ಅಧಿಕಾರಕ್ಕೆ ಬಂದ ಕಾಂಗ್ರೆಸ್ಸಿನವರು ದರೋಡೆಕಾರರು, ಕಾಳಸಂತೆಕೋರರು, ಕೋಮುವಾರು ಭೂತಗಳು, ಭೋಗ ಪಶುಗಳು ಆದರು. ಕಾಂಗ್ರೆಸ್ಸಿನ ದೌರ್ಬಲ್ಯದ ನೆಳಲಿನಲ್ಲಿ ಹಿಂಸಾಮಾರ್ಗಕ್ಕೆ ತಾಳಿಕಟ್ಟಿದ ಕಮ್ಯೂನಿಸ್ಟ್ ಪಾರ್ಟಿ, ಗಂಟೆಗೊಂದು ಅಸಂಬದ್ಧ ಮಾತನಾಡುವ ಸೋಷಿಯಲಿಸ್ಟ್ ಪಾರ್ಟಿ, ಕೂಲಿಗಾರರ, ರೈತರ ಎದೆರಕ್ತವನ್ನು ಕುಡಿದು ಬದುಕುವ ಕಿಸಾನ್ – ಮಜ್‌ದೂರ್ ಪಾರ್ಟಿಗಳು ಪ್ರಬಲವಾದವು. ಸಾಮಾನ್ಯ ನಾಗರಿಕನ ಮನಸ್ಸು ಅಲ್ಲೋಲ ಕಲ್ಲೋಲವಾಯಿತು. ಅವನು ಯಾರನ್ನು ನಂಬಬೇಕು – ಯಾರ ಅಭಿಪ್ರಾಯವನ್ನು ಅಂಗೀಕರಿಸಬೇಕು – ಯಾರನ್ನು ತನ್ನ ಹಿತೈಷಿಗಳೆಂದೆಣಿಸಬೇಕು ? ಸಾಹಿತ್ಯ ಈ ಮಹಾಸಮಸ್ಯೆಯನ್ನು ಬಿಡಿಸಬೇಕು. ರಾಜಕೀಯ ಸ್ವಾರ್ಥಿಗಳು, ಕೋಮುವಾರು ಅಗ್ನಿ ಭಕ್ಷಕರು ಮಾಡಿರುವ ಹೊಲಸು ತೊಳೆಯಬೇಕಾದ ಉತ್ತರವಾದಿತನ ಸಾಹಿತಿಯ ಮೇಲೆ ಬಿದ್ದಿದೆ."

"ರಾಜಕೀಯ ಮುಖಂಡರು, ಲೋಕನಾಯಕರು ಮಾಡಲಾಗದುದನ್ನು ಸಾಹಿತಿ ಹೇಗೆ ಮಾಡಬಲ್ಲ."

"ರಾಜಕೀಯ ಮುಖಂಡರಿಗೂ, ಲೋಕನಾಯಕರಿಗೂ 'ನಾನು – ನನ್ನವರು' ಎನ್ನುವುದೇ ಮುಖ್ಯ. ತಮ್ಮ ಪ್ರಭಾವವನ್ನುಳಿಸಿಕೊಳ್ಳುವುದಕ್ಕೆ ಅವರು ಪಕ್ಷಭೂತಕ್ಕೆ ಆಜ್ಯ ಹುಯ್ಯುತ್ತಲೇ ಇರಬೇಕಾಗುತ್ತದೆ. ಸಾಹಿತಿ ಅಧಿಕಾರ, ಪದವಿ, ಶ್ರೀಮಂತಿಕೆಯನ್ನು ಬಯಸುವುದಿಲ್ಲ. ಕೀರ್ತಿಯನ್ನು ಕೂಡ ಅವನು ಬಯಸುವುದಿಲ್ಲ. ಅಧಿಕಾರ, ಶ್ರೀಮಂತಿಕೆ, ಕೀರ್ತಿಗಳಿಗಿಂತಲೂ ಶ್ರೇಷ್ಠವಾದುದು ಸತ್ಯ – ಸುಂದರ – ಶಕ್ತಿಗಳ ಆರಾಧಕನಾದವನಿಗೆ ಪ್ರಧಾನವಾದುದು ಯಾವದು, ಗೌಣವಾದುದು ಯಾವುದು ; ಅಮರವಾದುದು

ಯಾವದು ಮರವಾದುದು ಯಾವದು; ತಾತ್ಕಾಲಿಕ ಚಾಪಲ್ಯವನ್ನು ಪೂರೈಸುವುದು ಯಾವದು, ನಿತ್ಯಸುಖವನ್ನು ನೀಡುವುದು ಯಾವದು ಎನ್ನುವ ತಾರತಮ್ಯ ಜ್ಞಾನ ನೀವೇ ಯೋಚನೆ ಮಾಡಿ—ಹೋಮರ್, ಕಾಳಿದಾಸ, ಷೇಕ್ಸ್‌ಪಿಯರ್, ಬಾಲ್‌ಜಾಕ್, ವ್ಹಿಟ್‌ಮನ್, ಷೆಲ್ಲಿ ಜಗತ್ತಿಗೆ ಮಾಡಿರುವ ಉಪಕಾರಕ್ಕೆ ಯಾವ ರಾಜಕಾರಣಿಯ ಸೇವೆಯನ್ನು ಹೋಲಿಸಬಹುದು. ರಾಜಕಾರಣಿ ಜನತೆಯನ್ನು ಒಡೆಯುತ್ತಾನೆ, ಸಾಹಿತಿ ಕೂಡಿಸುತ್ತಾನೆ; ರಾಜಕಾರಣಿ ಪಕ್ಷಬದ್ಧ, ಸಾಹಿತಿ ಪಕ್ಷಾತೀತ; ರಾಜಕಾರಣಿ ಸಾಸಕ್ತ, ಸಾಹಿತಿ ಅನಾಸಕ್ತ. ಗಾಂಧೀಜಿ ಕೇವಲ ರಾಜಕಾರಣಿಗಳಾಗಿದ್ದರೆ ಜನ ಎಂದೋ ಅವರನ್ನು ಮರೆಯುತ್ತಿದ್ದರು. ಅವರ ರಾಜಕಾರಣಕ್ಕೆ ಪಾರಿಶುದ್ಧತೆಯ ಪುಟಗೊಟ್ಟುದು ಅವರ ದರ್ಶನ, ಕಾವ್ಯಜೀವನ."

"ನೀವು ಬರೆದಿರುವ ಗ್ರಂಥಗಳ ಮೇಲೆ ನಾಲ್ಕು ಮಾತು ಹೇಳಬಲ್ಲಿರಾ?"

"ಏನು ಹೇಳಲಿ—ಕಾವ್ಯ, ಕಥೆ, ನಾಟಕ, ಪ್ರಬಂಧ, ಕಾದಂಬರಿ, ಚಿತ್ರ–ನಾಟಕ, ವಿಮರ್ಶೆ ಎಲ್ಲಾ ಬರೆದಿದ್ದೇನೆ. ಎಲ್ಲ ಸಾಧನಗಳ ಮೂಲಕ ತ್ರಿಕರಣಪೂರ್ವಕವಾಗಿ ಸತ್ಯವನ್ನನುಸರಿಸುತ್ತಿದ್ದೇನೆ."

ಬೆಳಿಗ್ಗೆ ಇಲ್ಲಿಗೆ ಬಂದು ಸುದರ್ಶನರನ್ನು ಕಂಡುದು ಸಾರ್ಥಕವಾಯಿತೆಂದು ಸುಬ್ಬಯ್ಯರ್ ಭಾವಿಸಿದರು. ಅವರು ಹೊರಡುವ ಮುನ್ನ ಕಂಪೆನಿಯ ಎಲ್ಲ ಮುಖ್ಯಾಧಿಕಾರಿಗಳನ್ನೂ ಕಂಡು 'ಪಾರ್ಟಿ'ಗೆ ಆಹ್ವಾನಿಸಿದರು.

೨೪

ಒಂದೆರಡು ದಿನಗಳ ತರುವಾಯ ಚಿನ್ನಪ್ಪ ವಿಶೇಷ ಸುದ್ದಿಯೊಂದನ್ನು ತೆಗೆದುಕೊಂಡು ಸುದರ್ಶನರಲ್ಲಿ ಬಂದ. ಅವನ ಹಾಹಾ, ಹೂಹೂಗಳೂ ಉದ್ಗಾರಗಳೂ ಮುಗಿದ ಮೇಲೆ ಸುದರ್ಶನರು ಕೇಳಿದರು.

'ಏನಾಯಿತು ಚಿನ್ನಪ್ಪನವರೇ. ನಿಮ್ಮ ಮನಸ್ಸು ತುಂಬ ಕಲಕಿ ಹೋಗಿರುವ ಹಾಗೆ ಕಾಣುತ್ತದೆ."

"ಹೌದು, ಸ್ವಾಮಿ. ನಾನೂ ನಾಟಕದ ಕಂಪೆನಿಯಲ್ಲಿ ನುರಿತವನು. ಬೇಕಾದಷ್ಟು ಪ್ರಪಂಚ ನೋಡಿದವನು. ಆದರೆ ಜನಗಳ ಅಂದಾಜೇ ಹಿಡಿಯುವುದು ಸಾಧ್ಯವಿಲ್ಲ."

"ಏನಾಯಿತು ಹೇಳಿ."

"ನಮ್ಮ ಡೈರೆಕ್ಟರ್ ಏನೋಂತಿದ್ದೆ. ಮಹಾ ಲಫಂಗ ಸ್ವಾಮಿ."

"ಏಕೆ! ನಮ್ಮ ಆರ್ಟಿಸ್ಟ್‌ರು ಯಾರನ್ನಾದರೂ ಮಾತನಾಡಿಸಿದರೇನು?"

"ಮಾತನಾಡಿಸಿದರೆ ಬುರುಡೆಗೆ ಬಿಸಿನೀರು ಕಾಯಿಸಿಬಿಡುತ್ತೇನೆ. ಇವತ್ತು ಮಧ್ಯಾನ್ಹ ಪೇಟೆಯ ಕಡೆ ಹೋಗಬೇಕಾಗಿಬಂತು. ಹಿಂದಿರುಗುವಾಗ ಹಾಗೇ ಡೈರೆಕ್ಟರನ್ನು ಮಾತನಾಡಿಸಿಕೊಂಡುಬರೋಣ ಎಂದು 'ಎಂಬಾಸಿ ಹೊಟೇಲಿ'ಗೆ ಹೋದೆ. ದ್ವಾರಪಾಲಕ ರಾಜಣ್ಣ ಡ್ಯೂಟಿ ಮೇಲಿದ್ದ – 'ಡೈರೆಕ್ಟರ್ ಎಲ್ಲಿದ್ದಾರಯ್ಯ' ಎಂದು ಕೇಳಿದೆ. ಶುಶ್ ಮಾಡುತ್ತ ನನ್ನನ್ನು ದೂರ ಕರೆದುಕೊಂಡು ಹೋಗಿ 'ಯಾರೋ ಬಂದಿದ್ದಾರೆ, ಮಾತನಾಡುತ್ತಿದಾರೆ' ಎಂದು ಹೇಳಿದ. ನನಗೆ ಅನುಮಾನ ಬಂತು. 'ಇದ್ದ ಸಂಗತಿ ಇದ್ದ ಹಾಗೆ ಹೇಳದಿದ್ದರೆ ಕೆಲಸದಿಂದ ವಜಾ ಮಾಡಿಬಿಡುತ್ತೇನೆ' ಎಂದು ಬೆದರಿಕೆ ಹಾಕಿದೆ. ರಾಜಣ್ಣ ಎಲ್ಲಾ ವಿಷಯಗಳನ್ನೂ ಹೇಳಿದ. ಡೈರೆಕ್ಟರಿಗೆ ಬೆಳಿಗ್ಗೆ ಸಾಯಂಕಾಲ, ರಾತ್ರಿ ಇದೇ ಕೆಲಸವಂತೆ. ಸ್ಟುಡಿಯೋ 'ಎಕ್ಸ್ಟ್ರಾಸ್ ಏಜಂಟ್ಸ್' (Extras agents) ಎಲ್ಲರೂ ಅವರ ಸ್ನೇಹಿತರಂತೆ. ಸಾಹೇಬರಿಗೆ ಸತತವಾಗಿ ಹೆಣ್ಣು ಒದಗಿಸುತ್ತಾರಂತೆ. ಈ ಮನುಷ್ಯ ಬರುವಾಗ ಹೇಗೆ ಬಂದ – ಈಗ ಹೇಗಾದ ನೋಡಿ ಕೆಲಸ ನೋಡಿದರೋ ಹೊಟ್ಟೆಗೆ ಹಾಲು ಹುಯ್ದುಕೊಳ್ಳಬೇಕು. ನೀವು ಇರುವ ಹೊತ್ತಿಗೆ ನಮ್ಮ ಪಿಕ್ಚರು ಸಾಗುತ್ತಿದೆ. ಕುಡಿಯುವ ಅಭ್ಯಾಸವಿಲ್ಲ ಎಂದ, ಪೀಪಾಯಿಗಟ್ಟಳೆ ಹೀರುತ್ತಾನೆ; ಬೇರೆ ಹವ್ಯಾಸವಿಲ್ಲಾಂದ. ಮದರಾಸಿನ ಮಾಮಾಗಳೆಲ್ಲಾ ಇವನ ಪಟ್ಟಶಿಷ್ಯರು. ಎಂಥಾವನ್ನ ನಂಬಿ ಮೋಸ ಹೋದೆವು. ಗಂಟಲಲ್ಲಿ ಬಿಸಿ ಆಲೂಗೆಡ್ಡೆ ಇಟ್ಟುಕೊಂಡ ಹಾಗಾಯಿತಲ್ಲ. ಬಿಡೋಕೂ ಇಲ್ಲ – ಕಟ್ಟಿಕೊಳ್ಳೋಕೂ ಇಲ್ಲ."

"ಅವರು ಏನಾದರೂ ಮಾಡಿಕೊಳ್ಳಲಿ ನಮಗೇನು ಸಂಬಂಧ ಚಿನ್ನಪ್ಪನವರೇ. ನಮ್ಮ ಕೆಲಸಕ್ಕೆ ಅಡಚಣೆಯಾಗದಿದ್ದರೆ ಸರಿ."

"ಸಾಹುಕಾರರೂ ಊರಿನಲ್ಲಿರುವುದಿಲ್ಲ. ಈ ಮನುಷ್ಯನಿಗೆ ಆಡಿದಾಟ."

"ಸಾಹುಕಾರರು ಎಲ್ಲಿಗೆ ಹೋಗುತ್ತಾರೆ."

"ಬೆಂಗಳೂರಿಗೆ."

"ಅದೇನು?"

"ರಹಸ್ಯ ನಿಮ್ಮಲ್ಲಿ ಹೇಳುವುದಕ್ಕೇನಂತೆ. ಕೈಯಲ್ಲಿ ತಂದಿದ್ದ ದುಡ್ಡು ಮುಗಿದು ಹೋಯಿತು. ಬೆಂಗಳೂರಿಗೆ ಹೋಗಿ ಸೇಠ್ ಧನರಾಜನ ಹತ್ತಿರ ಹಣ ತರುವುದಕ್ಕೆ ಹೋಗುತ್ತಿದ್ದಾರೆ. ಸಂಬಳ ಸಾರಿಗೆ ಕೊಡಬೇಕಲ್ಲ, ನಿನ್ನೆ ಎಲ್ಲಾರಿಗೂ ನೂರು ನೂರು ರೂಪಾಯಿ ಕೊಡಿಸಿದೆ ಸ್ವಾಮಿ."

"ಯಾರು ಯಾರಿಗೆ."

"ವೆಂಕಟಾಚಲಂ, ಸುಬ್ಬಯ್ಯರ್, ಛಾಯಾಪತಿ, ಚಂದ್ರಶೇಖರನ್, ಬಾಲಮೂರ್ತಿ."

"ಒಳ್ಳೆಯ ಕೆಲಸ ಮಾಡಿದಿರಿ. ಹಾಗೇ ಮೇಕಪ್ ಚೀಫ್ ದಾದಾ ಪರಾಡ್ಕರ ಕೈಗೂ ಏನಾದರೂ ಹಾಕಿ. ಮುಂದೆ ಗ್ರೂಪ್ ಸೀನುಗಳು ಇವೆ. ಬಹಳ ಜನರಿಗೆ ಮೇಕಪ್ ಮಾಡಬೇಕಾಗುತ್ತದೆ. ಅವನು ಹೊತ್ತು ಮಾಡಿದರೆ ನಮಗೇ ಅನಾನುಕೂಲ."

"ಹಾಗೇ ಆಗಲಿ. ಯಜಮಾನರನ್ನು ನೋಡೋದಿಕ್ಕೆ ಬರುತ್ತೀರೇನು?"

"ಯಾವಾಗ?"

"ಈಗ."

"ಬೆಳಿಗ್ಗೆ ಅಷ್ಟರೇ ಇಲ್ಲಿಗೆ ಬರುತ್ತಾರಲ್ಲಾ."

"ನೀವು ಬರಬಾರದೇ!"

"ನನಗೆ ಇಷ್ಟವಿಲ್ಲ ಚಿನ್ನಪ್ಪನವರೇ."

"ಏನು ಕಾರಣ ಸ್ವಾಮಿ. ಯಾರಾದರೂ ಬೇಸರಮಾಡಿದರೆ?"

"ನಾನು ಒಂದು ವಿಷಯ ಕೇಳುತ್ತೇನೆ. ನೇರವಾದ ಉತ್ತರ ಹೇಳುವಿರಾ?"

"ನಿಮ್ಮಲ್ಲಿ ನಾನು ಯಾವದನ್ನೂ ಮುಚ್ಚಿಡುವುದಿಲ್ಲವಲ್ಲಾ!"

"ನಿಮ್ಮ ಅಡಿಗೆ ರೇವಣ್ಣ ಅಷ್ಟು ಪ್ರಭಾವಶಾಲಿಯಾಗಿರುವುದೇಕೆ? ಸಾಹುಕಾರರ ಮಾತನ್ನು ಕೂಡ ಅವನು ಕಸಕ್ಕೆ ಕಡೆಯಾಗಿ ಎಣಿಸುತ್ತಾನೆ. ಯಾರದೂ ಅವನಿಗೆ ಲಕ್ಷ್ಯವೇ ಇರುವ ಹಾಗಿಲ್ಲ. ವರದರಾಜ ಅಯ್ಯಂಗಾರ್ಯರು ಸಾಹುಕಾರರನ್ನು ನೋಡಲು ಮೂರು ನಾಲ್ಕು ದಿವಸಗಳ ಹಿಂದೆ ಅಲ್ಲಿಗೆ ಬಂದರು. ನಾನು ಅಲ್ಲಿಯೇ ಇದ್ದೆ. ರೇವಣ್ಣ ಅವರಿಗೆ ಕೊಟ್ಟ ಉತ್ತರ ನೋಡಿ ನನಗೆ ತುಂಬ ಕೋಪಬಂದಿತು. ಇಂಥ ಅವಿವೇಕ ನಾನೆಲ್ಲಿಯೂ ನೋಡಿಲ್ಲವಪ್ಪಾ."

"ಸ್ವಾಮಿ, ದೊಡ್ಡವರ ವಿಷಯ ನಾವು ಹೇಳಬಾರದು. ಮಾಡಿದವರ ಪಾಪ ಆಡಿದವರ ಬಾಯಲ್ಲಿ ಎನ್ನುವುದು ಸುಳ್ಳಲ್ಲ. ನೀವು ನನಗೆ ದೇವರ ಸಮಾನ. ನಿಮ್ಮಲ್ಲಿ ಯಾವದನ್ನೂ ಬೈಚಿಡಲಾರೆ. ಮನೆಗೆ ರೇವಣ್ಣನೇ ಯಜಮಾನ ಸ್ವಾಮಿ. ಅವನ ಮಾತಿನ ಮುಂದೆ ನಮ್ಮದು ಯಾರದೂ ನಡೆಯುವುದಿಲ್ಲ."

"ಹಾಗೆಂದರೆ?"

"ಭಾಗ್ಯಮ್ಮನಿಗೂ ಅವನಿಗೂ ಬಹಳ ದಿವಸಗಳ ಸಂಬಂಧ."

" ಇದು ಸಾಹುಕಾರರಿಗೆ ಗೊತ್ತೇ."

" ಸರಿ. ಸಾಹುಕಾರರ ಎದುರಿಗೇ ಅವರ ಸರಸಸಲ್ಲಾಪ ನಡೆದಿರುತ್ತೆ."

" ಛೆ! ಛೆ! ಇದೇನ್ರೀ ಅಸಹ್ಯ. ಅಜ್ಜಿಯಾಗಿದ್ದಾಳೆ ಭಾಗ್ಯಮ್ಮ. ಅವಳಿಗೇನು ಬಂತು ಈ ವಯಸ್ಸಿನಲ್ಲಿ ಶೃಂಗಾರ."

" ಭಾಗ್ಯಮ್ಮನಿಗೆ ವಯಸ್ಸಾಗಿರುವುದೂ ಒಂದೇ – ಇತರರಿಗೆ ತಾರುಣ್ಯವಿರುವುದು ಒಂದೇ. ಅವಳು ಅರಬ್ಬೀ ಕುದುರೆ ಇದ್ದ ಹಾಗಿದ್ದಾಳೆ ಸ್ವಾಮಿ."

" ಹೋಗಲಿ ಬಿಡಿಯಪ್ಪ. ಎಲ್ಲಿಯ ಹಾಳುಮಾತು. ಸಾಹುಕಾರರು ಯಾವಾಗ ಪ್ರಯಾಣ ಮಾಡುತ್ತಾರೆ."

" ಈ ವಾರದ ಕೆಲಸದ ರಷ್ ನೋಡಿಕೊಂಡು ಹೋಗುತ್ತಾರೆ. ಪ್ರಾಯಶಃ ರಷ್ ಪ್ರಿಂಟ್ ಜತೆಯಲ್ಲಿ ತೆಗೆದುಕೊಂಡು ಹೋಗಬಹುದು."

" ಅವರು ಹಿಂದಿರುಗುವುದು."

" ಬೇಗಬಂದು ಬಿಡುತ್ತಾರೆ. ಅಲ್ಲಿ ಕೆಲಸ ತಡವಾದರೆ ನಾಲ್ಕೈದು ದಿವಸಗಳಾಗಬಹುದು."

" ಸುಬ್ಬಯ್ಯರ್ ಪಾರ್ಟಿ ಮುಗಿಸಿಕೊಂಡು ಹೋಗುವಂತೆ ಹೇಳಿ ಚಿನ್ನಪ್ಪ. ಸಾಹುಕಾರರು ಬಂದರೆ ವೆಂಕಟಾಚಲಂ, ಸುಬ್ಬಯ್ಯರ್ ಅವರಿಗೆ ಸಂತೋಷವಾಗುತ್ತದೆ."

" ಇದೆಲ್ಲಾ ಅವರಿಗೇನು ತಿಳಿಯುತ್ತೆ ಸ್ವಾಮಿ,"

" ಹಾಗಲ್ಲ ಚಿನ್ನಪ್ಪ. ನ್ಯಾಯವಾಗಿ ಪಾರ್ಟಿಯನ್ನು ಸಾಹುಕಾರರಿಗೇ ಕೊಡಬೇಕು. ನಾನು ಸಾಹಿತಿ ಎನ್ನುವ ಕಾರಣಕ್ಕಾಗಿ ನನ್ನ ನಿಮಿತ್ತ ಮಾಡಿಕೊಂಡಿದ್ದಾರೆ. ಸಾಹುಕಾರರು ನನ್ನನ್ನು ಇಲ್ಲಿಗೆ ಕರೆದುಕೊಂಡು ಬಂದುದರಿಂದಲೇ ಅಲ್ಲವೇ ಈ ಗೌರವ ನನಗೆ ದೊರೆತುದು."

" ಸಾಹಿತ್ಯದ ವಿಷಯದಲ್ಲಿ ನೀವು ತುಂಬಾ ಬುದ್ಧಿವಂತರು ಸ್ವಾಮಿ. ಆ ಬಗ್ಗೆ ಮಾತನಾಡುವ ಅಧಿಕಾರ ನನಗಿಲ್ಲ. ಆದರೆ ನಿಮಗೆ ಪ್ರಪಂಚ ಏನೂ ತಿಳಿಯದು. ಜಗತ್ತೆಲ್ಲಾ ನಿಮ್ಮ ಹಾಗೇ ಇದೆಯೆಂದು ಭಾವಿಸುತ್ತೀರಿ."

" ಜಗತ್ತಿನಲ್ಲಿರುವವರೆಲ್ಲಾ ಪಾಪಿಗಳು, ಮೋಸಗಾರರು–ನಾನೊಬ್ಬನೇ ಸತ್ಯವಂತ ಎಂದು ಭಾವಿಸಿಕೊಳ್ಳಲೇ? ಎಲೆಯ ಮರೆಯ ಕಾಯಿಯಂತೆ ಎಷ್ಟೋ ಮಂದಿ ಸತ್ಯವಂತರಿದ್ದಾರೆ. ಅವರ ಸಮ್ಯಕ್‌ಚಾರಿತ್ರ್ಯದಿಂದಲೇ ನಮ್ಮ ಜೀವನಚಕ್ರ ಸಾಗುತ್ತಿರುವುದು. ಅವರಿಗೆ ಹೋಲಿಸಿ ನೋಡಿದರೆ ನಾನೊಂದು ಹುಲ್ಲುಕಡ್ಡಿ."

"ಅವರನ್ನು ನಾವು ನೋಡಿಲ್ಲ ಸ್ವಾಮಿ. ನಾವು ನೋಡಿರುವುದು ನಿಮ್ಮನ್ನೆ."

ಎಂದು ಚಿನ್ನಪ್ಪ ಹೇಳಿದ.

ಸುಬ್ಬಯ್ಯರ್ ಸಕಾಲಕ್ಕೆ ಆಹ್ವಾನ ಪತ್ರಿಕೆ ಅಚ್ಚುಹಾಕಿಸಿ ಎಲ್ಲರ ಕೈಯಲ್ಲಿಯೂ ಇಟ್ಟರು. ಊರಿಗೆ ಪ್ರಯಾಣ ಹೊರಟಿದ್ದ ಸಾಹುಕಾರರು ಚಿನ್ನಪ್ಪನ ಸಲಹೆಯಂತೆ ಒಂದು ದಿನ ನಿಂತು ಪಾರ್ಟಿ ಮುಗಿಸಿಕೊಂಡು ಹೋಗಲು ಒಪ್ಪಿದರು.

ಪಾರ್ಟಿಗೆ ಯಾರು ಯಾರು ಹೊರಡತಕ್ಕದ್ದೆಂದು ಸ್ಟೂಡಿಯೋ ಮನೆಯಲ್ಲಿಯೂ ಕಂಪೆನಿ ಮನೆಯಲ್ಲಿಯೂ ಜಿಜ್ಞಾಸೆ ಹುಟ್ಟಿತು. ಸರೋಜ ತಾನು ಬರುತ್ತೇನೆಂದಳು. ಭಾಗ್ಯಮ್ಮ 'ನನಗೇನೂ ಅರ್ಥವಾಗುವುದಿಲ್ಲ ನಾನೇಕೆ' ಎಂದು ತಪ್ಪಿಸಿಕೊಂಡಳು. ಸರೋಜನ ಜತೆಗೆ ಪಾರ್ವತಿ ಚೂಡಾಮಣಿ ಹೊರಟರು. ಮುರಿಗೆಯ್ಯ ತನಗೆ ಕೆಲಸವಿದೆಯೆಂದು ತಪ್ಪಿಸಿಕೊಂಡ.

ಕಂಪೆನಿ ಮನೆಯಲ್ಲಿ ಸತ್ಯನಾಥನ್, ವರದರಾಜ ಅಯ್ಯಂಗಾರ್, ಪದ್ಮರಾಜು, ಶಿವಾನಂದ, ಮಹಂತಯ್ಯ ಹೊರಡಲುತ್ಸುಕರಾದರು. ಮಹಾದೇವನಿಗೆ ಹೋಗಿ ನೋಡಬೇಕೆಂದು ಮನಸ್ಸು – ಆದರೆ ಸುದರ್ಶನರ ವೈಭವ ನೋಡಿ ಸಹಿಸಿಕೊಳ್ಳಬೇಕಲ್ಲಾ ಎಂದು ಸಂಕಟ. ತಾನು ಹೊರಡದಿದ್ದರೆ ಅಪಾರ್ಥಕ್ಕೆ ಅವಕಾಶವಾಗುವುದೆಂದು ಹೆದರಿ ತಾನೂ ಹೊರಡಲು ಸಿದ್ಧನಾದ.

ಸಾಹುಕಾರರು, ಚಿನ್ನಪ್ಪ, ಸುದರ್ಶನರು, ಸರೋಜ, ಪಾರ್ವತಿ, ಚೂಡಾಮಣಿ ಕಾರಿನಲ್ಲಿ ಬರುವುದೆಂದೂ ಉಳಿದವರು ವ್ಯಾನಿನಲ್ಲಿ ಬರುವುದೆಂದೂ ನಿಶ್ಚಯವಾಯಿತು.

ಟ್ರಿಪ್ಲಿಕೇನಿನ ಒಂದು ಹೈಸ್ಕೂಲಿನ ಭವ್ಯ ಸಭಾಂಗಣದಲ್ಲಿ 'ಪಾರ್ಟಿ' ವ್ಯವಸ್ಥೆಯಾಗಿತ್ತು. 'ಅಂಬಾ ಭವನ'ಕ್ಕೆ ಉಪಾಹಾರ ಹಂಚಿಕೆ ಒಪ್ಪಿಸಲ್ಪಟ್ಟಿತ್ತು.

'ತಮಿಳುನಾಡು ಲೇಖಕರ ಸಂಘ'ದವರು 'ಸನ್ಮಾನೋತ್ಸವ'ವನ್ನು ವ್ಯವಸ್ಥೆಮಾಡಿದ್ದರೂ ಸಭೆಗೆ ಬಂದಿದ್ದವರು ಕೇವಲ ಸಾಹಿತಿಗಳಲ್ಲ. ಊರಿನ ಪ್ರಸಿದ್ಧ ಸಂಗೀತಗಾರರು, ನರ್ತಕ ನರ್ತಕಿಯರು, ಪತ್ರಿಕಾಕರ್ತರು, ಕಾಲೇಜ್ ಪ್ರೊಫೆಸರುಗಳು, ಸಾಹಿತ್ಯ, ದರ್ಶನ ಪಂಡಿತರು, ಸಿನೀಮಾ ನಿರ್ಮಾಪಕರು, ದಿಗ್ದರ್ಶಕರು ಎಲ್ಲರೂ ಆಗಮಿಸಿದ್ದರು. ಲೇಖಕರ ಸಂಘದ ಅಧ್ಯಕ್ಷರು, ಕಾರ್ಯದರ್ಶಿಗಳ ಪರಿಚಯವನ್ನು ಸುದರ್ಶನರಿಗೂ ಅವರ ಕಡೆಯವರಿಗೂ

ಸುಬ್ಬಯ್ಯರ್ ಮಾಡಿಕೊಟ್ಟರು. ಸಂಘದ ಕಾರ್ಯದರ್ಶಿಗಳು ಉತ್ಸವಕ್ಕೆ ಆಗಮಿಸಿದ್ದ ಮಾನ್ಯ ಅತಿಥಿಗಳೆಲ್ಲರ ಪರಿಚಯವನ್ನು ಸುದರ್ಶನರಿಗೆ ಮಾಡಿ ಕೊಟ್ಟರು.

ಉಪಾಹಾರ ಮುಗಿದ ಮೇಲೆ ರಾಧಾ ಜಯಲಕ್ಷ್ಮೀ ಸೋದರಿಯರ ಸುಶ್ರಾವ್ಯ ಹಾಡಿಕೆಯಾಯಿತು. ಅಧ್ಯಕ್ಷಸ್ಥಾನಕ್ಕೆ ಪ್ರೊ. ಸೋಮಸುಂದರ ಶರ್ಮ ಅವರ ಹೆಸರು ಸೂಚಿಸಲ್ಪಟ್ಟಿತು. ಪ್ರೊ. ಶರ್ಮರು ಪಚ್ಚಯಪ್ಪ ಕಾಲೇಜಿನಲ್ಲಿ ದರ್ಶನ ಪ್ರೊಫೆಸರಾಗಿದ್ದುದಲ್ಲದೆ, ತಮಿಳಿನಲ್ಲಿ ಇಂಗ್ಲಿಷಿನಲ್ಲಿ ಉತ್ತಮಲೇಖಕರೆಂದು ಹೆಸರಾಗಿದ್ದರು. ಶರ್ಮರ ಆಯ್ಕೆ ಎಲ್ಲರ ಅನು ಮೋದನೆಯನ್ನು ಪಡೆಯಿತು.

ಸುಪ್ರಸಿದ್ಧ ತಮಿಳು ಲೇಖಕರಾದ ಚೆಲ್ಲಂ ಅವರು ಸುದರ್ಶನರ ಪರಿಚಯ ಮಾಡಿಕೊಟ್ಟರು. ಸುಬ್ಬಯ್ಯರ್ ಸಂಗ್ರಹಿಸಿದ ವಿಷಯಗಳನ್ನು ಅವರು ಸಂಪೂರ್ಣವಾಗಿ ಉಪಯೋಗಿಸಿಕೊಂಡಿದ್ದರು. ಅನಂತರ 'ಕಲೈ ಮಗಳ್' ಪತ್ರಿಕೆಯ ಸಂಪಾದಕರೂ ಅಭಿಜಾತ ಸಾಹಿತ್ಯಭಕ್ತರೂ ಆದ ಕೆ. ವಿ. ಜಗನ್ನಾಥಂ ಅವರು ಸುದರ್ಶನರ ಸಾಹಿತ್ಯಕೃತಿಗಳ ಬಗ್ಗೆ ವಿಮರ್ಶಾತ್ಮಕವಾಗಿ, ರಸಪೂರ್ಣವಾಗಿ ಮಾತನಾಡಿದರು. ಶ್ರೀಯುತರು ತಮಿಳಿಗೆ ಅನುವಾದಗೊಂಡು ದೊರೆಯುತ್ತಿದ್ದ ಸುದರ್ಶನರ ಸಾಹಿತ್ಯವನ್ನೇ ಅವಲಂಬಿಸಿ ಮಾತನಾಡಿದರೂ ತಮ್ಮ ಕ್ಷ-ಕಿರಣಗಳನ್ನೂ ಚೆಲ್ಲಿ ಸುದರ್ಶನರ ಸಾಹಿತ್ಯ ಜೀವಾಳವನ್ನೇ ಪರಾಮರ್ಶಿಸಿದರು.

ಸುದರ್ಶನರ ಸರದಿ ಬಂದಿತು. ಶ್ರಾವಕರು ಉತ್ಸಾಹದಿಂದ ಕರತಾಡನ ಮಾಡಿದರು.

ಸುದರ್ಶನರು ಗಂಭೀರವಾಗಿ ಆರಂಭಿಸಿದರು. ಅವರ ಧ್ವನಿಯಲ್ಲಿ ಕಂಪನವಿತ್ತು, ಭಯದಿಂದಲ್ಲ– ಕೃತಜ್ಞತೆಯಿಂದ.

"ಮಾನ್ಯ ಅಧ್ಯಕ್ಷರೇ, ಸೋದರ ಸಾಹಿತಿಗಳೇ, ಕಲಾವಿದರೇ,

ನೀವು ನನಗೂ ನನ್ನ ಮಿತ್ರರಿಗೂ ಕೊಟ್ಟಿರುವ ಅಭೂತಪೂರ್ವ ಸ್ವಾಗತಕ್ಕೆ ನಾವು ತುಂಬ ಋಣಿಗಳಾಗಿದ್ದೇವೆ."

ಇಷ್ಟು ಮಾತನ್ನು ಸುದರ್ಶನರು ತಮಿಳಿನಲ್ಲಿ ಹೇಳಿದಾಗ ಸಭೆ ಸಂತೋಷವನ್ನು ವ್ಯಕ್ತಮಾಡಿತು.

"ಇಲ್ಲಿಗೆ ನನ್ನ ತಮಿಳುಪಾಂಡಿತ್ಯ ಮುಗಿದುಹೋಯಿತು. ಇನ್ನು ನಾನು ಇಂಗ್ಲಿಷಿನಲ್ಲಿ ಮಾತನಾಡುವುದಕ್ಕೆ ಅಪ್ಪಣೆ ಬೇಡುತ್ತೇನೆ."

ನನ್ನ ಮಿತ್ರರು ಸುಬ್ಬಯ್ಯರ್ ಅವರು ತಮಿಳು ಲೇಖಕರ ಪರಿಚಯ ಮಾಡಿಕೊಡುತ್ತೇನೆಂದು ಹೇಳಿದಾಗ ನಾನು ಕೂಡಲೆ ಸಂತೋಷದಿಂದ ಒಪ್ಪಿಕೊಂಡೆ. ಆದರೆ ನನಗಿಂಥ ಸನ್ಮಾನ ಕಾದಿದೆಯೆಂದು ಅವರು ತಿಳಿಸಿದ್ದರೆ ನಾನು ಖಂಡಿತವಾಗಿಯೂ ಒಪ್ಪಿಕೊಳ್ಳುತ್ತಿರಲಿಲ್ಲ. ಈ ಗೌರವ, ಆದರ ನನ್ನದೆಂದು ನಾನು ಭಾವಿಸಿಕೊಂಡರೆ ಅದು ಅಹಂಕಾರದ ಮಾತಾಗುತ್ತದೆ. ನಾನು ಕನ್ನಡದಲ್ಲಿ ನಾಲ್ಕು ಪಂಕ್ತಿ ಬರೆದಿದ್ದೇನೆಂದಲ್ಲವೇ ನೀವು ನನ್ನನ್ನು ಬರಮಾಡಿಕೊಂಡಿರುವುದು. ಈ ಗೌರವ, ಆದರ ಕನ್ನಡಕ್ಕೆ ಸೇರಬೇಕು.

ನನ್ನ ಮಿತ್ರರಾದ ಸಾಹುಕಾರ್ ರುದ್ರಪ್ಪನವರು ಕೈಗೊಂಡಿರುವ 'ಶ್ರೀ ರಾಮ ಪಾದುಕಾ ಪಟ್ಟಾಭಿಷೇಕ' ವಾಕ್ಚಿತ್ರದ ಸಲುವಾಗಿ ನಾನು ಮದರಾಸಿಗೆ ಬಂದಿರುವುದು. ಈ ಸುಸಂಧಿಯನ್ನೊದಗಿಸಿಕೊಟ್ಟು, ತಮ್ಮೆಲ್ಲರನ್ನೂ ಕಾಣುವ ಸುಯೋಗವನ್ನೊದಗಿಸಿಕೊಟ್ಟ ಸಾಹುಕಾರ್ ರುದ್ರಪ್ಪನವರಿಗೆ ನನ್ನ ಕೃತಜ್ಞತೆ ಸಲ್ಲಬೇಕಾಗಿದೆ. ನಾವು ಇಲ್ಲಿಗೆ ಬರುವುದಕ್ಕೆ, ಕಾರ್ತಿಕೇಯ ಸೌಂಡ್ ಸ್ಟೂಡಿಯೋ ಮಾಲಿಕರಾದ ಅರುಣಾಚಲ ಚೆಟ್ಟಿಯಾರರು ಮತ್ತು ಅವರ ಕಾರ್ಯದರ್ಶಿಗಳಾದ ರಾಮಾನುಜಂ ಇವರೇ ಮೂಲಕಾರಣ. ಈ ಉಭಯ ಮಹನೀಯರು ನಮಗೆ ನೀಡಿರುವ ನೆರವನ್ನು ನಾನು ಮಾತುಗಳಿಂದ ವರ್ಣಿಸಲಾರೆ.

[ದೀರ್ಘಕಾಲ ಕರತಾಡನ]

ನಾವು ಕನ್ನಡ ಚಿತ್ರ ಮಾಡುವುದಕ್ಕೆ ತಮಿಳುನಾಡಿಗೆ ಬಂದಿರವುದೂ, ನೀವು ನಮ್ಮನ್ನು ಆದರಿಸಿ ಸತ್ಕರಿಸಿರುವುದೂ ನಮ್ಮ ನಾಡಿನ ಪ್ರಗತಿಯ ದೃಷ್ಟಿಯಿಂದ ಶುಭಪ್ರದವಾದುದೆಂದು ನನ್ನ ನಂಬಿಕೆ. ಸ್ವಾತಂತ್ರ್ಯ ಬಂದ ಮೇಲೆ ನಾವು ಭಾರತೀಯತ್ವವನ್ನೇ ಮರೆಯುತ್ತಿದ್ದೇವೆ. ನಾವು ತಮಿಳರು, ತೆಲುಗರು, ಕನ್ನಡಿಗರು ಎಂಬ ಭಾವನೆಯೂ, ನಾವು ಬ್ರಾಹ್ಮಣರು, ಬ್ರಾಹ್ಮಣೇತರರು, ಲಿಂಗಾಯಿತರು, ಜೈನರು, ಮುಸ್ಲಿಮರು, ಸಿಖ್ಖರು ಎಂಬ ಭಾವನೆಯೂ ವಿಶೇಷವಾಗಿ ಬೆಳೆಯುತ್ತಿದೆ. ಈ ಬಗೆಯ ಸಂಕುಚಿತ ಭಾವನೆಯಿಂದ ಭಾರತದ ಪ್ರಗತಿಗೇ ನಾವು ದ್ರೋಹ ಬಗೆಯುತ್ತಿಲ್ಲವೇ ಎಂದು ನಾನು ಯೋಚಿಸುತ್ತಿದ್ದೇನೆ. ನಮ್ಮ ಅಹಂಭಾವ, ಠೇಂಕಾರಗಳಲ್ಲಿ ನಾವು ಇತರರ ಯೋಗ್ಯತೆಯನ್ನು ಕಡೆಗಾಣಿಸಿ ನಮ್ಮ ಸಹೃದಯತೆಯನ್ನೇ ನಾಶಮಾಡಿಕೊಳ್ಳುತ್ತಿದ್ದೇವೆ.

ಪ್ರಾಂತೀಯ, ಜಾತೀಯ, ಮತೀಯ ಭಾವನೆಗಳನ್ನು ಬದಿಗಿರಿಸಿ ನಾವು ವಿಚಾರ ಮಾಡಿದರೆ ಏಕತ್ರವಾದ ಭಾರತದ ಸಮ್ಯಗ್ದರ್ಶನ ನಮಗೆ

ಸಿಕ್ಕುತ್ತದೆ. ಭಾರತದಲ್ಲಿ ಒಂದು ಪ್ರಾಂತ್ಯವನ್ನು ಬಿಟ್ಟು ಇನ್ನೊಂದು ಪ್ರಾಂತ್ಯ, ಒಂದು ಭಾಷೆಯನ್ನು ಬಿಟ್ಟು ಇನ್ನೊಂದು ಭಾಷೆ ಬದುಕಲು ಸಾಧ್ಯವಿಲ್ಲ. ನಮ್ಮ ಜೀವನ, ದೃಷ್ಟಿ ಹಾಸು ಹೊಕ್ಕಾಗಿ ಹೊಂದಿಕೊಂಡಿವೆ. ದೃಷ್ಟಾಂತಕ್ಕೆ ನೋಡಿ: ಕನ್ನಡ, ತಮಿಳು ಎರಡೂ ಒಂದೇ ಬುಡಕಟ್ಟಿಗೆ ಸೇರಿದ ಭಾಷೆಗಳು. ಈಗ ಕನ್ನಡದಲ್ಲಿ ಉಪಲಬ್ಧವಿಲ್ಲದೆ ತಮಿಳಿನಲ್ಲಿ ನಿತ್ಯಬಳಕೆಯಲ್ಲಿರುವ ಅನೇಕ ಶಬ್ದಗಳು ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಸಿಕ್ಕುತ್ತವೆ. ಮಧ್ಯಕಾಲದ ವೀರಶೈವ ಕವಿಗಳ ಮೇಲೆ ತಮಿಳಿನ ಪ್ರಭಾವ ಬಿದ್ದಿರಬೇಕು. ಕನ್ನಡದ ಹಿರಿಕವಿಗಳಲ್ಲಿ ಒಬ್ಬನಾದ ಹರಿಹರ 'ಪೆರಿಯ ಪುರಾಣ'ದ ಛಟ್ಟೆಯಿಳಿಸಿದ್ದಾನೆ. ಕನ್ನಡದ 'ಪ್ರಭುಲಿಂಗಲೀಲೆ' ತಮಿಳಿಗೆ ಅನುವಾದವಾಯಿತು. ಕನ್ನಡ ಜನ, ತಮಿಳು ಜನ ಆದರಿಸುವ ಸಂಗೀತ ಒಂದೇ ಆಗಿದೆ. ನಡೆಯಲ್ಲಿ, ಆಚಾರ, ವಿಚಾರಗಳಲ್ಲಿ ಕನ್ನಡಿಗರಿಗೂ ತಮಿಳರಿಗೂ ಬೇಕಾದಷ್ಟು ಸಾದೃಶ್ಯಗಳಿವೆ. ಕರ್ನಾಟಕ, ತಮಿಳುನಾಡುಗಳ ಸಂತರ ಭಕ್ತಿಗೀತೆಗಳನ್ನು ನೋಡಿದರೆ, ಒಂದರ ಅನುವಾದ ಇನ್ನೊಂದಾಗಿರಬಹುದೇ ಎನ್ನಿಸುತ್ತದೆ. ಕನ್ನಡ, ತಮಿಳು ಒಂದೇ ಮಹಾ ಮನೆಯ ಎರಡು ಗೋಪುರಗಳು. ಆ ಮಹಾಮನೆಗೆ ಹಾಗೇ ಗುಜರಾತಿ, ಮರಾಟಿ, ಹಿಂದಿ, ಪಂಜಾಬಿ, ಬಂಗಾಳಿ, ಉರಿಯ ಮೊದಲಾದ ಗೋಪುರಗಳೂ ಇವೆಯೆಂಬುದನ್ನು ನಾವು ಮರೆಯಬಾರದು.

[ಪ್ರಚಂಡ ಕರತಾಡನ]

ನಮ್ಮ ಸಂಸ್ಕೃತಿಯ 'ಏಕತ್ವ'ವನ್ನು ಸಾರುವುದೇ ಸಾಹಿತಿಗಳಾದ ನಮ್ಮ ಗುರಿಯಾಗಿರಬೇಕು. ಭಾರತ ಸಣ್ಣ ದೇಶವಲ್ಲ, ಅದರ ಇತಿಹಾಸ ಒಂದೆರಡು ಶತಮಾನದ್ದಲ್ಲ. ಇಂಥ ವಿಶಾಲವಾದ ಭೂಮಿಯಲ್ಲಿ ವೈವಿಧ್ಯ, ವಿಭಿನ್ನತೆ ಇರಬೇಕಾದುದು ಸಹಜ. ಆದರೆ ವಿಭಿನ್ನತೆಯ ಹಿಂದೆ ಯಾವ ಶಕ್ತಿ, ಯಾವ ಚೇತನ, ಯಾವ ಬೆಳಕು ನಿಂತುಕೊಂಡು ಈ ರಾಷ್ಟ್ರವನ್ನು ನಡೆಸುತ್ತಿದೆಯೋ ಅದನ್ನು ಅರಸೋಣ. ನಮ್ಮ ಸಾಹಿತ್ಯ – ಜೀವನ ಎರಡೂ ಅದರ ಪ್ರತೀಕವಾಗಲಿ."

ಎಂದು ಹೇಳಿ ಮುಗಿಸಿದರು. ಶ್ರಾವಕರು ದೀರ್ಘಕಾಲ ಕರತಾಡನ ಮಾಡಿ ತಮ್ಮ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು. ಅಧ್ಯಕ್ಷರು ನಿಂತಮೇಲೂ ಸಭಿಕರ ಕರತಾಡನ ಸಾಗಿಯೇ ಇತ್ತು. ಅಧ್ಯಕ್ಷರು ನಸುನಗುತ್ತಾ ನಿಂತರು. ಸಭೆ ಶಾಂತವಾದ ಮೇಲೆ ಇಂಗ್ಲಿಷಿನಲ್ಲಿ 'ಶ್ರೀ ಸುದರ್ಶನರೇ, ಮಹಿಳೆಯರೇ, ಮಹಾನೀಯರೇ' ಎಂದರು.

"ತಾವು ದಯೆಯಿಟ್ಟು ತಮಿಳಿನಲ್ಲಿಯೆ ಮಾತನಾಡಬೇಕು"

ಎಂದು ಸುದರ್ಶನರು ಹೇಳಲು ಅಧ್ಯಕ್ಷರು ನಕ್ಕು ತಮಿಳಿನಲ್ಲಿ ಆರಂಭಿಸಿದರು.

"ನಮ್ಮ ಸೋದರ ಪ್ರಾಂತ್ಯದ ಒಬ್ಬ ಪ್ರತಿಭಾಶಾಲಿ ಕವಿಗಳನ್ನು ಗೌರವಿಸಲು ನಾವಿಲ್ಲಿ ಸೇರಿದ್ದೇವೆ. ಇಷ್ಟು ಪ್ರಾತಿನಿಧಿಕವಾದ ಸಭೆ ಈಚೆಗೆ ಮದರಾಸಿನಲ್ಲಿ ಸೇರಿಯೇ ಇರಲಿಲ್ಲ. ಸಾಹಿತ್ಯ, ಸಂಗೀತ, ಪಾಂಡಿತ್ಯ ರಂಗ ಗಳಲ್ಲಿ ಜೀವ ಸವೆಸಿರುವ ಅನೇಕ ಮಹನೀಯರು ಇಲ್ಲಿ ದಯೆಮಾಡಿಸಿದ್ದಾರೆ. ಇಂಗ್ಲಿಷಿನಲ್ಲಿ ಮಾತನಾಡಲು ಹೊರಟ ನಾನು ತಮಿಳಿನಲ್ಲಿ ಮಾತನಾಡ ಬೇಕೆಂದು ಶ್ರೀ ಸುದರ್ಶನರು ಸೂಚಿಸಿದುದನ್ನು ತಾವೇ ಕಂಡಿದ್ದಿರಿ. ಕನ್ನಡ ತಮಿಳು ಒಂದೇ ಎನ್ನುವ ಭಾವನೆ ಎಷ್ಟು ಆಳವಾಗಿ ಅವರ ಹೃದಯದಲ್ಲಿ ನೆಲಸಿದೆಯೆನ್ನುವುದಕ್ಕೆ ಈ ನಿದರ್ಶನವೇ ಸಾಕಲ್ಲವೇ?

(ಸಭಿಕರು ಕರತಾಡನ ಮಾಡುವರು)

ಶ್ರೀ ಸುದರ್ಶನರು ಆಡಿರುವ ಒಂದೊಂದು ಮಾತು ಒಂದೊಂದು ಸೂತ್ರದಂತಿದೆ. ಅದನ್ನು 'ಭಾರತ ಸೂತ್ರ' ಎಂದು ನಾನು ಕರೆದರೆ ತಪ್ಪಾ ಗುವುದಿಲ್ಲ. ಈ ನಾಡಿನ ಪ್ರಗತಿ, ಐಕ್ಯತೆ, ಸಂಸ್ಕೃತಿಯ ಬಗ್ಗೆ ಅವರಲ್ಲಿ ಎಂಥ ಕಳಕಳಿಯಿದೆಯೆನ್ನುವುದು ಅವರ ಭಾಷಣದಿಂದಲೇ ವ್ಯಕ್ತವಾಯಿತು. ಶ್ರೀ ಸುದರ್ಶನರು ಅಪ್ಪಣೆಕೊಡಿಸಿದಂತೆ ಸ್ವಾತಂತ್ರ್ಯೇಚ್ಛೆಯಿಂದ ಒಂದು ಗೂಡಿದ ಈ ನಾಡು ಸ್ವಾತಂತ್ರ್ಯ ದೊರೆತ ಮೇಲೆ ಮತ್ತೆ ಭಿನ್ನಭಿನ್ನವಾಯಿತು. ಹಲವಾರು ರಾಕ್ಷಸಶಕ್ತಿಗನು ತಲೆಯೆತ್ತಿಕೊಂಡವು. ಅದರಲ್ಲಿ ಕೋಮು ವಾರ ಭೂತವೇ ಅತಿ ದೊಡ್ಡದು. ಇನ್ನಾದರೂ ಜನತೆ ಎಚ್ಚತ್ತುಕೊಂಡು ಪ್ರಾಗತಿಕ ಮಾರ್ಗದಲ್ಲಿ ಮುನ್ನಡೆಯದಿದ್ದರೆ ಭಾರತ ಬದುಕುವುದು ಕಷ್ಟ. ಸುಸಂಘಟಿತ ಭಾರತ ಜಗತ್ತಿನ ಸಂಸ್ಕೃತಿಯ ಆಧಾರಸ್ತಂಭವಾಗುತ್ತದೆ. ಅನೈಕ್ಯತೆಯಿಂದ ಛಿದ್ರವಾದ ಭಾರತ ಹಲವರ ಕೈತುತ್ತಾಗುತ್ತದೆ. ಭಾರತ ವನ್ನು ಒಂದುಗೂಡಿಸಿ, ರಾಷ್ಟ್ರದ ದೈತ್ಯಶಕ್ತಿಗಳನ್ನು ಎದುರಿಸುವ ಕೆಲಸ ಸಾಹಿತಿಯದೆಂದು ಮಾನ್ಯ ಅತಿಥಿಗಳು ಅಪ್ಪಣೆಕೊಡಿಸಿದರು. ಇದು ನಮಗೆ ಸ್ವಲ್ಪ ಹೊಸದಾಗಿ ಕಾಣಬಹುದಾದ ವಾದ. ಆದರೆ ಪ್ರಾಚೀನ ಭಾರತದ ಇತಿಹಾಸ ನೋಡಿದರೆ ನಮ್ಮ ತಪಸ್ವಿಗಳು, ಕವಿಗಳು, ಮಹಿಳೆಯರು ಭಾರ ತದ ಸೇವೆಗೆ ಧುಮ್ಮಿಕ್ಕಿರುವುದನ್ನು ನಾವು ಕಾಣಬಹುದು.

ಜಾತಿ, ಪ್ರಾಂತ್ಯ, ಭಾಷೆ, ಮತಗಳ ಸಂಕುಚಿತ ವ್ಯೂಹದೊಳಗೆ ಅಡಕವಾಗಿರುವ ಕಾಲ ಎಂದೋ ಕಳೆದುಹೋಯಿತು. ಈ ರಾಷ್ಟ್ರದ ಸಂಪತ್ತು,

ಶಕ್ತಿ, ವಿದ್ಯೆ, ಸಂಸ್ಕೃತಿ ಎಲ್ಲ ಭಾರತೀಯರಿಗೂ ಸೇರಿದ್ದೆಂದು ನಾವು ತಿಳಿದು ಕೊಳ್ಳಬೇಕು. ಅಂಥ ತಿಳುವಳಿಕೆಯನ್ನು ಹುಟ್ಟಿಸಲು, ಬೆಳಸಲು ಶ್ರೀ ಸುದರ್ಶನರಿಗಿಂತಲೂ ದಕ್ಷರು ಬೇಕೇ?

ಕನ್ನಡ ಚಿತ್ರನಿರ್ಮಾಣದ ಸಲುವಾಗಿ ಇಲ್ಲಿಗೆ ದಯಮಾಡಿಸಿರುವ ಶ್ರೀ ಸುದರ್ಶನರು ತಮ್ಮ ಕೆಲಸ ಮುಗಿದು ಮರಳಿ ಬೆಂಗಳೂರಿಗೆ ಹೋದ ಮೇಲೂ ನಮ್ಮನ್ನು ಮರೆಯಬಾರದಾಗಿ ಪ್ರಾರ್ಥಿಸಿಕೊಳ್ಳುತ್ತೇನೆ. ಅವರು ಆಗಿಂದಾಗ್ಗೆ ಮದರಾಸಿಗೆ ಬಂದು ತಮ್ಮ ಜ್ಞಾನಲಾಭವನ್ನು ಒದಗಿಸಿಕೊಟ್ಟು, ಕನ್ನಡ – ತಮಿಳು ಬಾಂಧವ್ಯವನ್ನು ಮತ್ತಷ್ಟು ಭದ್ರಪಡಿಸಬೇಕು."

ಸಭಿಕರು ಕರತಾಡನದಿಂದ ಅಧ್ಯಕ್ಷರ ಭಾಷಣದ ಬಗ್ಗೆ ತಮಗಾಗಿದ್ದ ಸಂತೋಷವನ್ನು ವ್ಯಕ್ತಮಾಡಿದರು.

ಸಂಘದ ಪರವಾಗಿ ವಾ. ರಾ. ಅವರು ವಂದನಾರ್ಪಣೆ ಮಾಡಿದರು. ಸಂಘದ ಕಾರ್ಯದರ್ಶಿಗಳು ಅಧ್ಯಕ್ಷರಿಗೂ, ಸುದರ್ಶನರಿಗೂ ಹಾರಗಳನ್ನು ಸಮರ್ಪಿಸಿದರು. ಸಂಘದ ಅಧ್ಯಕ್ಷರು ಸಾಹುಕಾರ್ ರುದ್ರಪ್ಪನವರಿಗೆ ಹಾರ ಸಮರ್ಪಿಸಿದರು.

ಅಂದಿನ ಉತ್ಸವ ಕಂಡು ಎಲ್ಲರಿಗಿಂತ ಹೆಚ್ಚು ಸಂತೋಷಿಸಿದವರು ಸುಬ್ಬಯ್ಯರ್. ಅವರ ಉತ್ಸಾಹಕ್ಕೆ ಕೊನೆಮೊದಲಿರಲಿಲ್ಲ. ಅನೇಕ ಸಂಘ ಗಳ ಕಾರ್ಯದರ್ಶಿಗಳು, ಅಧ್ಯಕ್ಷರು ಸುದರ್ಶನರನ್ನು ಸುತ್ತುಗಟ್ಟಿ ತಮ್ಮ ಸಂಘಗಳಿಗೆ ಆಹ್ವಾನಿಸಿದರು.

ಸುದರ್ಶನರು ಎಲ್ಲರನ್ನು ಮಾತನಾಡಿಸಿ ಅಪ್ಪಣೆ ಪಡೆದಮೇಲೆ ಸಾಹು ಕಾರರು ಚಿನ್ನಪ್ಪನೊಂದಿಗೆ ಹೊರಟರು. ಸಾಹುಕಾರರಿಗೆ ಮಾತೇ ಹೊರಡ ದಂತಾಗಿತ್ತು. ಕಂಪೆನಿಯ ಮನೆಯ ಬಳಿ ಕಾರು ನಿಲ್ಲಿಸಿ

"ನಮ್ಮ ದೇಶದಲ್ಲಿ ಅಲ್ಲದೆ ಹೊರಗೂ ಎಷ್ಟು ಗೌರವ ಸಂಪಾದಿಸಿ ಕೊಂಡಿದ್ದೀರಿ ಸ್ವಾಮಿ."

ಎಂದರು.

"ಬೆಳಿಗ್ಗೆ ಪ್ರಯಾಣವೇ."

"ಹೂ! ಬೆಳಿಗ್ಗೇನೆ ಹೊರಟುಬಿಟ್ಟು ಬೇಗ ಬಂದುಬಿಡುತ್ತೇನೆ. ನೀವಿರುವಾಗ ನನಗೇನು ಭಯ."

"ಯಾರಿದ್ದರೇನು? ಯಜಮಾನರು ಎದುರಿಗಿದ್ದರೆ ಕೆಲಸವಾಗುವ ಹಾಗೆ ಮಿಕ್ಕ ವೇಳೆಯಲ್ಲಾಗುತ್ತದೆಯೇ?"

"ರಷ್ ಎಲ್ಲಾ ಸಿದ್ಧವಾಗಿದೆ. ಒಂದು ಸಾರಿ ನೋಡಿಬಿಟ್ಟು, ಜೀರೆ ಸೆಟ್ ಹಾಕುವುದಕ್ಕೆ ಹೇಳಿಬಿಡಿ."

"ನಾಳೆ ಬೆಳಿಗ್ಗೆ ಅದೇ ಕೆಲಸ ಮಾಡುತ್ತೇನೆ."

ಸಾಹುಕಾರರ ಕಾರು ಮುಂದಕ್ಕೆ ಸಾಗಿತು.

೨೫

ಮದರಾಸ್ – ಬೆಂಗಳೂರು ಎಕ್ಸ್‌ಪ್ರೆಸ್ ಗಾಡಿ ಸರಿಯಾಗಿ ಹನ್ನೆರಡು ಗಂಟೆಗೆ ಮದರಾಸ್ ಸ್ಟೇಷನ್ ಬಿಡುತ್ತಿತ್ತು. ಸುದರ್ಶನರು ಎದ್ದವರೇ ಸ್ಟೂಡಿಯೋ ಮನೆಗೆ ಹೋಗಿ, ಸಾಹುಕಾರರು, ಚಿನ್ನಪ್ಪನೊಂದಿಗೆ 'ರಷ್' ನೋಡಲು ಹೋದರು. ರಷ್ ನೋಡಿ ಬಂದೊಡನೆಯೇ ಸಾಹುಕಾರರು ಊಟಮಾಡಿ ಸ್ಟೇಷನ್ನಿಗೆ ಹೊರಡಲನುವಾದರು. ಸುದರ್ಶನರು, ಚಿನ್ನಪ್ಪ ಅವರನ್ನು ಕಳಹಿಸಿ ಬರಲು ಜತೆಯಲ್ಲಿ ಸ್ಟೇಷನ್ನಿಗೆ ಹೊರಟರು.

ಸಾಹುಕಾರರು ಸೆಕೆಂಡ್‌ಕ್ಲಾಸ್ ಡಬ್ಬಿಯಲ್ಲಿ ಕುಳಿತು ಮುರಿಗೆಯ್ಯನಿಗೆ ಪಕ್ಕದಲ್ಲಿದ್ದ ಇಂಟರ್‌ಕ್ಲಾಸಿನಲ್ಲಿ ಕೂಡ ಹೇಳಿದರು.

ರೈಲು ಹೊರಟಮೇಲೆ ಚಿನ್ನಪ್ಪ ಕಾರಿನಲ್ಲಿಯೇ ಸುದರ್ಶನರನ್ನು ಕಂಪೆನಿ ಮನೆಗೆ ಕರೆತಂದು ಬಿಟ್ಟು, ಅವರ ಜತೆಯಲ್ಲಿ ರೂಮಿಗೆ ಬಂದು

"ನಿಮ್ಮಲ್ಲಿ ಒಂದು ವಿಷಯ ಅರಿಕೆಮಾಡಿಕೊಳ್ಳಬೇಕಾಗಿದೆ ಸುದರ್ಶನರೇ?"

"ಏನು ವಿಷಯ ಹೇಳಿ."

"ಇವತ್ತು ರಾತ್ರಿ ನೀವು ಅಲ್ಲಿಗೇ ಊಟಕ್ಕೆ ಬರಬೇಕು."

"ಊಟ! ಏನಪ್ಪಾ ಹೆಚ್ಚುಗಟ್ಟಳೆ."

"ಇದೇ – ನೀವು ಬನ್ನಿ ನಿಮಗೇ ಗೊತ್ತಾಗುತ್ತದೆ"

"ರೇವಣ್ಣನ ಅಡಿಗೆ ಹೇಗೆ ಊಟ ಮಾಡುವುದು ಚಿನ್ನಪ್ಪನವರೇ."

"ಇವತ್ತು ರೇವಣ್ಣನ ಅಡಿಗೆಯಿಲ್ಲ ಸ್ವಾಮಿ. ಎಲ್ಲಾ ನಿಮ್ಮ ಶಿಷ್ಯರೇ ಮಾಡುತ್ತಾರೆ."

"ಬರಲೇಬೇಕೇ?"

"ನೀವು ತಪ್ಪಿಸಿಕೊಳ್ಳುವುದು ಸಾಧ್ಯವೇ ಇಲ್ಲ. ನಾನು ಏಳುಗಂಟೆಗೆ ಬಂದು ಕರೆದುಕೊಂಡು ಹೋಗುತ್ತೇನೆ."

"ಇನ್ನೂ ಯಾರು ಯಾರು ಬರುತ್ತಾರೆ."

"ಯಾರೂ ಇಲ್ಲ. ನಾವಿಷ್ಟೇ ಜನ."

"ಹಾಗೇ ಆಗಲಪ್ಪ"

ಎಂದು ಒಪಿಕೊಂಡರು.

ಚಿನ್ನಪ್ಪ ಹೆಚ್ಚು ಹೊತ್ತು ಕೂಡಲಿಲ್ಲ. ಅಲ್ಲಿಂದೆದ್ದು ನೇರವಾಗಿ ಸ್ಟೂಡಿಯೋ ಮನೆಗೆ ಬಂದ.

ಚಿನ್ನಪ್ಪನ ಬಹು ದಿನಗಳ ಬಯಕೆ ಅಂದು ಸಫಲಿಸಿತು. ಚಿನ್ನಪ್ಪ ಊಟ ಮುಗಿಸಿಕೊಂಡು ರೂಮು ಸೇರಿದ ಸ್ವಲ್ಪ ಹೊತ್ತಿನಲ್ಲಿ ಪಾರ್ವತಿ ಕೈಯಲ್ಲಿ ಎಲಡಿಕೆ ಹಿಡಿದು ರೂಮಿಗೆ ಬಂದಳು! ಚಿನ್ನಪ್ಪ ಭಾಗ್ಯಮ್ಮನಿಗೆ ಮನಸ್ಸಿನಲ್ಲಿಯೇ ವಂದಿಸಿದ.

ಸಂಜೆ ಚಿನ್ನಪ್ಪ ಭಾಗ್ಯಮ್ಮನ ಜತೆ ಮಾತನಾಡುತ್ತ ಕುಳಿತಿದ್ದ. ಒಳಗೆ ಸರೋಜ, ಪಾರ್ವತಿ, ಚೂಡಾಮಣಿ, ಕಾಂತಿಮತಿ ಅಡಿಗೆಯ ಸಡಗರ ದಲ್ಲಿದ್ದರು.

ಭಾಗ್ಯಮ್ಮ ಬಾಯಲ್ಲಿ ತಾಂಬೂಲ ಒತ್ತರಿಸಿಕೊಂಡು

"ಭಾಗ್ಯಮ್ಮ ಮಾತಿಗೆ ತಪ್ಪೋಳಲ್ಲಾಂತ ಗೊತ್ತಾಯ್ತೇ ಚಿನ್ನಪ್ಪ."

"ಗೊತ್ತಾಯಿತಮ್ಮ. ಸಾಹುಕಾರರು ಊರಿಗೆ ಹೋದಾರೆ ಎಂತಾ ಕಾದಿದ್ದೆ."

"ಏನೋ ಅಂಟಿಸಿ ಊರಿಗೆ ಹೊತ್ತು ಹಾಕಿದೆಯಲ್ಲಾ."

"ತುಂಬ ಕೆಲಸವಿತ್ತಮ್ಮ ಅವರಿಗೆ. ಅಲ್ಲ ಭಾಗ್ಯಮ್ಮ, ಸಾಹುಕಾರರು ಊರಿಗೆ ಬಂದಮೇಲೆ ನನ್ನಗತಿ-"

"ನಿನ್ನ ಗತಿಯೇನಾಗುತ್ತದೆ ?"

"ಪಾರ್ವತಿಯನ್ನು ನಾನು ನೋಡುವುದಕ್ಕೇ ಆಗುವುದಿಲ್ಲ."

"ಅದಕ್ಕೇನಂತೆ !"

"ಸಾಹುಕಾರರು ಕೋಪ ಮಾಡಿಕೊಂಡರೆ !"

"ನಾನು ಅವರಿಗೆ ಹೇಳಿ ಎಲ್ಲಾ ಸರಿಮಾಡುತ್ತೇನೆ ಸುಮ್ಮನಿರು. ಸರೋಜಂಗೇನು ತೆವಲು ಬಂತು ?"

"ಯಾಕಮ್ಮ ಹೀಗನ್ನುತ್ತೀ."

"ಸಾಹುಕಾರರು ಊರಿಗೆ ಹೋದಾರೇ ಎಂದು ಕಾಯುತ್ತಿದ್ದಳು."

"ಸಾಹುಕಾರರು ಇದ್ದಾಗಲೇ ಸುದರ್ಶನರನ್ನು ಊಟಕ್ಕೆ ಕರೆದಿದ್ದರೆ ಅವರು ಬೇಡವೆನ್ನುತ್ತಿದ್ದರೇ."

"ಊಟಕ್ಕಲ್ಲವೋ ಮಂಕು ಮುಂಡೇದೆ. ಸುದರ್ಶನರ ಹೆಸರು ಹೇಳಿಕೊಂಡು ಜಪಮಾಡುತ್ತಿದ್ದಾಳೆ. ಒಂದು ದಿನ ಎದ್ದು ಸುದರ್ಶನರ ರೂಮಿಗೇ ಹೋಗಿಬಿಡುತ್ತೇನೆಂದಳು. ಅವಳ ಬಾಯಿ ಮುಚ್ಚಿಸಬೇಕಾದರೆ ನನಗೆ ಸಾಕು ಸಾಕಾಗಿ ಹೋಯಿತು. 'ಸಾಹುಕಾರರು ಊರಿಗೆ ಹೋಗಲಿ ತಡೀ–ಏನಾದರೂ ಮಾಡುವ' ಎಂದು ಹೇಳಿದ್ದೆ. ಅವರು ಹೊರಟದ್ದೇ ಸಾಕು, ನನ್ನ ಕೊರೆಯುವುದಕ್ಕೆ ಆರಂಭಮಾಡಿದಳು."

"ಸುದರ್ಶನರು ಏನನ್ನುವರೊ?"

"ಏನನ್ನುತ್ತಾರೆ–ಸರೋಜನಂಥ ಹುಡುಗಿ ಒಲಿದು ಬಂದರೆ ಬೇಡವೆನ್ನುತ್ತಾರೆಯೇ?"

"ಹಾಗಲ್ಲ ಭಾಗ್ಯಮ್ಮ. ಅವರ ವಿಷಯ ನಿನಗೆ ಗೊತ್ತಿಲ್ಲ."

"ನೀನು ಹೋಗಿ ಕರೆದುಕೊಂಡು ಬರುತ್ತಿಯೋ ಇಲ್ಲವೋ?"

"ಕರೆದುಕೊಂಡು ಬರುವುದಕ್ಕೆ ನಾನು ಒಪ್ಪಿಕೊಂಡಿದ್ದೇನಲ್ಲಾ."

"ಸರಿ ಬಿಡು–ಮುಂದಿನ ವಿಷಯ ನಮಗೇಕೆ, ಅವಳುಂಟು, ಅವರುಂಟು."

"ಸಾಹುಕಾರರ ಕಿವಿಗೆ ಬಿದ್ದರೆ...."

"ಅದೇನು ಮಾಡತ್ತೆ ಬಿಡೋ–ಮಂಕು ಮೂದೇವಿ."

ಎಂದು ಬಿಟ್ಟಳು. ಚಿನ್ನಪ್ಪನಿಗೆ ಈ ಪ್ರಸಂಗದ ಪರಿಣಾಮವೇನಾಗುವುದೋ ಎಂದು ಭಯವೇ ಆಯಿತು.

ಸುದರ್ಶನರು ಬರುವಷ್ಟರಲ್ಲಿ ತೊಟ್ಟಿಯಲ್ಲಿ ಸೊಗಸಾದ ಅಗ್ರದ ಬಾಳೆಲೆ ಹಾಕಿ ಬಡಿಸಲಾಗಿತ್ತು. ಚಿನ್ನಪ್ಪ ಹೋಗಿ ಅವರನ್ನು ಕರೆದುಕೊಂಡು ಬಂದ.

ಸುದರ್ಶನರು, ಚಿನ್ನಪ್ಪನ ಜತೆಯಲ್ಲಿ ಭಾಗ್ಯಮ್ಮ, ಪಾರ್ವತಿ, ಸರೋಜನೂ ಊಟಕ್ಕೆ ಕುಳಿತರು. ಚೂಡಾಮಣಿ, ಶಾಂತಿಮತಿ ಬಡಿಸುವುದಕ್ಕೆ ನಿಂತರು.

ರಸಕವಳವೇ ಸಿದ್ಧವಾಗಿತ್ತು. ವಾಂಗೀಭಾತ್. ಪೂರಿ, ಶಾಮಿಗೆ ಖೀರು, ಕರಿಕಡುಬು, ಪಲ್ಯಗಳು, ಹುಳಿ, ಕೋಸುಂಬರಿ ಇತ್ಯಾದಿ.

ಉಪಚಾರಕ್ಕೆ ಕಟ್ಟುಬಿದ್ದು ಸುದರ್ಶನರು ಸ್ವಲ್ಪ ಶಕ್ತಿಮೀರಿ ಸ್ವೀಕರಿಸಬೇಕಾಯಿತು. ಚಿನ್ನಪ್ಪನಂತೂ ಬಂಗೆಟ್ಟಂತೆ ಹೊಡೆದ.

ಊಟಮುಗಿದ ಮೇಲೆ ಚಿನ್ನಪ್ಪ ಸುದರ್ಶನರನ್ನು ಸಾಹುಕಾರರ ರೂಮಿಗೆ ಕರೆದುಕೊಂಡು ಹೋಗಿ ಕೂಡಿಸಿ ತಾಂಬೂಲ ತಂದುಕೊಟ್ಟ. ಸುದರ್ಶನರು ತಾಂಬೂಲ ಬೇಡವೆಂದರು. ಚಿನ್ನಪ್ಪ ತಾಂಬೂಲ ಹಾಕಿಕೊಂಡು ಸಿಗರೇಟ್ ಹಚ್ಚಿದ. ಒಳಗಿನಿಂದ ಭಾಗ್ಯಮ್ಮ ಅವನನ್ನು ಕೂಗಿ

ದಳು. ಚಿನ್ನಪ್ಪ ಎದ್ದು ಹೊರಟ.

ಚಿನ್ನಪ್ಪ ಹೊರಗೆ ಹೋದ ಒಂದೆರಡು ನಿಮಿಷಗಳಲ್ಲಿ ಸರೋಜ ಒಳಗೆ ಬಂದಳು. ಸುದರ್ಶನರು ಚಕಿತರಾದರು.

ಸರೋಜ ಸಾವಕಾಶವಾಗಿ ಕುಳಿತು ತಾಂಬೂಲದ ತಟ್ಟೆಗೆ ಕೈನೀಡಿ ಎರಡು ಬೀಡ ಸಿದ್ಧಗೊಳಿಸಿ ಒಂದನ್ನು ಸುದರ್ಶನರಿಗಿತ್ತಳು. ಅವರು ಬೇಡವೆನ್ನಲಾಗದೆ ತಾಂಬೂಲ ಬಾಯಿಗೆ ಹಾಕಿಕೊಂಡರು.

ಸರೋಜ ಎದ್ದು ಹೊರಬಾಗಿಲು ಚಿಲುಕ ಹಾಕಿ ಅಲ್ಲೇ ಕ್ಷಣಕಾಲ ನಿಂತಳು. ಕುಳಿತ ಸ್ಥಳದಿಂದ ಸುದರ್ಶನರು ಅಲುಗಾಡಲಿಲ್ಲ. ಅವಳ ಮನಸ್ಸಿನ ಭಾವನೆಯನ್ನು ಗ್ರಹಿಸಿದ ಸುದರ್ಶನರು ಎದ್ದು ನಿಂತರು. ಸರೋಜ ಅವರ ಬಳಿಗೆ ಬಂದು ಬುಜಗಳನ್ನು ಹಿಡಿದು ಕುಳ್ಳಿರಿಸಿ ತಾನೂ ಅವರ ಬಳಿ ಕುಳಿತಳು.

ಆಲೋಚನಾಪರರಾಗಿದ್ದ ಸುದರ್ಶನರ ಎರಡು ಕೈಗಳನ್ನು ತನ್ನ ಕರಸಂಪುಟದಲ್ಲಿ ಅಡಗಿಸಿಕೊಂಡು ಸರೋಜ ಮೆಲುದನಿಯಲ್ಲಿ

"ನನ್ನ ಮೇಲೆ ಕೋಪವೇ?"

"ಕೋಪವೇತಕ್ಕೆ. ನೀನು ನನಗೇನು ಅಪರಾಧ ಮಾಡಿದೆ."

"ಹಾಗಾದರೆ ಏಕೆ ಮಾತನಾಡುವುದಿಲ್ಲ."

"ಏನು ಮಾತನಾಡಲಿ."

"ನಿಮಗೆ ನಾನು ಹೇಳಿಕೊಡಬೇಕೇ?"

"ನೀನೀಗ ನಿರೀಕ್ಷಿಸುವ ಮಾತು ಎಂಥದು?"

"ಅದನ್ನು ನೀವು ಬಲ್ಲಿರಿ."

"ಬಲ್ಲೆ."

ಸರೋಜ ಬಲತೋಳಿನಿಂದ ಸುದರ್ಶನರನ್ನಪ್ಪಿದಳು. ಅವಳ ಕೈ ಕೆಂಡದಂತೆ ಸುಡುತ್ತಿತ್ತು. ಶಿಲಾಮೂರ್ತಿಯಂತೆ ಕುಳಿತಿದ್ದ ಸುದರ್ಶನರನ್ನು ನೋಡಿ ಅವಳಿಗೆ ಆಶ್ಚರ್ಯವೂ ಆಯಿತು – ಕೋಪವೂ ಬಂದಿತು.

"ಈ ದಿನ ಬಂದೀರೆಂದು ನಾನು ಹಾತೊರೆಯುತ್ತಿದ್ದೆ."

"ನನಗಾಗಿಯೇ!"

"ಇನ್ನು ಯಾರಗಾಗಿ? ನನ್ನ ಮನಸ್ಸನ್ನೆಂದೋ ನಿಮಗೆ ಒಪ್ಪಿಸಿಬಿಟ್ಟಿದ್ದೇನೆ."

"ಸಾಹುಕಾರರು...."

"ಈಗೇಕೆ ಅವರ ಸುದ್ದಿ."

"ಅವರು ನಿನ್ನ ಯಜಮಾನರಲ್ಲವೇ ?"

"ನನಗೆ ಅವರು ತಾಳಿಕಟ್ಟಿಲ್ಲ."

"ನಿನ್ನನ್ನವರು ಬಹಳ ಪ್ರೀತಿಸುತ್ತಾರೆ."

"ನಾನು ಅವರನ್ನು ಪ್ರೀತಿಸುವುದಿಲ್ಲ. ತಾಯಿಯ ಬಲವಂತಕ್ಕೆ ಒಪ್ಪಿಕೊಂಡೆ."

"ಈ ಚಿತ್ರ ಅವರು ಮಾಡುತ್ತಿರುವುದು ನಿನಗಾಗಿ."

"ಅವರಿಗೆ ಬೇಕಾದುದನ್ನು ಅವರಿಗೆ ಕೊಟ್ಟಿದ್ದೇನೆ. ನನಗೆ ಬೇಕಾದು ದನ್ನು ನಾನು ತೆಗೆದುಕೊಂಡರೇನು ತಪ್ಪು."

"ನಿನಗೆ ಅವರು ಸ್ವಾಮಿ – ನನಗೆ ಧಣಿಗಳು."

"ನಿಮಗವರು ಕೊಡುತ್ತಿರುವ ಹಣದ ಹತ್ತರಷ್ಟು ಕೆಲಸ ತೆಗೆದು ಕೊಳ್ಳುತ್ತಿದ್ದಾರೆ."

"ಹಣವೇ ಮುಖ್ಯವಲ್ಲ. ಹಣ, ಗೌರವ ಎಲ್ಲಕ್ಕೂ ಮುಖ್ಯವಾದದ್ದು ಮನುಷ್ಯನ ವಿಶ್ವಾಸ. ನನ್ನನ್ನು ಒಡಹುಟ್ಟಿದವನಂತೆ ನೋಡಿಕೊಳ್ಳುತ್ತಿದ್ದಾರೆ."

"ಹೌದು. ಈಗ ನಿಮ್ಮಿಂದ ಅವರ ಕೆಲಸವಾಗಬೇಕಾಗಿದೆ. ತಮ್ಮ ಕೆಲಸವಾಗಬೇಕಾದರೆ ಅವರಷ್ಟು ವಿಶ್ವಾಸ ತೋರಿಸುವವರು ಈ ಜಗತ್ತಿ ನಲ್ಲಿಯೇ ಇನ್ನು ಯಾರೂ ಇಲ್ಲ."

"ಅವರನ್ನು ವಂಚಿಸಿ ನಾವು ಸ್ನೇಹಬೆಳಸುವುದು ಯೋಗ್ಯವೇ ?"

"ಇದರಲ್ಲಿ ತಪ್ಪೇನು. ನಾನು ಅವರ ಲಗ್ನವಾದ ಹೆಂಡತಿಯಲ್ಲ."

"ಸ್ನೇಹ, ವಿಶ್ವಾಸ, ಕೃತಜ್ಞತೆ ಕೇವಲ ಗಂಡ, ಹೆಂಡಿರ ಸೊತ್ತಲ್ಲ. ಎಲ್ಲರಲ್ಲಿಯೂ ಇರಬೇಕಾದ ಗುಣಗಳವು."

"ನಿಮ್ಮನ್ನು ಬಿಟ್ಟು ನಾನಿರಲಾರೆ. ನನ್ನ ಕಣ್ಣಲ್ಲಿ, ಮನಸ್ಸಿನಲ್ಲಿ, ಪೈಯಲ್ಲಿ ನೀವು ತುಂಬಿಹೋಗಿದ್ದೀರಿ. – ಅಮ್ಮ ಬೇಡವೆಂದು ತಡೆಯದಿದ್ದರೆ ನಾನೆಂದೋ ನಿಮ್ಮ ರೂಮಿಗೇ ಬರುತ್ತಿದ್ದೆ – ನೀವೀಗ ನನ್ನನ್ನು ನಿರಾಕರಿಸಿ ದರೆ ನಾನು ಮದರಾಸ್ ಬಿಟ್ಟು ಎಲ್ಲಿಗಾದರೂ ಹೊರಟುಹೋಗುತ್ತೇನೆ."

"ಚಿತ್ರದ ಗತಿ ?"

"ಅದನ್ನು ಕಟ್ಟಿಕೊಂಡು ನನಗೆ ಆಗಬೇಕಾದದ್ದೇನು ? ನಿಮಗೆ ನಾನು ಬೇಡವಾದ ಮೇಲೆ ಚಿತ್ರ ನನಗೇಕೆ ಬೇಕು."

"ಈ ಗಂಡಾಂತರದಿಂದ ಹೇಗೆ ಪಾರಾಗಬೇಕೆಂದು ಸುದರ್ಶನರಿಗೆ ಯೋಚನೆಗಿಟ್ಟಿಕೊಂಡಿತು. ಸರೋಜನ ಮೃದುಹಸ್ತಗಳನ್ನು ತಮ್ಮ ಕೈಯಲ್ಲಿ ಹಿಡಿದು

"ಸರೋಜ, ನಿನಗೆ ನನ್ನಲ್ಲಿ ತುಂಬ ಗೌರವವಿದೆಯಲ್ಲವೇ ?"

"ಇದೆ."

" ತುಂಬ ಪ್ರೀತಿಯಿದೆಯಲ್ಲವೇ ? "

" ನಿಮ್ಮ ದಾಸಿಯಾಗಿರಲು ಸಿದ್ಧವಾಗಿದ್ದೇನೆ."

" ನಾನು ಹೇಳುವ ಮಾತುಗಳನ್ನು ಶಾಂತವಾಗಿ ಕೇಳು."

" ಹೇಳಿ."

" ನನ್ನ ಜೀವನದ ಒಳಗುಟ್ಟನ್ನು ನಾನಿದುವರೆಗೆ ಯಾರಲ್ಲಿಯೂ ಬಾಯಿ ಬಿಟ್ಟಿಲ್ಲ. ನಿನ್ನನ್ನು ನಂಬಿ ಹೇಳುತ್ತೇನೆ. ಈ ಮಾತು ನಮ್ಮಿಬ್ಬರಲ್ಲಿಯೇ ಇರಲಿ. ನನಗೆ ಮನೆಯಲ್ಲಿ ವಯಸ್ಸಾದ ತಾಯಿಯಿದ್ದಾಳೆ–ಒಬ್ಬ ತಂಗಿ ಯಿದ್ದಾಳೆ."

" ನಿಮಗೆ ಮದುವೆಯಾಗಿಲ್ಲವೇ ? "

" ಇಲ್ಲ."

" ನನ್ನ ತಂದೆ ಅಷ್ಟೇನೂ ಅನುಕೂಲಸ್ಥರಲ್ಲ. ಅವರಿಗೆ ಬರುತ್ತಿದ್ದ ವರಮಾನದಲ್ಲಿ ಮನೆಯ ಸಂಸಾರ ನಡೆಯುವುದೇ ಕಷ್ಟವಾಗಿತ್ತು. ಸಾಲ ಮಾಡಿ ನನ್ನ ತಂಗಿಯ ಮದುವೆ ಮಾಡಿದರು. ನಮಗಿದ್ದ ಮನೆ ಮಾರಿ ಮದುವೆಯ ಸಾಲ ತೀರಿಸಿದೆ. ನನ್ನ ತಂಗಿ ಗಂಡನಮನೆಗೆ ಹೋದಳು. ಗಂಡನಮನೆಯವರು ಅವಳಿಗೆ ತೊನ್ನುರೋಗವಿದೆಯೆಂದು ಆಕ್ಷೇಪಿಸಿ ತೌರುಮನೆಗೆ ಕಳಿಸಿಕೊಟ್ಟರು. ಈ ವೇಳೆಗೆ ನಮ್ಮ ತಂದೆಯವರೂ ತೀರಿ ಕೊಂಡಿದ್ದರು. ನಾನು ದಕ್ಷರಾದ ಡಾಕ್ಟರುಗಳಿಂದ ಚಿಕಿತ್ಸೆ ಮಾಡಿಸಿದೆ. ಅವಳಿಗೆ ತೊನ್ನಾಗಿರಲಿಲ್ಲ–ಎಡತೋಳಿನ ಮೇಲೆ ಒಂದೆರಡು ಲ್ಯೂಕೋ ಡರ್ಮಾ ಮಚ್ಚೆಗಳಾಗಿದ್ದವು. ಚರ್ಮದಲ್ಲಿ ಕಸುವಿಲ್ಲದಿದ್ದರೆ ಈ ರೋಗ ಬರುತ್ತದೆ. ಎರಡು ವರ್ಷಗಳ ಚಿಕಿತ್ಸೆಯಾದ ಮೇಲೆ ಆಕೆಗೆ ಸಂಪೂರ್ಣ ವಾಗಿ ಗುಣವಾಯಿತು. ಅವಳ ಗಂಡನಿಗೂ, ಅತ್ತೆಗೂ, ಮಾವನಿಗೂ ಈ ವಿಷಯಗಳನ್ನೆಲ್ಲಾ ನಿವೇದಿಸಿ ಬೇಡಿಕೊಂಡೆ. ಅವರು ಮನಸ್ಸು ಬದಲಾ ಯಿಸಲಿಲ್ಲ. ನನ್ನ ತಂಗಿಯ ತಲೆಯ ಮೇಲೆ ಕಲ್ಲು ಎತ್ತಿಹಾಕಿದರು. ಮುಂದೇನು ಮಾಡುವುದೆಂದು ಆಲೋಚಿಸಿ ಅವಳನ್ನು ಶಾಲೆ ಸೇರಿಸಿದೆ. ಈ ವರ್ಷ ಎಸ್. ಎಸ್. ಎಲ್. ಸಿ. ಮಾಡಿಕೊಂಡು ಜೂನಿಯರ್ ಇಂಟರ್ ಕ್ಲಾಸಿಗೆ ಬಂದಿದ್ದಾಳೆ. ಅವಳ ಜೀವನ ನೇರವಾಗುವವರೆಗೆ ನಾನು ಮದುವೆ ಯಾಗುವುದಿಲ್ಲವೆಂದು ಶಪಥಮಾಡಿದೆ.

" ಅವರಿಗೆ ಬೇರೆ ಮದುವೆ ಮಾಡುವಿರಾ ? "

" ಅದಕ್ಕವಳು ಒಪ್ಪುವುದಿಲ್ಲ. ನನ್ನ ತಾಯಿ, ತಂಗಿ ಇವರಿಗೆ ನನ ಜೀವನ ಮುಡುಪಾಗಿಟ್ಟಿದ್ದೇನೆ. ಇಂಥ ದುರಂತ ಬಾಳಿನಲ್ಲಿರುವ ಜೀವದಿಂದ ನಿನಗೆ ಯಾವ ಸಂತೋಷ ಸಿಕ್ಕಬಹುದು. ಸರೋಜ – ನೀನು ವಯಸ್ಸಿನಲ್ಲಿ ನನಗಿಂತ ಚಿಕ್ಕವಳು. ನಿನಗೊಂದು ಬುದ್ಧಿಯ ಮಾತು ಹೇಳುವ ಅಧಿಕಾರ ನನಗಿದೆಯೆಂದುಕೊಂಡಿದ್ದೇನೆ. ಕಾಮವೇ ಜೀವನದ ಸರ್ವಾರ್ಥಸಿದ್ಧಿಯಲ್ಲ. ಕಾಮಕ್ಕೆಳಸುವ ಮನಸ್ಸನ್ನು ಪ್ರೇಮದ ಕಡೆ ತಿರುಗಿಸಬಹುದು. ಕಾಮ ಬೆಂಕಿಯಂತೆ – ಸುಡುತ್ತದೆ. ಸಮುದ್ರದಲ್ಲಿ ಆಕ್ಟೋಪಸ್ (Octopus) ಎನ್ನುವ ಪ್ರಾಣಿಯೊಂದಿದೆಯಂತೆ. ಅದರ ಮೈಯೆಲ್ಲಾ ಕೈಗಳೇ. ಆ ಕೈಗಳಿಂದ ಮನುಷ್ಯನನ್ನು ಎಳೆದುಕೊಂಡು, ಎಲ್ಲ ಕೈಗಳಿಂದ ಅವನನ್ನಪ್ಪಿ ರಕ್ತ ಹಿಂಡಿ ಬಿಡುತ್ತದಂತೆ. ಕುರುಕ್ಷೇತ್ರ ಯುದ್ಧ ಮುಗಿದ ಮೇಲೆ ಧೃತರಾಷ್ಟ್ರನನ್ನು ನೋಡಲು ಪಾಂಡವರು ಬಂದಾಗ, ಧೃತರಾಷ್ಟ್ರ ಭೀಮನನ್ನು ಅಪ್ಪಿಕೊಳ್ಳಲು ಬಯಸಿದನಂತೆ. ಧೃತರಾಷ್ಟ್ರನ ಮನಃಸ್ಥಿತಿಯನ್ನು ಬಲ್ಲ ಕೃಷ್ಣ ಲೋಹದ ಮೂರ್ತಿಯೊಂದನ್ನು ತೋರಿಸಿ 'ಅಗೋ ಭೀಮ' ಎಂದನಂತೆ. ಧೃತರಾಷ್ಟ್ರನ ಅಪ್ಪುಗೆಗೆ ಸಿಕ್ಕಿದ ಲೋಹದ ಮೂರ್ತಿ ಪುಡಿಪುಡಿಯಾಯಿತಂತೆ! ಕಾಮವನ್ನು ಆಕ್ಟೋಪಸ್ಸಿಗೆ, ಧೃತರಾಷ್ಟ್ರನಿಗೆ ಹೋಲಿಸಬಹುದು. ಪ್ರೇಮವನ್ನು ತಾಯಿಯ ಅಪ್ಪುಗೆಗೆ ಹೋಲಿಸಬಹುದು. ನನಗೆ ನಿನ್ನ ಪ್ರೇಮದ – ನಿರ್ವಾಜ, ನಿಷ್ಕಳಂಕ, ನಿಸ್ಸೀಮ ಪ್ರೇಮದ ಅಪ್ಪುಗೆಯನ್ನು ಕೊಡು – ಕಾಮದ ಬಂಧನದಲ್ಲಿ ಸಿಕ್ಕಿಸಿ, ನನ್ನನ್ನು ಬೇಟೆಯಾಡಬೇಡ."

ಸರೋಜನ ಬಾಯಲ್ಲಿ ಮಾತು ಹೊರಡಲಿಲ್ಲ. ಅವಳ ಕಣ್ಣುಗಳಿಂದ ಧಾರಾವಾಹಿನಿ ಹೊರಟಿತ್ತು.

" ಭಗವದ್ಗೀತೆಯ ತುಂಬ ಶ್ರೀಕೃಷ್ಣ ಅರಿಷಡ್ವರ್ಗಗಳನ್ನು ಗೆಲ್ಲುವ ವಿಷಯವನ್ನೇ ಪ್ರಸ್ತಾಪಿಸಿದ್ದಾನೆ. ಏಕೆ ಬಲ್ಲೆಯಾ? ಕಾಮ, ಕ್ರೋಧ, ಲೋಭ, ಮೋಹ. ಮದ, ಮಾತ್ಸರ್ಯಗಳು, ಪಾವಚಿಕಟ್ಟೆದ ಪಾವಟಿಗೆಗಳಿದ್ದ ಹಾಗೆ. ಒಮ್ಮೆ ಕಾಲು ಜಾರಿತೆಂದರೆ ಮನುಷ್ಯ ಕೆಳಗಡೆ ಉರುಳಿಕೊಂಡು ಹೊಳೆಯ ಪಾಲಾಗುತ್ತಾನೆ. ಪಾಪದ ಗತಿ ಅವರೋಹ. ಪುಣ್ಯದ ಗತಿ ಆರೋಹದ್ದು. ಧರ್ಮದ ಒಂದು ಮೆಟ್ಟಿಲು ಹತ್ತಿದರೆ ಅದೇ ಒಂದೊಂದು ಮೆಟ್ಟಿಲಾಗಿ ಮೇಲಕ್ಕೆ ಒಯ್ಯುತ್ತದೆ. ನಾನು ಸೂಳೆಯ ಮಗಳು – ಸೂಳೆ – ನನಗೆಂಥ ಧರ್ಮ ಎಂದು ನೀನು ಕೇಳಬಹುದು. ಅಂಬಾಪಾಲಿ, ಕಾನ್ಹೋಪಾತ್ರ, ಮೇರಿಮಾಗ್ಡಾಲೀನಾ ಇವರು ವೇಶ್ಯೆಯರೇ! ಆದರಿಂದು ಅವರನ್ನು ಸಂತರೆಂದು ಜನ ಪೂಜಿಸುತ್ತಾರೆ. ಮನುಷ್ಯನ ಕೈಯಲ್ಲಿ ಅವನ ಬಾಳು ದಂತದ

ಹಲಗೆಯ ಹಾಗೆ ನಿಂತಿರುತ್ತದೆ. ಅನುಭವವೆಂಬ ಉಳಿಯಿಂದ ಅದರಮೇಲೆ ಮನುಷ್ಯ ದೇವರನ್ನೂ ಕೊರೆಯಬಹುದು, ಪಿಶಾಚಿಯನ್ನೂ ಕೊರೆಯಬಹುದು. ನನ್ನಮೇಲಿನ ಮೋಹಬಿಟ್ಟುಬಿಡು– ಸಾಹುಕಾರರಿಗೆ, ಅವರ ವಿಶ್ವಾಸಕ್ಕೆ ನೀನು, ನಾನು ದ್ರೋಹ ಬಗೆದರೆ ನಾವು ಊರ್ಜಿತವಾಗುವುದಿಲ್ಲ. ಅವರ ನೋವಿನಬಿಸಿಯುಸಿರು ನಮ್ಮನ್ನು ಸುಟ್ಟುಬಿಡುತ್ತದೆ."

ಸರೋಜ ಪೀಠದಿಂದೆದ್ದು ಸುದರ್ಶನರ ಪಾದಗಳನ್ನು ಹಿಡಿದು ಸಾಷ್ಟಾಂಗ ನಮಸ್ಕಾರ ಮಾಡಿದಳು. ಸುದರ್ಶನರು ಅವಳ ತಲೆ ನೇವರಿಸಿ

"ಏಳು-ದುಃಖಪಡಬೇಡ. ನನ್ನನ್ನು ನಿನ್ನ ಅಣ್ಣನೆಂದು ಭಾವಿಸಿಕೋ"

ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಬಿಟ್ಟರು.

'ಇಂದು ನನ್ನನ್ನು ಕಾಯ್ದ ಶಕ್ತಿ ಯಾವದು?" ಎಂದು ಚಿಂತಿಸುತ್ತಲೇ ಸುದರ್ಶನರು ಕಂಪೆನಿ ಮನೆ ಮುಟ್ಟಿದ್ದರು. ಅದನ್ನು 'ದೇವರು' ಎಂದು ಕರೆಯಬೇಕೇ–'ಆತ್ಮಸಂಸ್ಕಾರ' ಎಂದು ಕರೆಯಬೇಕೇ? ಅಂದಿನ ಅನುಭವ ಸುದರ್ಶನರಿಗೆ ಅಪೂರ್ವ ಆನಂದ, ಶಕ್ತಿಯನ್ನು ತಂದೊದಗಿಸಿತ್ತು. ತೃಪ್ತಿಯ ಜತೆಯಲ್ಲಿ ಒಂದು ಸಂದೇಹ ಅವರನ್ನು ಬಾಧಿಸತೊಡಗಿತು. 'ನನ್ನಲ್ಲಿ ಅನುರಕ್ತಳಾಗಿ ಬಂದ ಹೆಣ್ಣನ್ನು ನಾನು ನಿಷ್ಕರುಣೆಯಿಂದ ತಿರಸ್ಕರಿಸಿದುದು ನ್ಯಾಯವೇ?"–ನ್ಯಾಯವಲ್ಲದೆ ಏನು. ಅವಳು ನನ್ನನ್ನು ಪ್ರೀತಿಸಿರಬಹುದು, ನಾನವಳನ್ನು ಪ್ರೀತಿಸಲಿಲ್ಲ; ಅವಳು ನನ್ನನ್ನು ಬಯಸಿರಬಹುದು, ನಾನವಳನ್ನು ಬಯಸಲಿಲ್ಲ—ಒಂದುವೇಳೆ ಇಬ್ಬರಲ್ಲಿಯೂ ಏಕಕಾಲದಲ್ಲಿ ಅನುರಾಗ ಸ್ಫುರಿಸಿದ್ದರೂ ನಾವು ಸಂಬಂಧ ಬೆಳಸುವುದು ಯುಕ್ತವಾದುದೇ?—ಇದು ನನ್ನದು, ಇದು ನನ್ನದಲ್ಲ; ಇದು ಗ್ರಾಹ್ಯ, ಇದು ಗ್ರಾಹ್ಯವಲ್ಲ ಎಂಬ ತಾರತಮ್ಯ ಜ್ಞಾನವಿಲ್ಲದಿರುವ ಮನುಷ್ಯನಿಗೂ ಪಶುವಿಗೂ ಏನು ವ್ಯತ್ಯಾಸ. ಮಾನವನ ಅತ್ಯಂತ ಕಠಿಣ ಸಮಸ್ಯೆಯೆಂದರೆ 'ಮಾನವತ್ವ'ವನ್ನು ಉಳಿಸಿಕೊಳ್ಳುವುದು ಎನ್ನುವ ಸತ್ಯದ ಕಠೋರ ಅನುಭವ ಸುದರ್ಶನರಿಗೆ ಬಂದಿತ್ತು.

## ೨೬

ಸಾಹುಕಾರರು ಊರಿನಲ್ಲಿಲ್ಲವೆಂದು ಕೆಲಸ ನಿಲ್ಲಲಿಲ್ಲ. ಕೌಸಲ್ಯೆಯ ಅಂತಃಪುರದ ಸೆಟ್ ಸಿದ್ಧವಾಯಿತು. ಆ ಸೆಟ್ಟಿಗೆ ಸಂಬಂಧಪಟ್ಟ ದೃಶ್ಯಗಳ ಷೂಟಿಂಗ್ ಆರಂಭವಾಯಿತು. ಇದರ ಜತೆಗೆ ಕೆಲವು ಹಾಡುಗಳ ರಿಕಾರ್ಡಿಂಗ್ ಸತ್ಯನಾಥನ್ ಮುಗಿಸಿದರು.

ಹಾಡಿನ ರಿಕಾರ್ಡಿಂಗ್ ಇದ್ದ ದಿನವಂತೂ ಸತ್ಯನಾಥನ್ ಅವರ ಸಂಭ್ರಮ ಹೇಳತೀರದು. ನಿತ್ಯಕ್ಕಿಂತಲೂ ಒಂದು ಗಂಟೆ ಮುಂಚೆ ಎದ್ದು ಸ್ನಾನಮಾಡಿ ಪೂಜೆಗೆ ಕೂಡುತ್ತಿದ್ದರು. ಅಂದು ಐದಾರು ದೇವಾಲಯಗಳಲ್ಲಿ ಹಣ್ಣು ಕಾಯಿ, ಅಭಿಷೇಕವಾಗಲೇ ಬೇಕು. ಕಂಪೆನಿ ಮನೆಯಿಂದ ಸ್ಟುಡಿಯೋಕ್ಕೆ ಹೋಗುವಾಗ ಯಾವ ದೇವಾಲಯ ಸಿಕ್ಕಲಿ ಸತ್ಯನಾಥನ್ ನಿಂತು ಪೂಜೆ ಮಾಡಿಸಿಯೇ ಮುಂದೆ ಕಾಲಿಡುತ್ತಿದ್ದರು. ರಸ್ತೆಯಲ್ಲಿ ಸಿಕ್ಕುವ ಯಾವ ಭಿಕ್ಷುಕನೂ ಬರಿಗೈಯಲ್ಲಿ ಹೋಗುವಂತಿರಲಿಲ್ಲ, ಸತ್ಯನಾಥನ್ ಅವರಲ್ಲಿ ಯೋಗ್ಯತೆ, ಶ್ರದ್ಧೆ ಎರಡೂ ಇದ್ದುದರಿಂದ ಅವರನ್ನು ಎಲ್ಲರೂ ಗೌರವಿಸುತ್ತಿದ್ದರು.

ಕೌಸಲ್ಯೆಯ ಅಂತಃಪುರದ ಸೆಟ್ಟಿನ ಕೆಲಸವಾರಂಭವಾದ ಎರಡನೆಯ ದಿನ ಸ್ವಲ್ಪ ಗೊಂದಲವೆದ್ದಿತು. ಕಂಟಿನ್ಯೂಯಿಟಿ (Continuity) ಕೆಲಸವನ್ನು ಸ್ಟುಡಿಯೋ ನೌಕರ ಒಬ್ಬ ನೋಡಿಕೊಳ್ಳುತ್ತಿದ್ದ. ಅವನ ಅಜಾಗರೂಕತೆಯಿಂದಲೊ ಡೈರೆಕ್ಟರ್ ಅಜಾಗರೂಕತೆಯಿಂದಲೊ ಅವನು ತಬ್ಬಿಬ್ಬಾಗಿಬಿಟ್ಟ. ಹಿಂದಿನ ದಿನ ದೃಶ್ಯದಲ್ಲಿದ್ದ ಅಲಂಕಾರ ವಸ್ತುಗಳು ಯಾವವು, ಪಾತ್ರಗಳು ಎಲ್ಲಿ ನಿಂತಿದ್ದವು, ಯಾವ ವೇಷ ಭೂಷಣ ಧರಿಸಿದ್ದವು ಎಂದು ತಿಳಿಯುವುದೇ ಕಷ್ಟವಾಯಿತು. ರಷ್ ಪ್ರಿಂಟ್ ನೋಡಿ ಅವುಗಳ ಪತ್ತೆ ಹಚ್ಚಿ ಷೂಟಿಂಗ್ ಮುಂದುವರಿಸಬೇಕಾಯಿತು. ಸೆಟ್ಟಿನ ಮೇಲಾದ ಗೊಂದಲನೋಡಿ ನಿರುದ್ಯೋಗಿಯಾಗಿ ತಿರುಗಾಡಿಕೊಂಡಿದ್ದ ಮಹಾದೇವಯ್ಯ ತಾನು ಕಂಟಿನ್ಯೂಯಿಟಿ ನೋಡಿಕೊಳ್ಳುವುದಾಗಿ ಮುಂದುವರಿದ.

ಸಾಹುಕಾರರು ಮದರಾಸಿಗೆ ಹತ್ತು ದಿನಗಳ ತರುವಾಯ ಹಿಂದಿರುಗಿದರು. ತಾವು ಎದುರಿಗಿಲ್ಲದಿದ್ದರೂ ಕೆಲಸ ನಿಲ್ಲದೆ ಮುಂದುವರಿದಿದ್ದುದನ್ನು ಕಂಡು ಅವರಿಗೆ ಅತ್ಯಾನಂದವಾಯಿತು. ಎರಡನೆಯ ಸೆಟ್ಟಿನ 'ರಷ್ ಪ್ರಿಂಟ್ಸ್' ನೋಡಿ ಕುಣಿದಾಡಿಬಿಟ್ಟರು. ಶಾಮಲಾಬಾಯಿ ಅತ್ಯುತ್ತಮ ಅಭಿನಯ ತೋರಿಸಿದ್ದುದಲ್ಲದೆ, ಭೂಪ್ ರಾಗದಲ್ಲಿ ಒಂದು ಹಾಡನ್ನು ಸೊಗಸಾಗಿ ಹಾಡಿದ್ದಳು.

ಸಾಹುಕಾರರು ಹೋದ ಕೆಲಸವೇನಾಯಿತೆಂದು ತಿಳಿಯಬೇಕೆಂಬ ಕುತೂಹಲ ಚಿನ್ನಪ್ಪನನ್ನು ಕೊರೆಯುತ್ತಿತ್ತು. ಸಾಹುಕಾರರು ಒಬ್ಬರೇ ಇದ್ದ ಹೊತ್ತು ಸಾಧಿಸಿ

"ಹೋದ ಕೆಲಸವೇನಾಯಿತು ಸ್ವಾಮಿ" ಎಂದು ಕೇಳಿದ.

"ನಾನೇ ಹೋದಮೇಲೆ ಬರಿಗೈಯಲ್ಲಿ ಬರುತ್ತೇನೇನೋ ಚಿನ್ನಪ್ಪ. ಹಣ ಜತೆ ಮಾಡಿಕೊಂಡೇ ಬಂದೆ. ಮೊದಲು ಬ್ಯಾಂಕ್‌ನಲ್ಲಿ ಅಕೌಂಟ್ ತೆಗೆಯಬೇಕು ನೋಡು."

"ಸೇಠನ ಹತ್ತಿರ ಹಣ ತರಲಿಲ್ಲವಷ್ಟೇ ?"

"ಅವನ ಹತ್ತಿರವೇ ತರಬೇಕಾಯಿತು. ನಿಂತ ಗಳಿಗೆಯಲ್ಲಿ ಯಾರು ಐವತ್ತು ಸಾವಿರ ಕೊಡುತ್ತಾರೆ ಹೇಳು. ಆದರೆ ಮಾರವಾಡಿ ತುಂಬ ಸತಾಯಿಸಿದ. ಥಿಯೇಟರ್ ಆಧಾರ ಮಾಡಿಕೊಂಡು, ಮೈಸೂರು - ಕೊಡಗು ಹಂಚಿಕೆಯ (Distribution) ಹಕ್ಕನ್ನೂ ಪಡೆದುಕೊಂಡ."

"ನಾಲ್ಕುಕಾಸು ಬಡ್ಡಿ ಹೆಚ್ಚಾಗಿ ಕೊಟ್ಟಿದ್ದರೂ ಚಿಂತೆಯಿರಲಿಲ್ಲ. ನೀವು ಥಿಯೇಟರ್ ಆಧಾರ ಮಾಡಬಾರದಾಗಿತ್ತು ಸ್ವಾಮಿ."

"ನನಗೂ ಮನಸ್ಸಿಲ್ಲ. ಆದರೇನು ಮಾಡಲಿ ಹೇಳು. ಇಲ್ಲಿ ಇಷ್ಟೊಂದು ಬಾಕಿಯಿಟ್ಟುಕೊಂಡು ನಾವು ಹಣಕ್ಕೆ ತೊಂಚಾವಂಚ ಪಡುವುದು ಸರಿಯಲ್ಲ. ನಮ್ಮ ಕೈಯಲ್ಲಿ ಕಾಸಿಲ್ಲವೆಂದು ಗೊತ್ತಾದರೆ ಸ್ಟೂಡಿಯೋದವರು, ನಮ್ಮ ಆಕ್ಟರುಗಳು ಎಲ್ಲರೂ ತಿರುಗಿ ಬೀಳುತ್ತಾರೆ."

"ಸ್ಟೂಡಿಯೋ ಬಿಲ್ ಬಂದಿದೆ. ಶಾಮಲಾಬಾಯಿ ಎರಡು ಮೂರುಸಾರಿ ದುಡ್ಡು ಕೇಳಿದಳು. ಸುದರ್ಶನರು ಹಣ ಕೇಳಿದರು. ಭೂಪೇನ್‌ಬಾಬು, ಇತರ ನಟರು ಹಣಕ್ಕೆ ಬಡಕೋತಿದ್ದಾರೆ."

"ಎಲ್ಲಾರಿಗೂ ಸ್ವಲ್ಪ ಸ್ವಲ್ಪ ಕೊಡಪ್ಪಾ."

"ಶಿವಾನಂದರಿಗೆ ಏನು ಗೊತ್ತುಮಾಡಿದಿರಿ ಸ್ವಾಮಿ."

"ಅವರೂ ಹಣ ಕೇಳಿದರೇ ?"

"ಮೂರು ನಾಲ್ಕು ಸಲ ಕೇಳಿದರು. ನೀವು ಊರಿಗೆ ಬಂದ ಮೇಲೆ ಇತ್ಯರ್ಥ ಮಾಡುವುದಾಗಿ ತಿಳಿಸಿದೆ."

"ಅವರಿಗೇನಯ್ಯ ಹಣಕ್ಕೆ ಧಾಡಿ. ಅವರೂ ಏಕೆ ಕಾಡಬೇಕು ?"

"ಅವರ ಸಂಗಡ ನೀವೇ ಮಾತನಾಡಿ ನೋಡಿ ಸ್ವಾಮಿ."

"ಪಬ್ಲಿಸಿಟಿ (Publicity) ನಾವು ಏನೂ ಮಾಡಿಸಿಯೇ ಇಲ್ಲ ಅಲ್ವಾ."

"ಇದುವರೆಗೆ ಏನೂ ಮಾಡಿಲ್ಲ. ಇನ್ನುಮೇಲೆ ಆರಂಭಿಸಬೇಕು."

"ಬೇಗ ಶುರುಮಾಡಿ ಎಂದು ಸೇಠ್ ಹೇಳಿದ."

"ಆಡಕ್ಟೊಬ್ಬರು ಸರಿಯಾದವರನ್ನು ಗೊತ್ತುಮಾಡಬೇಕು."

"ಯೋಚನೆ ಮಾಡೋಣ"

ಎಂದು ಸಾಹುಕಾರರು ಹೇಳಿದರು.

ರೆಕ್ಕೆಯಿಲ್ಲದ ಪಂಗುವಾಗಿದ್ದ ಮಹಾದೇವಯ್ಯನಿಗೆ 'ಕಂಟಿನ್ಯೂಯಿಟಿ' ಕೆಲಸ ಸಿಕ್ಕಿದುದು ಹೆಮ್ಮೆಯ ವಿಷಯವಾಗಿತ್ತು. ಅವನು ಸ್ಟೂಡಿಯೋ ಒಳಗೆ ಹೋಗಿ ಬರುವುದಕ್ಕೆ, ತಂತ್ರಜ್ಞರನ್ನು ಸ್ಟೂಡಿಯೋ ನೌಕರರನ್ನು ಮಾತನಾಡಿಸುವುದಕ್ಕೆ ಅವಕಾಶ ಸಿಕ್ಕಿದಂತಾಯಿತು. ಈಗವನು 'ಶ್ರೀ ಶೈಲ ಪಿಕ್ಚರ್ಸ್' ಕಂಪೆನಿಯ ನೌಕರನಾಗಿರಲಿಲ್ಲ; 'ಆಫೀಸರ್' ಆಗಿದ್ದ.

ಸಾಹುಕಾರರು ಬೆಂಗಳೂರಿಗೆ ಹೋಗಿದ್ದಾಗ ಸೇಠಿನಜತೆ ಮಾತನಾಡು ವಾಗಲೆಲ್ಲಾ ಎದುರಿಗೆ ಮುರಿಗೆಯ್ಯನನ್ನು ಇಟ್ಟು ಕೊಳ್ಳುತ್ತಿದ್ದರು. ಸೇಠ್ ಪಬ್ಲಿಸಿಟಿ ವಿಷಯ ಪ್ರಸ್ತಾಪಿಸಿ, ಅದನ್ನು ಕೂಡಲೆ ಆರಂಭಿಸಬೇಕೆಂದು ಹೇಳಿದಾಗಲೂ ಮುರಿಗೆಯ್ಯ ಸಾಕ್ಷಿಯಾಗಿದ್ದ. ಮದರಾಸಿಗೆ ಹಿಂದಿರುಗಿದ ಕೂಡಲೆ ಈ ವಿಷಯ ಮಹಾದೇವಯ್ಯನಿಗೆ ತಿಳಿಸಿ, ಪಬ್ಲಿಸಿಟಿ ಹೊಡೆದು ಕೊಳ್ಳುವುದಕ್ಕೆ ಪ್ರಯತ್ನಿಸಬೇಕೆಂದು ಸೂಚಿಸಿದ.

'ಆಲಸ್ಯಂ ಅಮೃತಂ ವಿಷಂ' ಎಂಬುದನ್ನು ಚೆನ್ನಾಗಿ ತಿಳಿದುಕೊಂಡಿದ್ದ ಮಹಾದೇವಯ್ಯ ಕಾಲಯಾಪನೆ ಮಾಡಲಿಲ್ಲ. ಸರೋಜನ ನಾಲ್ಕು ಒಳ್ಳೆಯ ಚಿತ್ರಗಳು, ಅವುಗಳ ಜತೆಗೆ ಭಾಗ್ಯಮ್ಮ, ಶಿವಾನಂದ, ಶಾಮಲಾ ಬಾಯಿ, ಇವರ ಒಂದೊಂದು ಚಿತ್ರ, ಡೈರೆಕ್ಟರು, ಸಾಹುಕಾರರ ಒಂದೊಂದು ಚಿತ್ರ ಸೇರಿಸಿ 'ಶ್ರೀರಾಮ ಪಟ್ಟಾಭಿಷೇಕ' ನಿರ್ಮಾಣದ ವಿಷಯ ಲೇಖನ ಬರೆದು 'ಚಿತ್ರ ಪ್ರಗತಿ' ಗೆ ಕಳಿಸಿ ಕೊಟ್ಟ. ಅವನ ಲೇಖನ ಮರುವಾರವೇ ಪ್ರಕಟ ವಾಗಿ 'ಶ್ರೀಶೈಲ ಪಿಕ್ಚರ್ಸ್' ಕಛೇರಿಗೆ ಕೆಲವು ಪ್ರತಿಗಳನ್ನು ಅಂಚೆಯಲ್ಲಿ ತಂದಿತು.

ಲೇಖನದಲ್ಲಿ ಮಹಾದೇವಯ್ಯ ತಮ್ಮ ಹೆಸರನ್ನೂ ಸೂಚಿಸದಿದ್ದದನ್ನು ಸುದರ್ಶನರು ಕಾಣದಿರಲಿಲ್ಲ. ಆದರದು ಮಹತ್ವದ ವಿಷಯವಲ್ಲವೆಂದು ಉದಾಸೀನ ಮಾಡಿದರು.

ಮಹಾದೇವಯ್ಯನ ಲೇಖನ ಅವನಿಗೆ ಭಾಗ್ಯಮ್ಮ ಶಿವಾನಂದ, ಭೂಪೆನ್ ಬಾಬುಯವರ ವಿಶ್ವಾಸ ದೊರಕಿಸಿಕೊಟ್ಟಿತು. ಬಾಬುಗಳು ಆಗಾಗ್ಗೆ ಮಹಾದೇವಯ್ಯನನ್ನು ತಮ್ಮ ರೂಮಿಗೆ ಆಹ್ವಾನಿಸಿ ತಿಂಡಿ ತೀರ್ಥ ಕೊಡಿಸುತ್ತಿದ್ದರು; ತಮ್ಮ ಜತೆಯಲ್ಲಿ ಸಿನೀಮಾ ನಾಟಕಗಳಿಗೆ ಕರೆದುಕೊಂಡು ಹೋಗುತ್ತಿದ್ದರು.

ಭಾಗ್ಯಮ್ಮ ಒಂದು ಒಳ್ಳೆಯ ಮಾತು ಆಡಿದುದೇ ತಡ, ಮಹಾದೇವಯ್ಯ ಅವಳ ದಾಸಾನುದಾಸನಾಗಿಬಿಟ್ಟ. ಸೇವಕವೃತ್ತಿ ಮಾಡಲು ಹಾತೊರೆ ಯುತ್ತಿದ್ದ ಮಹಾದೇವಯ್ಯನ ಕೈಯಲ್ಲಿ ಭಾಗ್ಯಮ್ಮ ಚೆನ್ನಾಗಿ ಕೈಂಕರ್ಯ ಸ್ವೀಕರಿಸಲಾರಂಭಿಸಿದಳು. ಭಾಗ್ಯಮ್ಮನ ಪೇಟೆಯ ಕೆಲಸವನ್ನು ಮಹಾ

ದೇವಯ್ಯ ಮಾಡಿಕೊಡುತ್ತಿದ್ದುದಲ್ಲದೆ, ಅವಳು ಕರೆದಾಗ ಜತೆಯಲ್ಲಿ ಬುಟ್ಟಿ ಹೊತ್ತುಕೊಂಡು ಹೋಗುತ್ತಿದ್ದ.

ಭಾಗ್ಯಮ್ಮನ ವಿಶ್ವಾಸ ಬಲಪಡಿಸಿಕೊಳ್ಳುವುದಕ್ಕೆ ಮಹಾದೇವಯ್ಯ ಅವಕಾಶ ಕಾಯುತ್ತಿದ್ದ. ಅಡಿಗೆಯ ರೇವಣ್ಣನನ್ನು ಸಮಾನಸ್ಕಂದನಂತೆ, ಹಿರಿಯನಂತೆ ಕಾಣುವುದಕ್ಕೂ ಮಹಾದೇವಯ್ಯ ಹಿಂದೆಮುಂದೆ ನೋಡಲಿಲ್ಲ.

ಮಹಾದೇವಯ್ಯ ಕಾಯುತ್ತಿದ್ದ ಅವಕಾಶ ದೊರೆಯಲು ತಡವಾಗಲಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ಭಾಗ್ಯಮ್ಮನ ತಲೆಯಲ್ಲಿ ಒಂದು ದುಂಬಿ ಝೇಂಕರಿಸಿತು. ಚಿತ್ರದಲ್ಲಿ ತಾನೇಕೆ ಒಂದು ಹಾಡು ಹಾಡಬಾರದು ಎಂದವಳು ವಿಚಾರಮಾಡಿದಳು, ತನ್ನ ವಿಚಾರವನ್ನು ಮಹಾದೇವಯ್ಯನ ಮುಂದಿಟ್ಟಳು ಮಹಾದೇವಯ್ಯ ಕೂಡಲೆ ಡೈರೆಕ್ಟರವರನ್ನು ಕಂಡು, ಅವರನ್ನು ಪುಸಲಾಯಿಸಿ ಒಪ್ಪಿಗೆ ದೊರಕಿಸಿಕೊಂಡೇ ಬಂದ.

ಭಾಗ್ಯಮ್ಮನ ಕೈಯಲ್ಲಿ ಹಾಡು ಹೇಳಿಸುವ ವಿಚಾರ ಭೂಪೇ಼ ಬಾಬುಗಳೇ ಪ್ರಸ್ತಾಪ ಮಾಡಿದಾಗ ಸುದರ್ಶನರೂ, ಸತ್ಯನಾಥನ್ ಅವರೂ 'ಸಾಧ್ಯವಿಲ್ಲ' ವೆಂದು ಖಡಾಖಂಡಿತವಾಗಿ ಹೇಳಿಬಿಟ್ಟರು. ಅವರ ಅಭಿಪ್ರಾಯಕ್ಕೆ ಮತ್ತಷ್ಟು ಬಣ್ಣಕೊಟ್ಟು ಮಹಾದೇವಯ್ಯ ಭಾಗ್ಯಮ್ಮನಿಗೆ ತಿಳಿಸಿ ಅವಳಿಗೂ ಸುದರ್ಶನ, ಸತ್ಯನಾಥನ್‌ರಿಗೂ ವಿರಸ ಹುಟ್ಟುವುದಕ್ಕೆ ಅಸ್ತಿಭಾರ ಹಾಕಿದ.

ಚಿತ್ರದಲ್ಲಿ ತಾನು ಹಾಡಲೇಬೇಕೆಂದು ಭಾಗ್ಯಮ್ಮನೂ ಹಟತೊಟ್ಟಳು. ಅವಳ ಪಕ್ಷ ಡೈರೆಕ್ಟರು, ಮಹಾದೇವಯ್ಯ, ಮುರಿಗೆಯ್ಯ ವಹಿಸಿದ್ದರು. ಅವಳ ಮಾತಿಗೆ ವಿರುದ್ಧವಾಗಿ ಹೋಗುವಷ್ಟು ಧೈರ್ಯ ಚಿನ್ನಪ್ಪನಿಗಿರಲಿಲ್ಲ. ಅವನೂ 'ಮೂಕ ಸಮ್ಮತಿ' ಕೊಟ್ಟಂತೆಯೇ ಆಗಿತ್ತು. ಸುದರ್ಶನರ ಮಾತಿಗೆ ಪ್ರತಿ ಹೇಳದಿದ್ದ ಶಿವಾನಂದನೂ ಅವಳ ಪಕ್ಷ ಸೇರುವುದಕ್ಕೆ ಸೆಟ್ಟಿನ ಮೇಲೆ ನಡೆದ ಒಂದು ಪ್ರಕರಣವೇ ಕಾರಣವಾಯಿತು.

ಭರತನ ದೃಶ್ಯದ ಷೂಟಿಂಗ್ ನಡೆಯುತ್ತಿತ್ತು. ಮೈಕ್ ಒಡೆದು ಹೋಗುವಂತೆ ಶಿವಾನಂದ ಚೀರಿ ಮಾತನಾಡುತ್ತಿದ್ದ. ಧ್ವನಿಯನ್ನು ತಗ್ಗಿಸದಿದ್ದರೆ ರಿಕಾರ್ಡಿಂಗ್ ಸಾಧ್ಯವಿಲ್ಲವೆಂದು ಸುಬ್ಬಯ್ಯರ್ ಹೇಳಿದರು. ಶಿವಾನಂದನಿಗೆ ಡೈರೆಕ್ಟರು ಸೂಚನೆಯಿತ್ತರು. ಶಿವಾನಂದ ಪ್ರಯತ್ನಿಸಿದರೂ ಧ್ವನಿ ಹತೋಟಿಗೆ ಬರಲಿಲ್ಲ. ಒಂದು ಸಣ್ಣ ಸಂಭಾಷಣೆಯ ಐದು ಟೇಕ್ (Take) ಗಳಾದವು. ಭೂಪೇನ್ ಬಾಬು ಬೇಸರಗೊಂಡು

"ನಿಮ್ಮನ್ನು ಕಟ್ಟಿಕೊಂಡು ತಲೆಚಚ್ಚಿಕೊಳ್ಳಬೇಕು" ಎಂದರು.

ಶಿವಾನಂದನ ಆತ್ಮಾಭಿಮಾನಕ್ಕೆ ಬಲವಾದ ಪೆಟ್ಟು ಬಿದ್ದಂತಾಯಿತು. ತಾನು ಚಿತ್ರದ ಸ್ಟಾರ್–ಶ್ರೀಮಂತ–ವಿದ್ಯಾವಂತ– ಎಲ್ಲಕ್ಕಿಂತ ಮುಖ್ಯವಾಗಿ ಭೂಪೆನ್ ಬಾಬುವನ್ನು ಈ ಚಿತ್ರಕ್ಕೆ ಕರೆತಂದವನು–ತನ್ನನ್ನೇ ಹೀಗೆ ಹೀಯಾಳಿಸಿ ಮಾತನಾಡುವುದೇ? ಶಿವಾನಂದ ಮುಖ ಕೆಂಪಗೆ ಮಾಡಿ ಕೊಂಡು

"ಏನು, ಯಾರನ್ನು ಕಟ್ಟಿಕೊಂಡು ತಲೆ ಚಚ್ಚಿಕೊಳ್ಳಬೇಕು?"

"ನಿಮ್ಮನ್ನು–ಇಪ್ಪತ್ತು ಅಡಿಯ ಒಂದು ಷಾಟಿಗೆ ನಾವು ಗಂಟೆಗಟ್ಟಳೆ ವ್ಯಯಮಾಡುತ್ತ ಬಂದರೆ ಉದ್ಧಾರವಾದ ಹಾಗಾಯಿತು."

"ನಿಮಗೇನು ಬರುತ್ತದೆಂದು ಈ ಮಾತಾಡುವಿರಿ?"

"ನಾನು ಚಿತ್ರದ ಡೈರೆಕ್ಟರೆಂಬುದನ್ನು ತಿಳಿದು ಮಾತನಾಡಿ ಶಿವಾನಂದರೇ."

"ನಾನು ಚಿತ್ರದ ಸ್ಟಾರ್ ಯೆನ್ನುವುದನ್ನು ತಿಳಿದು ನೀವೂ ಮಾತನಾಡಿ."

"ನೀವೂ ಸ್ಟಾರೇ, ಆ ಲೈಟ್ ಹುಡುಗನೂ ಸ್ಟಾರೇ!"

"Shut up!"

"You Shut up!"

ಇಬ್ಬರಿಗೂ ಕೈಕೈ ಕೂಡಿಬಿಟ್ಟಿತು. ಸುದರ್ಶನರು, ಚಿನ್ನಪ್ಪ, ಸಾಹು ಕಾರರು,ಮಹಾದೇವಯ್ಯ ಮಧ್ಯೆ ಬಂದು ಇಬ್ಬರನ್ನೂ ಬಿಡಿಸಿದರು.

ಡೈರೆಕ್ಟರು ಬುಸುಗುಟ್ಟುತ್ತಾ

"ಇವತ್ತಿನ ಷೂಟಿಂಗ್ ನಿಲ್ಲಿಸಿ. ನನಗೆ ಮೂಡ್ (Mood) ಇಲ್ಲ"

ಎಂದು ಹೊರಟೇಬಿಟ್ಟರು. ಶಿವಾನಂದನನ್ನು ಸಂತೈಸಿ ಸುದರ್ಶನರು ಕಂಪೆನಿಯ ಮನೆಗೆ ಕರೆತಂದರು.

ಶಿವಾನಂದನ ಕೋಪ ಉಪಶಮನವಾಗಿರಲಿಲ್ಲ. ಡೈರೆಕ್ಟರನ್ನು ವಾಚಾಮಗೋಚರ ಬೈದ.

"ತಿನ್ನುವುದಕ್ಕೆ ಹಿಟ್ಟಿಲ್ಲದೆ ಅಲೆಯುತ್ತಿದ್ದವನನ್ನು ಕರೆತಂದು ಡೈರೆಕ್ಟರ್ ಮಾಡಿದ್ದಕ್ಕೆ ಇದೇ ನನಗೆ ಸಿಕ್ಕಿದ ಸನ್ಮಾನ."

"ಶಿವಾನಂದರೇ ನೀವು ಸಮಾಧಾನವಾಗಿ ಕೇಳುವುದಾದರೆ ನಾನೊಂದು ಮಾತು ಹೇಳಬೇಕಾಗಿದೆ."

"ಹೇಳಿ ಸಾರ್."

"ಸೆಟ್ಟಿನ ಮೇಲೆ ಡೈರೆಕ್ಟರು ಸರ್ವಾಧಿಕಾರಿ. ಅವರು ಹೇಳಿದಂತೆ ಕೇಳಬೇಕಾದುದು ನಮ್ಮ ಕರ್ತವ್ಯ."

"ನಾನು ಕೇಳುವುದಿಲ್ಲ ಎಂದು ಹೇಳಲಿಲ್ಲವಲ್ಲಾ. ಅಷ್ಟು ಜನಗಳ ಎದುರಿನಲ್ಲಿ ಅವನು 'ಇವನನ್ನು ಕಟ್ಟಿಕೊಂಡು ತಲೆ ಚಚ್ಚಿಕೊಳ್ಳಬೇಕು' ಎಂದು ಹೇಳಬಹುದೋ ?"

"ಹೇಳಬಾರದು. ಅವರಿಗೂ ಬೇಸರವಾಗಿತ್ತು, ಆಯಾಸವಾಗಿತ್ತು. ಮಾತು ಉಭಾಯಿಸಿ ಬಂದುಬಿಟ್ಟಿತು. ಅವರು ಹೇಳಿದ್ದು ತಪ್ಪಾದರೂ ನೀವು ಹಾಗೆ ಪ್ರತಿಭಟಿಸಿದ್ದು ಶುದ್ಧ ತಪ್ಪು. ಎಷ್ಟಾದರೂ ನಮ್ಮ ಡೈರೆಕ್ಟರು. ಅವರ ತಪ್ಪನ್ನು ನಾವೇ ನುಂಗಿಕೊಳ್ಳದಿದ್ದರೆ ಹೊರಗಿನವರು ಸಹಿಸಿಕೊಳ್ಳುತ್ತಾರೆಯೆ ? ಡೈರೆಕ್ಟರಿಗೆ ಅಪಮಾನಮಾಡಿ ನೀವು ಕಂಪೆನಿಯ ಗೌರವವನ್ನೇ ಹಾಳು ಮಾಡಿದಿರಿ."

"ನೀವೆಲ್ಲಾ ಕಂಪೆನಿಯ ಗೌರವ ಕಾಯುತ್ತಿದ್ದೀರಲ್ಲಾ."

"ಕಾಯುತ್ತಿದ್ದೇವೆಯೋ ಇಲ್ಲವೋ ನಿಮಗೆ ಹೇಗೆ ಗೊತ್ತಾಗಬೇಕು."

"ಸಾಕು ಸುಮ್ಮನಿರಿ ಸಾರ್. ಡೈರೆಕ್ಟರ ಜತೆ ಸೇರಿಕೊಂಡು ನನ್ನನ್ನೇಕೆ ತಪ್ಪಿತಸ್ಥನನ್ನಾಗಿ ಮಾಡುತ್ತಿರುವಿರಿ."

"ಡೈರೆಕ್ಟರ್ ಜತೆ ಸೇರಿಕೊಳ್ಳುವುದರಲ್ಲಿ ನನಗೇನೂ ಲಾಭವಿಲ್ಲ ಶಿವಾನಂದರೇ."

"ಲಾಭವಿದೆಯೋ ಇಲ್ಲವೋ ನನಗೇನು ಗೊತ್ತು."

"ನನ್ನನ್ನು ಬಲ್ಲ ನೀವು ಈ ಮಾತು ಆಡಬಾರದು."

"ನೀವು ಉಪದೇಶ ಕೊಡುವುದಕ್ಕೆ ಬರದಿದ್ದರೆ ನಾನು ಯಾವ ಮಾತನ್ನೂ ಆಡುತ್ತಿರಲಿಲ್ಲ."

"ಕ್ಷಮಿಸಿ – ನೀವೂ ನಾನೂ ಸ್ನೇಹಿತರೆಂದು ತಿಳಿದುಕೊಂಡು ಸ್ವಾತಂತ್ರ್ಯ ವಹಿಸಿದೆ. ಇನ್ನು ಮೇಲೆ ನಿಮ್ಮ ಮಾತಿಗೆ ನಾನು ಬರುವುದಿಲ್ಲ.

ಎಂದು ಅಲ್ಲಿ ನಿಲ್ಲದೆ ಹೊರಟು ಹೋದರು.

ಶಿವಾನಂದನ ಮನಸ್ಸಿನ ಮೇಲೆ ರುದ್ರನಾಟ್ಯವಾಡುವುದಕ್ಕೆ ಮಹಾದೇವಯ್ಯನಿಗೆ ಒಳ್ಳೆಯ ಅವಕಾಶ ಸಿಕ್ಕಿದಂತಾಯಿತು.

"ನೀವು ಎಳ್ಳೆಯಾಗೋದು ನೋಡಿ ಅವನಿಗೆ ಸಹನೆಯಿಲ್ಲ ಶಿವಾನಂದರೇ. ಆ ಸ್ವಾರ್ಥಿಯನ್ನು ಹಿತೈಷಿಯೆಂದು ತಿಳಿದುಕೊಂಡದ್ದೇ ನಿಮ್ಮ ತಪ್ಪು"

ಎಂದು ಶಿವಾನಂದನ ಕಿವಿಯಲ್ಲಿ ಊದಿದ.

ಅಂದೇ ಸಂಜೆ ಭೂಪೆನ್ ಬಾಬುಗಳನ್ನು ಹುಡುಕಿಕೊಂಡು ಮಹಾದೇವಯ್ಯ 'ಎಂಬಾಸಿ ಹೊಟೇಲಿ' ಗೆ ಹೋದ. ಬಾಬುಗಳು ಒಬ್ಬರೇ

ರೂಮಿನಲ್ಲಿದ್ದರು. ಅವರ ಚಿತ್ತವೂ ವಿಹ್ವಲಗೊಂಡಿತ್ತು. ಮಹಾದೇವಯ್ಯ ಬರುತ್ತಲೇ ಶಿಷ್ಟಾಚಾರಕ್ಕನುಗುಣವಾಗಿ ಸ್ವಾಗತ ಬಯಸಿದರು.

"ಬಾಬುಗಳ ಮನಸ್ಸಿಗೆ ತಂಬ ಬೇಸರವಾಗಿರಬೇಕು."

"ಹೋಗಲಿ ಬಿಡಿ ಆ ಮಾತೇಕೆ?"

"ಹಾಗನ್ನಬಾರದು ಸ್ವಾಮಿ. ಇಂಥ ವಿಷಯಗಳ ಬುಡ ಶೋಧಿಸಿ ನೋಡಿ ನಿಜಸ್ಥಿತಿ ತಿಳಿದುಕೊಳ್ಳಬೇಕು."

"ಒಪ್ಪಿಕೊಂಡದಾಯಿತು. ಕೆಲಸ ಅರ್ಧಕ್ಕೇ ಬಿಟ್ಟು ಹೋದರೆ ಎಲ್ಲಾ ತಪ್ಪನ್ನೂ ನನ್ನ ಮೇಲೆ ಹೊರೆಸುತ್ತಾರೆ. ನಿಮ್ಮ ಪಿಕ್ಚರ್ ಮುಗಿಸಿಕೊಟ್ಟು ನಾನು ಕಲ್ಕತ್ತೆಗೆ ಹೊರಟು ಹೋಗುತ್ತೇನೆ. ಶಿವಾನಂದರಲ್ಲಿ ನಾನು ಸೋದರ ವಾತ್ಸಲ್ಯವನ್ನಿಟ್ಟುಕೊಂಡಿದ್ದೆ. ಅವರೇ ಹೀಗಾದಮೇಲೆ ಉಳಿದವರು ಸುಮ್ಮ ನಿರುತ್ತಾರೆಯೇ? ಶಿವಾನಂದರು ಸೆಟ್ಟಿನ ಮೇಲೆ ನನ್ನ ಪ್ರತಿಭಟಿಸಿ ನಿಂತ ಮೇಲೆ ನನ್ನ ಗೌರವ ಏನು ಉಳಿಯಿತು ಹೇಳಿ?"

"ಶಿವಾನಂದರು ದುಡುಕು ಬಾಬುಗಳೇ, ಇನ್ನೂ ಹುಡುಗು. ಆದರೆ ಅವರ ಮನಸ್ಸು ಒಳ್ಳೆಯದು. ನಿಮ್ಮ ವಿಷಯದಲ್ಲಿ ಅವರಿಗೆ ತುಂಬ ವಿಶ್ವಾಸ, ಗೌರವವಿದೆ. ಏಸಗಳಿಗೆ–ತಪ್ಪುಮಾಡಿಬಿಟ್ಟರು ಈಗ ಪಶ್ಚಾತ್ತಾಪ ಪಡುತ್ತಿದ್ದಾರೆ. ಕಂಡವರ ಮಾತು ಕೇಳಿದರೆ ಎಂಥಾ ಅನರ್ಥವಾಗುತ್ತದೆ ಎನ್ನುವುದು ಈಗ ಅವರಿಗೆ ತಿಳಿದ ಹಾಗಾಯಿತು."

"ಕಂಡವರ ಮಾತು! ಏನು ಹೇಳುತ್ತಿರುವಿರಿ ಮಹಾದೇವಯ್ಯ."

"ಹೌದು ಸಾರ್. ನಿಂತರೆ ಕುಳಿತರೆ ದುರ್ಬೋಧನೆ ಮಾಡುತ್ತಿದ್ದರೆ ಎಳೆಯ ಮನಸ್ಸು ಏನಾಗತ್ತೆ ಸಾರ್."

"ಆ ಕೆಲಸ ಮಾಡುತ್ತಿರುವವರು ಯಾರು?"

"ಇನ್ನು ಯಾರು? ಮಹಾ ಕವಿಗಳು ಸುದರ್ಶನರು."

"ಸುದರ್ಶನರು. !!"

"ಹೌದು ಸಾರ್. ನಿಮಗೆ ಡೈರೆಕ್ಷನ್ನೇ ಬರೋದಿಲ್ಲಾಂತ ಪ್ರಚಾರ ಮಾಡಿದವರೂ ಅವರೇ. ಸಾಹುಕಾರರ ಮನಸ್ಸು ಕೆಡಿಸಿ ನಿಮ್ಮನ್ನು ಎತ್ತಂಗಡಿ ಮಾಡಿ ಬೇರೆ ಡೈರೆಕ್ಟರ್ ತರಬೇಕೆಂದು ಪ್ರಯತ್ನಪಟ್ಟವರೂ ಅವರೇ."

"ಬೇರೆ ಡೈರೆಕ್ಟರನ್ನು ಇಟ್ಟುಕೊಳ್ಳಬೇಕೆಂದು ರಾಮಾನುಜಂ ಹೇಳಿದ ರಂತೆ!"

"ಇದನ್ನೆಲ್ಲಾ ಹೇಳುವುದಕ್ಕೆ ಅವರೇಕೆ ಬರುತ್ತಾರೆ ಸಾರ್. ಸ್ಟೂಡಿಯೋ ಬಾಡಿಗೆ ನಾವು ಸರಿಯಾಗಿ ಕೊಡುವಾಗ ಅವರು ನಮ್ಮ ವ್ಯವ

ಹಾರಕ್ಕೇಕೆ ಕೈಹಾಕುತ್ತಾರೆ."

"ಬೇರೆ ಡೈರೆಕ್ಟರನ್ನು ಗೊತ್ತುಮಾಡಿಕೊಂಡರೆ ಸುದರ್ಶನರಿಗೆ ಬರುತ್ತಿದ್ದ ಲಾಭವೇನು ?"

"ತಾವು ಅಸೋಸಿಯೇಟ್ ಡೈರೆಕ್ಟರ್ (Associate Director) ಆಗಬಹುದು."

"ಹಾಗೇನು ?"

"ಈ ಚಾಣಕ್ಯನೀತಿ ತಿಳಿದುಕೊಂಡು ಮುರಿಗೆಯ್ಯನವರು ಭೇದಿಸ ದಿದ್ದರೆ ಎಂದೋ ನಿಮ್ಮ ಎತ್ತಂಗಡಿ ಮಾಡಿಬಿಡುತ್ತಿದ್ದರು."

"ಚಿನ್ನಪ್ಪ ಯಾರಕಡೆಗೆ ?"

"ಯಾರ ಕಡೆಗೂ ಅಲ್ಲ. ಅಡ್ಡಗೋಡೆಯ ಮೇಲೆ ದೀಪವಿಟ್ಟ ಹಾಗೆ ಅವರ ನ್ಯಾಯ."

"ಸುದರ್ಶನರೂ ಹೀಗಾದರೇ :"

"ಆದರೆ ಆಗಲಿ ನೀವು ಹೆದರಬೇಡಿ ಸಾರ್. ಮುರಿಗೆಯ್ಯನವರ ಬೆಂಬಲವಿರೋವಾಗ ನಿಮ್ಮನ್ನು ಅಳ್ಳಾಡಿಸುವುದಕ್ಕೆ ಯಾರ ಕೈಯಲ್ಲಿಯೂ ಸಾಧ್ಯವಾಗುವುದಿಲ್ಲ. ಭಾಗ್ಯಮ್ಮನ್ನ ಒಳ್ಳೆಯವಳನ್ನಾಗಿ ಇಟ್ಟುಕೊಂಡಿದ್ದರೆ ಆಯಿತು – ಸಾಹುಕಾರರು ನಿಮ್ಮ ಜೇಬಿನಲ್ಲಿದ್ದಂತೆಯೇ."

"ಭಾಗ್ಯಮ್ಮ ನನ್ನ ವಿಷಯದಲ್ಲಿ ತುಂಬ ಗೌರವವಿಟ್ಟುಕೊಂಡಿದ್ದಾರೆ."

"ಅದನ್ನು ಮತ್ತಷ್ಟು ಸ್ಥಿರಪಡಿಸುವುದಕ್ಕೆ ನಿಮಗೆ ಒಳ್ಳೆಯ ಅವಕಾಶ ಸಿಕ್ಕಿದೆ."

"ಏನದು ?"

"ಅವರು ಚಿತ್ರದಲ್ಲಿ ಒಂದು ಹಾಡು ಹೇಳಬೇಕಂತೆ. ಸುದರ್ಶನರೂ, ಸತ್ಯನಾಥನ್ ಬಲವಾಗಿ ವಿರೋಧಿಸಿದ್ದಾರೆ. ನೀವು ಹಾಡಿಗೆ ಅವಕಾಶ ಕೊಟ್ಟರೆ ಭಾಗ್ಯಮ್ಮನಿಗೆ ತನ್ನ ಹಿತೈಷಿಗಳು ಯಾರೆಂದು ಚೆನ್ನಾಗಿ ಗೊತ್ತಾಗುತ್ತದೆ."

"ಮಂಥರೇಗೆ ಹಾಡು ಹಾಕಿದರೆ ಪಿಕ್ಚರ್ ಕುಲಗೆಟ್ಟು ಹೋಗುತ್ತದಲ್ಲ ಮಹಾದೇವಯ್ಯ."

"ಈಗಂತೂ ಹಾಡುಹಾಕಿ ರಿಕಾರ್ಡುಮಾಡಿಸಿ ಸಾರ್, ನಾಳೆ ಫೈನಲ್ ಎಡಿಟಿಂಗ್, ಕಟ್ಟಿಂಗ್ (Editing, Cutting) ಆಗುವಾಗ ಕತ್ತರಿಸಿ ಹಾಕಿದರೆ ಆಯಿತು."

ಭೂಪೇನ್ ಬಾಬುಗಳ ಮನಸ್ಸಿನ ಮೇಲೆ ಮಹಾದೇವಯ್ಯನ ಸಲಹೆ ಒಳ್ಳೆಯ ಪ್ರಭಾವ ಬೀರಿತು. 'ತಾವು ಉಳಿದುಕೊಂಡರಲ್ಲವೇ ಮುಂದಿನ ಮಾತು' ಎಂದು ವಿಚಾರಮಾಡಿಕೊಂಡು ಮಹಾದೇವಯ್ಯನನ್ನು ಹೃತ್ಪೂರ್ವಕ ವಾಗಿ ಅಭಿವಂದಿಸಿದರು.

ಚಿತ್ರದಲ್ಲಿ ಹಾಡು ಹಾಕಿಸುವುದಕ್ಕೆ ಡೈರೆಕ್ಟರ್ ಒಪ್ಪಿಗೆ ದೊರಕಿಸಿ ಕೊಂಡು ಬಂದಿರುವ ವಿಷಯ ಮಹಾದೇವಯ್ಯ ಭಾಗ್ಯಮ್ಮನಿಗೆ ಹೇಳಿದಾಗ ಅವಳ ಸಂತೋಷಕ್ಕೆ ಇತಿಮಿತಿಯೇ ಇರಲಿಲ್ಲ.

"ಏನೋಂತಿದ್ದೆ, ನೀನು ಬಲೇ ಕಿಲಾಡಿಕಣೋ ಮಾದೇವ. ಕಲ್ಲುಗುದ್ದಿ ನೀರು ತರಿಸಬಲ್ಲೆ."

"ಎಲ್ಲಾ ನಿಮ್ಮ ಆಶೀರ್ವಾದ."

"ನನಗೆ ಹಾಡುಬೇಡ ಎಂತಾ ಡೈರೆಕ್ಟರೇ ಹೇಳುತಿದ್ದರು."

"ಅವರನ್ನು ಬೇಡಿ ಒಪ್ಪಿಸಬೇಕಾಯಿತಮ್ಮ."

"ಸುದರ್ಶನರು ಏನನ್ನುತ್ತಾರೊ?"

"ಡೈರೆಕ್ಟರೇ ಒಪ್ಪಿಕೊಂಡ ಮೇಲೆ ಅವರು ಏನಮ್ಮ ಹೇಳ್ತಾರೆ."

"ತರಲೆ ಆಗದ ಹಾಗೆ ನೋಡಿಕೊಳ್ಳಪ್ಪ – ಎಲ್ಲಾರೂ ಸೇರಿ ನನ್ನ ತಲೆಮೇಲೆ ಗೂಬೆ ಹೊರಿಸಿಬಿಟ್ಟಾರು."

"ನಿಮಗೆ ತೊಂದರೆಯಾಗುವ ಕೆಲಸ ನಾನು ಮಾಡ್ತೇನೆಯೇ? ನೀವು ನನ್ನದೊಂದು ಕೆಲಸ ಮಾಡಿಕೊಡಬೇಕಮ್ಮ."

"ಏನು ಹೇಳು."

"ನಮ್ಮ ಪಿಕ್ಚರ್ ಪಬ್ಲಿಸಿಟಿ ಆರಂಭವಾಗಬೇಕು. ಕೊಡಲೆ ಷುರುಮಾಡಿ ಎಂತಾ ಸೇಠ್ ಹೇಳಿದ್ದಾರಂತೆ. ಅಣ್ಣಾವರಿಗೆ ಹೇಳಿ ಪಬ್ಲಿಸಿಟಿ ನನಗೆ ಒಪ್ಪಿಸಿದರೆ............"

"ನಿನಗೇ ಒಪ್ಪಿಸ್ತಾರೆ ಅದಕ್ಕೇಕೆ ಯೋಚನೆ"

"ಈ ಸುದರ್ಶನ ಒಬ್ಬ ನನ್ನ ದಾಯಾದಿ ಹುಟ್ಟಿಕೊಂಡಿದ್ದಾನಲ್ಲಮ್ಮ."

"ಇನ್ನು ಅವರ ಆಟ ಏನೂ ನಡಯದ ಹಾಗೆ ನಾನು ನೋಡಿಕೊಳ್ಳು ತ್ತೇನೆ ಸುಮ್ಮನಿರು."

ಎಂದು ಧೈರ್ಯ ಹೇಳಿದಳು.

೨೭

ಭೂಪೆನ್‌ಬಾಬುಗಳಿಗೂ ಶಿವಾನಂದನಿಗೂ ರಾಜಿಮಾಡಿಸುವ ಜವಾಬ್ದಾರಿ ಮಹಾದೇವಯ್ಯ ಹೊತ್ತುಕೊಂಡ.

ಕೋಪದ ಕೈಯಲ್ಲಿ ಬುದ್ಧಿಕೊಟ್ಟು ಡೈರೆಕ್ಟರನ್ನು ಸೆಟ್ಟಿನ ಮೇಲೆ ಪ್ರತಿಭಟಿಸಿದುದು ತನ್ನ ತಪ್ಪೆಂದು ಶಿವಾನಂದ ತಿಳಿಯಲು ತಡವಾಗಲಿಲ್ಲ. ಆದರೆ ತಾನೇ ಮುಂದುವರಿದು ಹೋಗಿ ತಪ್ಪನ್ನು ಒಪ್ಪಿಕೊಳ್ಳುವುದಕ್ಕೆ ಅಭಿಮಾನ ಬಾಧಿಸುತ್ತಿತ್ತು. ಮಹಾದೇವಯ್ಯ ರಾಜಿ ಸಲಹೆಯನ್ನು ಕೊಟ್ಟಾಗ ಶಿವಾನಂದ ಮರುಮಾತಾಡದೆ ಒಪ್ಪಿಕೊಂಡ. ಡೈರೆಕ್ಟರು, ಶಿವಾನಂದ ಎಂದಿನಂತೆ 'ಭಾಯ್ ಭಾಯ್' ಗಳಾದರು.

ಮುಂಧರೆ ಪಾತ್ರಕ್ಕೆ ಹಳೆಯ ನಾಟಕದ ಮಟ್ಟಿನಲ್ಲಿ ಮಹಾದೇವಯ್ಯ ಒಂದು ಹಾಡನ್ನೂ ಸಿದ್ಧಗೊಳಿಸಿದ. ಅದಕ್ಕೆ ಸಂಗೀತ ನಿರ್ದೇಶನ ಮಾಡಬೇಕೆಂದು ಸಾಹುಕಾರರಿಂದ ಸತ್ಯನಾಥನ್ ಅವರಿಗೆ ' ಹುಕುಂ ' ಬಂತು. ಸತ್ಯನಾಥನ್ ಒಪ್ಪಿಕೊಳ್ಳದೆ ವಿಧಿಯಿರಲಿಲ್ಲ. ಈ ವಿಷಯ ಸುದರ್ಶನರಲ್ಲಿ ಸತ್ಯನಾಥನ್ ಪ್ರಸ್ತಾಪಿಸಿದಾಗ 'ಚಿತ್ರ ನಮ್ಮ ಕೈ ಬಿಟ್ಟು ಹೋಯಿತು. ಅವರು ಹೇಗೆ ಹೇಳುತ್ತಾರೆ ಹಾಗೆ ಮಾಡಿಬಿಡಿ. ಮುಖ್ಯ ನಮ್ಮ ಗ್ರಹಬಲ ಚೆನ್ನಾಗಿಲ್ಲ.' ಎಂದುಬಿಟ್ಟರು.

ಸತ್ಯನಾಥನ್ ಭಾಗ್ಯಮ್ಮನಿಗೆ ರಿಹರ್ಸಲ್ ಕೊಟ್ಟು ಹಾಡನ್ನು ರಿಕಾರ್ಡಿಂಗಿಗೆ ಅಣಿಮಾಡಿದರು. ಸ್ವಯಂ ಡೈರೆಕ್ಟರೇ ರಿಕಾರ್ಡಿಂಗ್ ಪರಾಮರ್ಶಿಸಲು ದಯಮಾಡಿಸಿದರು. ಅವರ ಜತೆಗೆ ಮಹಾದೇವಯ್ಯ, ಶಿವಾನಂದ, ಮುರಿಗೆಯ್ಯ. ಸುದರ್ಶನರು ಮಾತ್ರ ತಾವು ಬರುವುದಿಲ್ಲವೆಂದು ಖಂಡಿತವಾಗಿ ನುಡಿದುಬಿಟ್ಟರು.

ಕಂಪೆನಿ ಎಲ್ಲರ ಕಣ್ಣಿಗೂ ಕಾಣುವಂತೆ ಇಬ್ಭಾಗವಾಯಿತು. ಮಹಾದೇವಯ್ಯ, ಮುರಿಗೆಯ್ಯ, ಭೂಪೆನ್ ಬಾಬು, ಶಿವಾನಂದ, ಭಾಗ್ಯಮ್ಮ ಒಂದು ಕಡೆ; ಸುದರ್ಶನರು, ಸತ್ಯನಾಥನ್. ವರದರಾಜಯ್ಯಂಗಾರ್ ಒಂದು ಕಡೆ. ಚಿನ್ನಪ್ಪ, ಸಾಹುಕಾರರು ಇಬ್ಬರಿಗೂ ಒಳ್ಳೆಯವರಾಗಿರಲು ಯತ್ನಿಸುತ್ತಿದ್ದರು. ಸುದರ್ಶನರ ರೂಮಿನಲ್ಲಿ ಸೇರುತ್ತಿದ್ದ ಗುಂಪು ಮಹಾದೇವಯ್ಯನ ರೂಮಿನಲ್ಲಿ ಸೇರುವುದಕ್ಕೆ ಆರಂಭವಾಯಿತು.

ಶಿವಾನಂದ ಭೂಪೆನ್ ಬಾಬುಗಳ ಜತೆ ಸುದರ್ಶನರ ಸಂಬಂಧ ಕೇವಲ ವ್ಯಾವಹಾರಿಕವಾಗುತ್ತ ಬಂತು. ಷೂಟಿಂಗ್ ಇಲ್ಲದ ದಿನ ಅಕಸ್ಮಾತ್ತಾಗಿ

ಭೂಪೆನ್ ಬಾಬು ಕಂಪೆನಿ ಮನೆಗೆ ಬಂದರೆ ಮಹಾದೇವಯ್ಯ, ಶಿವಾನಂದನನ್ನು ನೋಡಿಕೊಂಡು ಹೊರಟು ಹೋಗುತ್ತಿದ್ದರು. ಡೈರೆಕ್ಟರನ್ನು ನೋಡುವುದಕ್ಕೆ 'ಎಂಬಾಸಿ ಹೊಟೇಲಿ'ಗೆ ಹೋಗುವುದನ್ನೂ ಸುದರ್ಶನರು ನಿಲ್ಲಿಸಿಬಿಟ್ಟರು.

ಸುದರ್ಶನರ ಮೇಲೆ ವಿನಾಕಾರಣ ನಡೆದಿದ್ದ ಈ ವಿರೋಧ ಕಂಡು ಮರುಗಿದವಳು ಸರೋಜ. ಆದರವಳು ತಾಯಿಯನ್ನು ಪ್ರತಿಭಟಿಸಲು ಸಾಧ್ಯವಿರಲಿಲ್ಲ; ಸಾಹುಕಾರರಿಗೆ ಹೇಳಿದರೂ ಪ್ರಯೋಜನವಾಗುವುದಿಲ್ಲವೆಂದು ತಿಳಿದು ಸುಮ್ಮನಾಗಿದ್ದಳು.

ಸುದರ್ಶನರು ತಾವಾಗಿಯೇ ಕೆಲಸ ವಹಿಸಿಕೊಂಡು ದುಡಿಯುವುದನ್ನು ನಿಲ್ಲಿಸಿಬಿಟ್ಟರು. ರಿಹರ್ಸಲ್ ವೇಳೆಗೆ ಸರಿಯಾಗಿ ರಿಹರ್ಸಲ್ – ಷೂಟಿಂಗ್ ವೇಳೆಗೆ ಷೂಟಿಂಗಿಗೆ ಸಿದ್ಧರಾಗಿರುತ್ತಿದ್ದರು. ರಷ್ ನೋಡಲು ಯಾರಾದರೂ ಕರೆದರೆ ಹೋಗುತ್ತಿದ್ದರು.

ಡೈರೆಕ್ಟರು, ಮಹಾದೇವಯ್ಯ ಸ್ಟೂಡಿಯೋನಲ್ಲಿ ತಮ್ಮ ಪ್ರತಿಷ್ಠೆ ಬೆಳಸಲೆತ್ನಿಸಿದರು. ಒಂದು ದಿನ ಮಹಾದೇವಯ್ಯ ಕೊಟ್ಟ ತಪ್ಪು ಸಲಹೆಯನ್ನು ಸ್ಟೂಡಿಯೋ ಆರ್ಟ್ ಡೈರೆಕ್ಟರ್ ಛಾಯಾಪತಿ ನಿರಾಕರಿಸುತ್ತಾ

" ಇದನ್ನೆಲ್ಲಾ ನಮಗೆ ಬಂದು ಹೇಳುವುದಕ್ಕೆ ಇವರು ಯಾರು ? "

ಎಂದು ಕೇಳಿದರು. ಡೈರೆಕ್ಟರು ಮಹಾದೇವಯ್ಯನ ಗೌರವ ಉಳಿಸುವುದಕ್ಕೆ

" ಇವರು ನಮ್ಮ ಚಿತ್ರದ ಅಸಿಸ್ಟೆಂಟ್ ಡೈರೆಕ್ಟರ್ "

ಎಂದರು. ಅಂದಿನಿಂದ ಮಹಾದೇವಯ್ಯನಿಗೆ ಆ ನಾಮಕರಣ ಸ್ಥಿರವಾಯಿತು.

ಶ್ರೀಶೈಲ ಪಿಕ್ಚರ್ಸ್ ಕಂಪೆನಿಯಲ್ಲಿ ಮಹಾದೇವಯ್ಯನ ಸ್ಥಾನ ಅದ್ವಿತೀಯವಾಯಿತು. ಅವನು ಚಿತ್ರಗೀತಾ ಲೇಖಕ–ಪಬ್ಲಿಸಿಟಿ ಆಫೀಸರ್–ಅಸಿಸ್ಟೆಂಟ್ ಡೈರೆಕ್ಟರ್ ಆಗಿಬಿಟ್ಟ. ಚಿನ್ನಪ್ಪನಿಗೂ ಎದೆಹೊಡೆದುಕೊಳ್ಳಲಾರಂಭಿಸಿತು.

ಕಂಪೆನಿ ತೆಗೆದುಕೊಂಡ ಸ್ವರೂಪ, ಚಿತ್ರ ರೂಪುಗೊಳ್ಳುತ್ತಿದ್ದ ಬಗೆಯನ್ನು ಕಂಡು ಸುದರ್ಶನರ ಮನಸ್ಸು ಮಮ್ಮಲ ಮರುಗಿತು. ಈ ಚಿತ್ರದ ಹಣೆಯಬರಹವೂ ಕೊನೆಗೆ ಹೀಗಾಯಿತೆ? ಎಂದು ದುಃಖಪಟ್ಟರು. ಈ ವಾತಾವರಣ ಬಿಟ್ಟುಹೋದರೆ ಸಾಕೆಂದು ಅವರ ಮನಸ್ಸು ಹಾತೊರೆಯುತ್ತಿತ್ತು. ಆದರೆ ಕರ್ತವ್ಯ ಅವರನ್ನು ಬಿಗಿದು ಕಟ್ಟಿತ್ತು. ಮಹಾದೇವಯ್ಯ ಅಪಪ್ರಚಾರ ಮಾಡುವುದಕ್ಕೆ ತಾವೇ ಅನುಕೂಲ ಕಲ್ಪಿಸಿಕೊಟ್ಟಂತಾಗುವುದಲ್ಲಾ ಎಂದು ಹೆದರಿದರು.

ಒಂದು ದಿನ ಸುದರ್ಶನರು ಸ್ನಾನಗೃಹದಲ್ಲಿದ್ದರು. ಅಡಿಗೆಯ ಮನೆಯಿಂದ ಗಲಭೆಯ ಧ್ವನಿ ಕೇಳಿಬಂತು. ಎಂಟು ಹತ್ತು ಜನಗಳು ಮಾತನಾಡುತ್ತಿರುವಂತೆ ಕೇಳಿಸಿತು. ಸ್ನಾನವನ್ನು ಅರ್ಧಕ್ಕೇ ಸಾಕುಮಾಡಿ ವಸ್ತ್ರಧರಿಸಿ ಹೊರಗೆ ಬಂದರು.

ಕಂಪೆನಿ ಮನೆಯವರೆಲ್ಲಾ ಅಡಿಗೆಯಮನೆ ಮುಂದೆ ಸೇರಿಬಿಟ್ಟಿದ್ದರು. 'ಏನಿದು ಗಲಭೆ' ಎಂದು ಸುದರ್ಶನರು ಕೇಳಲು ಅಡಿಗೆಯ ನಾರಾಯಣ ಅಳುತ್ತಾ ಮುಂದೆ ಬಂದು

" ನೋಡೀ ಸಾರ್. ಈ ವಿನಾಯಗಂ ನನ್ನನ್ನು ಹೊಡೆದಿದ್ದಾರೆ."

" ಏಕಪ್ಪಾ ಹೊಡೆದರು. ಏನಾಯಿತು ? "

"ಎರಡನೆಯ ಸಲ ಕಾಫಿ ಕೇಳಿದರು ಸಾರ್. ಇಲ್ಲವೆಂದೆ. ಕೋಪಮಾಡಿಕೊಂಡು ನನ್ನನ್ನು ಬಯ್ದರು. ನನ್ನ 'ಬಯ್ದರೇನು ಪ್ರಯೋಜನ ಸ್ವಾಮಿ. ಹೋಗಿ ಯಜಮಾನರಿಗೆ ದೂರು ಹೇಳಿ' ಎಂದೆ. ಅದಕ್ಕೇ ರೇಗಿ ನನ್ನ ಕಪಾಳಕ್ಕೆ ಹೊಡೆದರು."

"ಕಾಫಿ ಇಲ್ಲವೆಂದೇಕೆ ಹೇಳಿದೆ ನಾರಾಯಣ."

"ಹಾಲಿರಲಿಲ್ಲ ಸಾರ್."

"ತರಿಸಿ ಮಾಡಿಕೊಡಬೇಕಾಗಿತ್ತು."

"ತರಿಸಕೂಡದೆಂದು ಸಾಹುಕಾರರ ಅಪ್ಪಣೆಯಾಗಿದೆ ಸಾರ್."

ಸುದರ್ಶನರು ಹೆಚ್ಚು ಮಾತನಾಡದೆ ನಾರಾಯಣನನ್ನು ಕರೆದು ಕೊಂಡು ತಮ್ಮ ರೂಮಿಗೆ ಹೋದರು. ಅಲ್ಲಿ

"ನಿಜವಾಗಿ ಆದದ್ದೇನು ನಾರಾಯಣ" ಎಂದು ಕೇಳಿದರು.

"ಹೇಳಿದ್ದೇನಲ್ಲಾ ಸಾರ್. ಅಷ್ಟೇ."

"ಹಾಲೇಕೆ ಮುಗಿದುಹೋಯಿತು."

"ಬೆಳಿಗ್ಗೆ ಅಷ್ಟುಹೊತ್ತಿಗೇ ಮುರಿಗೆಯ್ಯನವರು ಬಂದು ನಾಲ್ಕುಸೇರು ಹಾಲನ್ನು ಎರಡು ಸೇರಿಗಿಳಿಸಿ, ತಾವೇ ಹಾಲಿನವಳಿಗೆ ಹೇಳಿದರು. 'ಇವತ್ತು ಊಟಕ್ಕೆ ತುಪ್ಪವಿಲ್ಲ ಸ್ವಾಮಿ' ಎಂದು ಹೇಳಿದೆ. ಅದಕ್ಕೆ 'ಡಾಲ್ಡಾ ಇದೆಯಲ್ಲಾ – ಅದನ್ನೇ ಬಡಿಸು.' ಎಂದರು. 'ತರಕಾರಿ' ಎಂದೆ. 'ಒಂದಾಣೆ ಸೊಪ್ಪು ತಂದು ಎಸರು ಮಾಡಿ ಹಾಕು.' ಎಂದರು. ಇಷ್ಟು ಹೇಳಿ ಹೋಗುವಾಗ 'ನಮ್ಮಕ್ಕಳು ಬ್ರಾಂಬರೆಲ್ಲಾ ಸೇರಿಕೊಂಡು ತಿಂದೂ ತಿಂದೂ ಸಾಹುಕಾರರನ್ನ ದಿವಾಳಿ ಎಬ್ಬಿಸ್ತಾರೆ' ಎಂದು ಹೋದರು."

"ನಿಜ ಹೇಳುತ್ತಿರುವೆಯಾ ನಾರಾಯಣ."

"ಯಾವ ದೇವರ ಮೇಲೆ ಬೇಕಾದರೂ ಪ್ರಮಾಣ ಮಾಡುವುದಕ್ಕೆ ಸಿದ್ಧವಾಗಿದ್ದೇನೆ ಸ್ವಾಮಿ. ಬೇಕಾದರೆ ನಡೆಯಿರಿ, ಮುರಿಗೆಯ್ಯನವರ ಎದುರಿಗೆ ಹೇಳುತ್ತೇನೆ"

ಸುದರ್ಶನರು ಮರುಮಾತನಾಡದೆ ಪರ್ಸಿನಿಂದ ಹದಿನೈದು ರೂಪಾಯಿ ತೆಗೆದು ನಾರಾಯಣನ ಕೈಯಲ್ಲಿಟ್ಟು

"ತುಪ್ಪ, ತರಕಾರಿ ಏನು ಬೇಕೋ ತರಿಸಿಕೊ. ಇನ್ನು ಮೇಲೆ ಮುರಿಗೆಯ್ಯನವರನ್ನು ಯಾವದೂ ಕೇಳಬೇಡ. ಅವರು ಎಷ್ಟು ತಂದು ಹಾಕುತ್ತಾರೆ ಅಷ್ಟನ್ನೇ ತೆಗೆದುಕೋ. ಏನು ಸಾಲದೆ ಬಂದರೂ ನನ್ನನ್ನು ಕೇಳು. ಮೊದಲು ಹಾಲು ತರಿಸಿ ಕಾಫಿ ಮಾಡಿ ಎಲ್ಲರಿಗೂ ಕೊಡು"

ಎಂದು ಹೇಳಿ ವಿನಾಯಗಂ ರೂಮಿಗೆ ವರದರಾಜ ಅಯ್ಯಂಗಾರ್ಯರ ಜತೆ ಹೋದರು.

"ಕಾಫಿ ಬರತ್ತೆ ವಿನಾಯಗಂ. ನಾರಾಯಣ ಹಾಲು ತರುವುದಕ್ಕೆ ಹೋಗಿದ್ದಾನೆ."

ವಿನಾಯಗಂ ಮುಖ ಚಿಕ್ಕದಾಯಿತು.

"ನಾರಾಯಣನೂ ಕೂಲಿ ಮಾಡುವವನು. ನಮ್ಮ ಹಾಗೇ ಅವನೂ ಶ್ರಮಜೀವಿ. ಅವನ ಮೇಲೆ ನೀವು ಕೈ ಮಾಡಬಾರದಾಗಿತ್ತು."

"ತಪ್ಪಾಯಿತು ಅಣ್ಣಾ – ತಿಳಿಯಲಿಲ್ಲ. ನಾನು ಸ್ವಭಾವತಃ ಮುಂಗೋಪಿ."

"ನೋಡಿ ಈ ಕಂಪೆನಿ ಮನೆಯಲ್ಲಿ ನಾವೆಲ್ಲಾ ಅಣ್ಣ ತಮ್ಮಂದಿರ ಹಾಗಿದ್ದೇವೆ. ಯಾವ ಕಾರಣಕ್ಕೂ ನಮ್ಮಲ್ಲಿ ವೈಮನಸ್ಯ ಬರಬಾರದು. ನಿಮಗೆ ಏನು ಬೇಕಾದರೂ ನನ್ನನ್ನು ಬಂದು ಕೇಳಿ – ನಾನು ತರಿಸಿಕೊಡು ತ್ತೇನೆ. ನಾವು ಇನ್ನು ಜತೆಯಲ್ಲಿರುವುದು ಒಂದು ತಿಂಗಳೋ – ಎರಡು ತಿಂಗಳೋ – ಸ್ನೇಹ, ವಿಶ್ವಾಸ ಉಳಿಸಿಕೊಂಡು ಹೋಗೋಣ. ನಾಳೆ ಹೀಗೇ ಇನ್ನು ಯಾವದಾದರೂ ಕೆಲಸ ಒದಗಿದರೆ ಒಟ್ಟು ಕೂಡೇ ಕೂಡುತ್ತೇವೆ."

ವಿನಾಯಗಂಗೆ ತುಂಬ ಪಶ್ಚಾತ್ತಾಪವಾಯಿತು.

"ಕ್ಷಮಿಸಿ ಅಣ್ಣಾ – ನಾನು ಅಪರಾಧ ಮಾಡಿದೆ. ನಾರಾಯಣನ ಕ್ಷಮೆ ಬೇಕಾದರೂ ಬೇಡಲು ಸಿದ್ಧವಾಗಿದ್ದೇನೆ."

"ಅಂತಹದೇನೂ ಬೇಡ ವಿನಾಯಗಂ. ನಾನವನಿಗೆ ಸಮಾಧಾನ ಹೇಳುತ್ತೇನೆ. ಮುಂದೆ ನೀವು ಅವನ ಜತೆ ವಿಶ್ವಾಸವಾಗಿದ್ದರೆ ಸಾಕು."

ಎಂದು ಹೇಳಿದರು.

ನಾರಾಯಣ ತಂದುಕೊಟ್ಟ ಕಾಫಿಯನ್ನು ಎಲ್ಲರ ಜತೆ ಕುಡಿದು ಬಟ್ಟೆ ಧರಿಸಿ ಸ್ಟೂಡಿಯೊ ಮನೆಯ ಕಡೆ ಹೊರಟರು.

ಸ್ಟೂಡಿಯೊ ಮನೆಯಲ್ಲಿದ್ದ ಕಂಪೆನಿಯ ಆಫೀಸಿನಲ್ಲಿ ಸಾಹುಕಾರರು ಲೆಕ್ಕ ಪರಿಶೀಲಿಸುತ್ತಿದ್ದರು. ಮುರಿಗೆಯ್ಯ, ಚಿನ್ನಪ್ಪ, ಮಹಾದೇವಯ್ಯ ಸಾಹುಕಾರರಿಗೆ ವಿವರಗಳನ್ನು ಹೇಳುತ್ತಿದ್ದರು.

ಸುದರ್ಶನರು ನೇರವಾಗಿ ಆಫೀಸ್ ಪ್ರವೇಶಿಸುತ್ತಲೇ ಸಾಹುಕಾರರು

" ಬನ್ನಿ ಸ್ವಾಮಿ – ಕುಳಿತುಕೊಳ್ಳಿ "

ಎಂದರು. ಸುದರ್ಶನರು ಕುಳಿತುಕೊಂಡರು. ಅವರ ಮುಖ ಪ್ರಶಾಂತ ವಾಗಿಲ್ಲದುದನ್ನು ಎಲ್ಲರೂ ಗಮನಿಸಿದರು. ಮುರಿಗೆಯ್ಯನ ಮುಖದಲ್ಲಿ ಬೆವರು ಹನಿಗಳು ಕಾಣಿಸಿಕೊಂಡವು.

" ಏನು ಸ್ವಾಮಿ ಬಂದದ್ದು " ಎಂದು ಸಾಹುಕಾರರು ಕೇಳಿದರು.

" ಮುರಿಗೆಯ್ಯನವರ ಜತೆ ಸ್ವಲ್ಪ ಮಾತಾಡಬೇಕಾಗಿತ್ತು. ನೀವೆಲ್ಲರೂ ಇಲ್ಲಿಯೇ ಇರುವುದು ಸಂತೋಷ. ನಿಮ್ಮ ಎದುರಿನಲ್ಲಿಯೇ ಕೇಳಿಬಿಡುತ್ತೇನೆ."

" ಕೇಳಿ ಸ್ವಾಮಿ."

" ಇವತ್ತಿನಿಂದ ಕಂಪೆನಿ ಮನೆಗೆ ಹಾಲು, ತುಪ್ಪ, ತರಕಾರಿ ಖೋತಾ ಮಾಡಿರುವುದು ನಿಜವೇ ? "

"ಖರ್ಚು ಬಹಳವಾಗುತ್ತಿತ್ತು. ಕಡಿಮೆ ಮಾಡಬೇಕಾಯಿತು ಸ್ವಾಮಿ."

" ಒಳ್ಳೆಯದು. ನಿಮ್ಮ ಆಶ್ರಯದಲ್ಲಿರುವಾಗ ನೀವು ಹಾಕಿದ್ದು ತಿನ್ನ ಬೇಕಾದದ್ದು ನಮ್ಮ ಕೆಲಸ. ಕಂಪೆನಿ ಮನೆಯಲ್ಲಿ ಬ್ರಾಂಬರು ಸೇರ್ಕೊಂಡು ತಿಂದೂ ತಿಂದೂ ಸಾಹುಕಾರರನ್ನು ದಿವಾಳಿ ಎಬ್ಬಿಸ್ತಾ ಇದ್ದಾರೆ ಎಂದು ನಾರಾಯಣನ ಮುಂದೇಕೆ ಹೇಳಿದಿರಿ."

" ಅವನು ಸುಳ್ಳು ಬೊಗಳ್ತಾನೆ ಸ್ವಾಮಿ ಈ ವಿಷಯ. ನನ್ನ ಬಾಯಲ್ಲಿ ಅಂಥಾ ಮಾತು ಬರುತ್ಯೇ ? "

" ನಾರಾಯಣನನ್ನು ಕರೆಸಿ ಸ್ವಾಮಿ – ಇತ್ಯರ್ಥವಾಗಲಿ."

" ಹಾಗಂದೆಯೇನೊ ಮುರಿಗೆಯ್ಯ "

ಎಂದು ಸಾಹುಕಾರರು ಕೇಳಿದರು.

" ತಿಳಿದೇ ಆಡಿಬಿಟ್ಟೆ ಕಣಣ್ಣಾ. ಆ ಭಡವ ಇವರ ಹತ್ರ ಬಾಯಿ ಬಿಡ್ತಾನೇಂತ ನಾನು ತಿಳ್ಕೊಂಡಿರ್ಲಿಲ್ಲ."

ಸಾಹುಕಾರರೂ ಅವಾಕ್ಕಾದರು. ಗುಡುಗು, ಮಿಂಚು, ಸಿಡಿಲು

ಕಾದಿದೆಯೆಂದು ಮಹಾದೇವಯ್ಯ ಗಡಗಡನೆ ನಡುಗಿದ. ಸುದರ್ಶನರು ಧ್ವನಿಯನ್ನೂ ಎತ್ತರಿಸದೆ ಪರಮ ಶಾಂತಿಯಿಂದ

" ಸಾಹುಕಾರರೇ, ನಿಮಗೆ ನಮ್ಮ ಕೆಲಸ ಬೇಡವಾದರೆ ಮನೆಗೆ ಕಳುಹಿಸಿ ಬಿಡಿ. ಅನ್ನ ಹಾಕುವುದಕ್ಕೆ ಇಷ್ಟವಿಲ್ಲದಿದ್ದರೆ ಹೇಳಿಬಿಡಿ – ನಮ್ಮ ಊಟದ ವ್ಯವಸ್ಥೆ ನಾವು ಮಾಡಿಕೊಳ್ಳುತ್ತೇವೆ. ಆದರೆ ಮುರಿಗೆಯ್ಯನವರಂಥವರು ಪದೇಪದೆ 'ಬ್ರಾಂಬರು – ಬ್ರಾಂಬರು' ಎಂದು ನಮ್ಮನ್ನು ಬಯ್ಯುವುದನ್ನು ಕೇಳಿ ಸಹಿಸಲಾರೆವು. ಬ್ರಾಹ್ಮಣ–ಬ್ರಾಹ್ಮಣೇತರ ಭಾವನೆ ಬರಬಾರದೆಂಬ ಕರಾರು ಮಾಡಿಕೊಂಡೇ ನಾನು ನಿಮ್ಮ ಕಂಪೆನಿಗೆ ಕಾಲಿಟ್ಟೆ. ಆಗ ನೀವು ನನಗೆ ಬೇಕಾದಷ್ಟು ಭರವಸೆ ಕೊಟ್ಟಿರಿ. ನಿಮ್ಮ ಭರವಸೆಯನ್ನು ನೀವು ಎಳ್ಳಷ್ಟೂ ಪಾಲಿಸಲಿಲ್ಲ. ಮಹಾದೇವಯ್ಯನವರು ದ್ವೇಷಬೀಜ ಬಿತ್ತುವುದಕ್ಕೆ ಅವಕಾಶ ಕೊಟ್ಟಿರಿ. ತಮ್ಮ ಸ್ವಾರ್ಥ ಸಾಧಿಸಿಕೊಳ್ಳುವುದಕ್ಕೆ ಇವರು ಕೋಮುವಾರ ವಿಷಬೀಜ ಬಿತ್ತಿ ಒಂದು ಮನೆಯವರ ಹಾಗಿದ್ದ ನಮ್ಮನ್ನು ಒಡೆದು ಒಡೆದು ನೂರು ಹೋಳು ಮಾಡಿದರು. ಡೈರೆಕ್ಟರಿಗೆ ನನಗೆ, ಶಿವಾನಂದರಿಗೆ ನನಗೆ, ಭಾಗ್ಯಮ್ಮನವರಿಗೆ ನನಗೆ ವ್ಯಾಜ್ಯ ತಂದಿಟ್ಟರು."

" ನೀವು ಹೀಗೆ ಮಾತನಾಡುವುದು ತಪ್ಪು ಸುದರ್ಶನರೇ. ಕಂಪೆನಿಗಾಗಿ ಹಗಲೂ ರಾತ್ರಿ ದುಡಿಯುತ್ತಿರುವ ನನ್ನನ್ನು ಸ್ವಾರ್ಥಸಾಧಕ ಎಂದು ಯಾವ ಬಾಯಲ್ಲಿ ಹೇಳುವಿರಿ ? " ಎಂದು ಮಹಾದೇವಯ್ಯ ಪ್ರತಿಭಟಿಸಿದ.

" ಪರಾರ್ಥಸಾಧನೆಗೇ ನೀವು ಪಬ್ಲಿಸಿಟಿ ಆಫೀಸರ್, ಅಸಿಸ್ಟೆಂಟ್ ಡೈರೆಕ್ಟರ್, ಚಿತ್ರ ಗೀತಾಲೇಖಕ ಎಲ್ಲಾ ಆದಿರಲ್ಲವೇ ? ಅಥವಾ ನಿಮ್ಮ ಅದ್ಭುತ ಪ್ರತಿಭೆ ಕಂಡು ಎಲ್ಲರೂ ಈ ಸ್ಥಾನಗಳನ್ನು ಬಲವಂತವಾಗಿ ನಿಮ್ಮ ತಲೆಯ ಮೇಲೆ ಹೇರಿದರೋ ? "

" ನನ್ನ ಪ್ರತಿಭೆ ನೀವೇನ್ರೀ ಬಲ್ಲಿರಿ ? "

"ನಾನು ಚೆನ್ನಾಗಿ ಬಲ್ಲೆ ಮಹಾದೇವಯ್ಯನವರೇ. ನಿಮಗೆ ಎರಡು ಪಂಕ್ತಿ ಶುದ್ಧವಾಗಿ ಕನ್ನಡ ಬರೆಯುವುದಕ್ಕೂ ಬರುವುದಿಲ್ಲ ಎನ್ನುವುದನ್ನು ಚೆನ್ನಾಗಿ ಬಲ್ಲೆ. ನಿಮಗಿರುವುದೆಲ್ಲಾ ನಿಮ್ಮ ಜಾತಿಯ ಕ್ವಾಲಿಫಿಕೇಷನ್ (Qualification) ಯಾವ ಜಾತಿಯ ಅಗ್ನಿಕುಂಡಕ್ಕೆ ನೀವು ಆಜ್ಯ ಹುಯ್ಯುತ್ತಿರುವಿರೊ ಅದೇ ಅಗ್ನಿ ನಿಮ್ಮನ್ನು ಆಹುತಿ ತೆಗೆದುಕೊಳ್ಳುತ್ತದೆಂಬುದನ್ನು ಮರೆಯಬೇಡಿ. ಇಲ್ಲಿ ನೋಡಿ ಮಹಾದೇವಯ್ಯ – ಜಾತಿ ಮುಂದೆ ಮಾಡಿಕೊಂಡು, ಇತರರ ಹೊಟ್ಟೆಯ ಮೇಲೆ ಹೊಡೆದು, ಮಧುರ ಮೈತ್ರಿ ಇದ್ದ ಕಡೆ ಹುಳಿ ಹಿಂಡಿ ನೀವು ಜೀವನ ಮಾಡಿಕೊಳ್ಳಬೇಕಾಗಿದೆ. ಈ ಫಿಲಂ ಕಂಪೆನಿ

ಬಿಟ್ಟು ಹೊರಗೆ ಹೋದರೆ ನಿಮ್ಮ ಮುಖಕ್ಕೆ ನೂರುಕಾಳು ಉಪ್ಪೂ ಹುಟ್ಟುವುದಿಲ್ಲವೆಂದು ನಿಮಗೇ ಚೆನ್ನಾಗಿ ಗೊತ್ತು. ಹಾಗೆ ನಾನು ಜೀವನ ಮಾಡಿಕೊಳ್ಳಬೇಕಾದ ಅಗತ್ಯವಿಲ್ಲ. ಸರಸ್ವತಿ ನಾಲ್ಕು ಅಕ್ಷರ ಅನುಗ್ರಹಿಸಿದ್ದಾಳೆ. ಅದರ ಆಶ್ರಯದಲ್ಲಿ ನಾನು ಎಲ್ಲಿಯಾದರೂ ಬದುಕಿಕೊಳ್ಳಬಲ್ಲೆ."

ಮಹಾದೇವಯ್ಯ ಉತ್ತರ ಹೇಳಲು ಪ್ರಯತ್ನಿಸಿದ. 'ಸುಮ್ಮನಿರಯ್ಯಾ ಸಾಕು' ಎಂದು ಸಾಹುಕಾರರು ಅವನ ಬಾಯಿ ಬಡಿದು ಬಿಟ್ಟು

"ನಾನೆಲ್ಲಾ ವಿಚಾರಿಸಿ ಸರಿಮಾಡ್ತೀನಿ, ನೀವು ಮನಸ್ಸಿಗೆ ಅಸಮಾಧಾನ ಮಾಡಿಕೊಳ್ಳಬೇಡಿ ಸ್ವಾಮಿ."

ಎಂದು ಹೇಳಿದರು. 'ಆಗಬಹುದು' ಎಂದು ಹೇಳಿ ಸುದರ್ಶನರು ಅಲ್ಲಿಂದ ಎದ್ದರು. ಪರಿಸ್ಥಿತಿಯನ್ನು ಸಾಹುಕಾರರು ಎಷ್ಟರಮಟ್ಟಿಗೆ ಸುಧಾರಿಸಬಹುದೆಂಬ ವಿಷಯ ಸುದರ್ಶನರಿಗೆ ಚೆನ್ನಾಗಿ ಗೊತ್ತಿತ್ತು.

ಕಂಪೆನಿಮನೆಯ ಹೆಚ್ಚಿನ ಖರ್ಚಿಲ್ಲವನ್ನೂ ಸುದರ್ಶನರೇ ವಹಿಸಿಕೊಳ್ಳುವುದಕ್ಕೆ ಸತ್ಯನಾಥನ್, ವರದರಾಜಯ್ಯಂಗಾರ್ಯರು ಒಪ್ಪಲಿಲ್ಲ. ಕೊನೆಗೆ ಮೂವ್ವರೂ ಖರ್ಚನ್ನು ಹಂಚಿಕೊಳ್ಳಬೇಕೆಂದು ನಿಶ್ಚಯವಾಯಿತು.

ಕೊನೆಗೂ ಕಂಪೆನಿ ಮನೆ ಹಾಲು, ಮೊಸರು, ತುಪ್ಪ. ತರಕಾರಿ ತಪ್ಪಿಸುವುದಕ್ಕಾಗಲಿಲ್ಲವೆಂದು ಮುರಿಗೆಯ್ಯ ವ್ಯಸನಪಟ್ಟ. ಸುದರ್ಶನರಿಗೆ ಮುಖ ತೋರಿಸಲು ಮಹಾದೇವಯ್ಯನಿಗೆ ಧೈರ್ಯವಾಗಲಿಲ್ಲ.

## ೨೮

ಮುರಿಗೆಯ್ಯನ ಆಧಿಪತ್ಯದಲ್ಲಿ ಡೈರೆಕ್ಟರಿಗೆ ಹಣದ ತಾಪತ್ರಯ ಇಲ್ಲವಾಯಿತು. ಮುರಿಗೆಯ್ಯ, ಮಹಾದೇವಯ್ಯ ಹೇಗಾದರೂ ಸಂಧಾನ ಮಾಡಿ ಡೈರೆಕ್ಟರಿಗೆ ಹಣಕೊಡಿಸುತಿದ್ದರು. ಶಾಮಲಾಬಾಯಿ ಒಂದು ದಿನವೂ ತನ್ನ ಹಣವನ್ನು ಬಾಕಿ ಬಿಡುತ್ತಿರಲಿಲ್ಲ. ಕೈಗೆ ಹಣ ಬಂದ ಮೇಲೇ ಆಕೆ ಸೆಟ್ ಮೇಲೆ ರಿಕಾರ್ಡಿಂಗ್ ರೂಮಿಗೆ ಕಾಲಿಡುತ್ತಿದ್ದಳು. ಆದರೆ ಇದರ ಶಿಖೆ ಸುದರ್ಶನರು, ಸತ್ಯನಾಥನ್, ವರದರಾಜಯ್ಯಂಗಾರ್ ಅವರ ವಾದ್ಯಮಂಡಳಿಯವರಿಗೆ ತಗುಲಲಾರಂಭಿಸಿತು. ಸಾಹುಕಾರರನ್ನು ಹಣಕೇಳಬಾರದೆಂದು ಸುದರ್ಶನರು ತಮ್ಮ ಪ್ರಕಾಶಕರಿಂದ ಮುಂಗಡ ಹಣ ಬರಮಾಡಿಕೊಂಡು ಖರ್ಚುಮಾಡಿಕೊಂಡು ಕಾಲತಳ್ಳುತ್ತಿದ್ದರು.

ಒಂದುದಿನ ಬೀಚಿನ ಕಡೆಗೆ ವಾಕಿಂಗ್ ಹೋಗಿದ್ದು ಹಿಂದಿರುಗಿದ ಸತ್ಯನಾಥನ್ ಧಾವಿಸಿ ಸುದರ್ಶನರ ರೂಮಿಗೆ ಬಂದರು. ಅವರ ಆಯಾಸ, ಉದ್ವೇಗ ಕಂಡು ಸುದರ್ಶನರು

"ಏನಾಯಿತು ಸ್ವಾಮಿ. ಒಂದೇ ಉಸುರಿಗೆ ಓಡಿ ಬಂದ ಹಾಗೆ ಕಾಣುತ್ತದೆ."

"ಓಡಿಬಂದ ಹಾಗೆ ಆಯ್ತು. ಬೀಚಿನ ಕಡೆ ಹೋಗಿದ್ದೆ."

"ಅಲ್ಲಿಂದ ನಡೆದುಕೊಂಡೇ ಬಂದಿರೇನು ?"

"ಇಲ್ಲ. ಬಸ್ಸಿನಲ್ಲಿ ಬಂದೆ. ಸ್ಟ್ಯಾಂಡಿನಿಂದ ಇಲ್ಲಿಯವರೆಗೆ ನಡೆದು ಬಂದೆ."

"ಅಷ್ಟಕ್ಕಿಷ್ಟು ಆಯಾಸವೆ ?"

"ನಡೆದದ್ದಕ್ಕಲ್ಲ ಕವಿಗಳೇ – ಬೀಚಿನಲ್ಲಿ ಕಂಡದ್ದಕ್ಕೆ !"

"ಏನು ಕಂಡಿರಿ ?"

"ಎರಡು ದಂಪತಿ ಜೋಡಿ. ಒಂದು ನಿಮ್ಮ ಚಿನ್ನಪ್ಪನವರು, ಪಾರ್ವತಮ್ಮ; ಎರಡು ಶಿವಾನಂದರು ಚೂಡಾಮಣಿ."

"ಚಿನ್ನಪ್ಪನವರ ವಿಷಯ ಕಿವಿಯ ಮೇಲೆ ಬಿದ್ದಿತ್ತು. ಶಿವಾನಂದರ ವಿಷಯ ಹೊಸದು."

"ಯಜಮಾನರು ಇದನ್ನೆಲ್ಲಾ ನೋಡಿಕೊಂಡು ಕಣ್ಣು ಮುಚ್ಚಿಕೊಂಡಿದ್ದಾರೆ."

"ಅವರೇನು ಮಾಡಲು ಸಾಧ್ಯ ಹೇಳಿ."

"ಏನನ್ಯಾಯ ಸ್ವಾಮಿ."

"ಏನನ್ಯಾಯ ?"

ಸಿನೀಮಾ ಕಂಪೆನಿಯೆಂದರೆ ಸೂಳೆಗೇರಿ ಆಗಿಹೋಯಿತಲ್ಲಾ. ಇವರುಗಳು ರಾಮ, ಸೀತೆ, ಭರತ, ಸುಮಿತ್ರೆ, ಕೌಸಲ್ಯೆ ಪಾತ್ರಗಳನ್ನು ಮಾಡುವುದೆಂಥ ಪಾಪ !"

"ಇದೇ ಪ್ರಪಂಚ ಸತ್ಯನಾಥನ್ ಅವರೇ. ನೀವು ಈ ಯುಗಕ್ಕೆ ಅನರ್ಹರು. ಸತ್ಯ ಯುಗದಲ್ಲಿರಬೇಕಾಗಿತ್ತು."

"ನನ್ನ ಜತೆಗೆ ನೀವೊಬ್ಬರಾದರೂ ಇರುವಿರಲ್ಲಾ ಅದೇ ಸಂತೋಷ."

"ಶಿವಾನಂದರೂ ದಾರಿ ಹಿಡಿದದ್ದು ಕೇಳಿ ನನಗೆ ತುಂಬ ವ್ಯಸನವಾಗಿದೆ. ಆತನಿಗೆ ಹೊಸದಾಗಿ ಮದುವೆಯಾಗಿದೆ. ಮನೆಯಲ್ಲಿ ಬಂಗಾರದಂಥ ಹೆಂಡತಿ."

"ಇವರಿಗೆಲ್ಲಾ ಮದುವೆಯಾಕೆ – ಸಂಸಾರವೇಕೆ? ಕಂಪೆನಿ ಯಜಮಾನರೇ ಮೇಲ್ಪಂಕ್ತಿ ಹಾಕಿಕೊಟ್ಟಿರುವಾಗ ಇತರರು ಸುಮ್ಮನಿರುತ್ತಾರೆಯೇ?

"ನಮ್ಮಲ್ಲಿ ಯಾವ ಸಂಸ್ಥೆ, ಯಾವ ಉದ್ಯಮ ಆರಂಭವಾದರೂ ಅದರ ಪರ್ಯವಸಾನ ಹೀಗೇ ಆಗುವುದಲ್ಲಾ."

"ನೀವು ನಿನ್ನೆ ರಿಕಾರ್ಡಿಂಗಿಗೆ ಬರಲಿಲ್ಲ."

"ಬಂದೇನು ಮಾಡಬೇಕು ಹೇಳಿ. ನಾವು ಹೇಳುವ ಮಾತು ಇವರಿಗೆ ಪಥ್ಯವಾಗುವುದಿಲ್ಲ. ಚಿತ್ರದ ಹಿತದ ದೃಷ್ಟಿಯಿಂದ ಒಂದು ಮಾತು ಹೇಳಿದರೆ ಅದಕ್ಕೆ ದುರದ್ದೇಶ ಆರೋಪಿಸುತ್ತಾರೆ."

"ನಿಮ್ಮ ಭಂಗಾಳಿ ಬಾಬು ಚಿತ್ರದಲ್ಲಿ ಇಂಗ್ಲಿಷ್, ಅಮೇರಿಕನ್, ಹವಾಯ್ ಸಂಗೀತ, ನೃತ್ಯ ಎಲ್ಲಾ ಸೇರಿಸಿ ಅದನ್ನು ಹದಗೆಡಿಸಲು ಬದ್ಧಕೆಂಕಣನಾಗಿರುವ ಹಾಗೆ ಕಾಣುತ್ತದೆ. ನಿನ್ನೆ ಸ್ಟೂಡಿಯೋ ಮನೆಯಲ್ಲಿ ಸಾಹುಕಾರರಿಗೆ ಉಪದೇಶಮಾಡುತ್ತಿದ್ದ – ಜನಗಳ ಅಭಿರುಚಿಗನುಗುಣವಾಗಿ ಚಿತ್ರ ಮಾಡಬೇಕಂತೆ. ನವೀನತೆಯ ದೃಷ್ಟಿಯಿಂದ ಹವಾಯ್ ನೃತ್ಯ, ಅಮೆರಿಕನ್ ಸಂಗೀತ ಸೇರಿಸಬೇಕೆಂದು ಅವನ ಸಲಹೆ."

"ಅದಕ್ಕೆ ಸಾಹುಕಾರರು ಏನೆಂದರು?"

"ಬಾಯಿಬಿಟ್ಟುಕೊಂಡು ಅವನ ಮಾತು ಕೇಳುತ್ತಿದ್ದರು. ಇವುಗಳನ್ನು ಸೇರಿಸಿದರೆ ಚಿತ್ರ ಎರಡು ಕೈಯಲ್ಲಿಯೂ ಹಣವನ್ನು ಬಾಚುತ್ತದೆ ಎಂದು ಡೈರೆಕ್ಟರ್ ಹೇಳಿದಮೇಲೆ ಸಾಹುಕಾರರ ಅಭಿಪ್ರಾಯ ಕೇಳಬೇಕಾಗಿಯೇ ಇಲ್ಲವಲ್ಲ."

"ಆ ಸಂಗೀತ, ನೃತ್ಯವನ್ನೂ ನೀವೇ ನಿರ್ದೇಶಿಸಬೇಕಲ್ಲ ಸತ್ಯನಾಥನ್."

"ನನ್ನ ಕೈಯಲ್ಲಿ ಸಾಧ್ಯವಿಲ್ಲವೆಂದು ಹೇಳಿಬಿಟ್ಟೆ. ಅವುಗಳನ್ನು ಈ ಚಿತ್ರದಲ್ಲಿ ಸೇರಿಸುವುದಾದರೆ ಟೈಟಲ್ ಕಾರ್ಡಿನ (Title Card) ಮೇಲೆ ನನ್ನ ಹೆಸರು ಹಾಕಕೂಡದೆಂದು ತಿಳಿಸಿದೆ."

"ನೀವೂ – ನಾನು ಇಬ್ಬರೂ ಮರ್ಯಾದೆ ಉಳಿಸಿಕೊಂಡು ಈ ಚಿತ್ರದಿಂದ ಪಾರಾಗುವಹಾಗೆ ಕಾಣಲಿಲ್ಲ." ಎಂದರು.

ಸುದರ್ಶನರನ್ನು ಕಾಣಲು ಬಂದ ವೆಂಕಟಾಚಲಂ, ಸುಬ್ಬಯ್ಯರ್ ಮತ್ತಷ್ಟು ಭಯಂಕರ ಸುದ್ದಿಗಳನ್ನು ಹೇಳಿದರು.

"ಕೌಸಲ್ಯೆ ಪಾತ್ರವನ್ನು ಮತ್ತಷ್ಟು ಮೊಟಕುಮಾಡಿ ಮಂಥರೆ ಪಾತ್ರ ಬೆಳಸುತ್ತಿದ್ದಾರೆ."

"ಕೌಸಲ್ಯೆ ಪಾತ್ರ ಮೊಟಕು ಮಾಡಿದರೆ ಚಿತ್ರವೇ ಹಾಳಾಗಿ ಹೋಗುವುದಲ್ಲ ವೆಂಕಟಾಚಲಂ."

ಹೌದು ಸಾರ್. ಅವರು ಚಿತ್ರವನ್ನು ಊರ್ಜಿತ ಮಾಡುವುದಕ್ಕೆ ಹೊರಟಿದ್ದಾರೇನು ?"

"ಮಂಥರೆ ಪಾತ್ರ ಹೇಗೆ ಬೆಳಸುತ್ತಾರೆ, ನಾನು ಬರೆದುಕೊಡಬೇಕಲ್ಲ?"

"ನಿಮ್ಮದೇನೂ ಅವರಿಗೆ ಅಗತ್ಯವಿಲ್ಲ ಸಾರ್. ಮಹಾದೇವಯ್ಯ ಬರೆದುಕೊಡುತ್ತಾರೆ."

"ಬಹಳ ಸಂತೋಷ."

"ಇನ್ನೂ ಎಷ್ಟು ಸೆಟ್ಸ್ ಇವೆ ಸಾರ್" ಎಂದು ಸುಬ್ಬಯ್ಯರ್ ಕೇಳಿದರು.

"ಸೆಟ್ಸ್ ಕೆಲಸವೆಲ್ಲಾ ಮುಗಿದಂತಾಗಿದೆ. ಇನ್ನುಳಿದಿರುವುದು ಔಟ್ ಡೋರ್ ಷೂಟಿಂಗ್ (Out-door shooting)"

"ಬೇಗ ಮುಗಿಸಿಬಿಟ್ಟು ಈ ಸೂತಕ ಕಳೆದುಕೊಂಡು ಬಿಡಿ ಸಾರ್."

"ಏಕೆ ಹಾಗನ್ನುವಿರಿ ಸುಬ್ಬಯ್ಯರ್."

"ಈ ಕಾಗೆ ಬಳಗಕ್ಕೆ ನಿಮ್ಮಂಥವರು ಬರಬಾರದಾಗಿತ್ತು ಸಾರ್. ಕನ್ನಡದಲ್ಲಿ ಒಳ್ಳೆಯ ಚಿತ್ರವಾಗಲಿ ಎಂಬ ಆದರ್ಶ ನಂಬಿಕೊಂಡು ನೀವಿಲ್ಲಿಗೆ ಬಂದಿರಿ ? ಚಿತ್ರ ಯಥಾಪ್ರಕಾರ ಮೂರನೆಯ ದರ್ಜೆ ತಮಿಳು, ಹಿಂದೀ ಚಿತ್ರದ ಮಟ್ಟಕ್ಕೆ ಬಂತು, ನಿರರ್ಥಕವಾಗಿ ನೀವು ಆರೇಳು ತಿಂಗಳು ಹಾಳು ಮಾಡಿಕೊಂಡ ಹಾಗಾಯಿತು."

" ನಿಜ. ನನ್ನ ಕಾಲ ನಿರರ್ಥಕವಾಯಿತು. ಇದೇ ಅವಧಿಯಲ್ಲಿ ನಾನು ಒಂದೆರಡು ಗ್ರಂಥಗಳನ್ನಾದರೂ ಬರೆಯುತ್ತಿದ್ದೆ. ಆದರೆ ಈ ಅನುಭವವಾದದ್ದೂ ಒಳ್ಳೆಯದೇ. ಚಿತ್ರ ಪ್ರಪಂಚದ ಸಣ್ಣ ಗಡಿಯಲ್ಲಿ ಇಡಿಯ ಪ್ರಪಂಚವನ್ನೇ ನಾನು ಕಂಡ ಹಾಗಾಯಿತು. ಸ್ವಾರ್ಥ, ಲೋಭ, ಮೋಹಗಳು ತಮ್ಮ ಅನಂತಬಾಹುಗಳನ್ನು ಹೇಗೆ ಚಾಚುತ್ತವೆಯೆಂಬುದನ್ನು ತಿಳಿದುಕೊಂಡ ಹಾಗಾಯಿತು—ಎಲ್ಲಕ್ಕೂ ಹೆಚ್ಚಾಗಿ ನಿಮ್ಮ ಸ್ನೇಹವಾಯಿತು. ತಮಿಳುನಾಡಿನ ಸಾಹಿತಿಗಳ ಪರಿಚಯವಾಯಿತು."

ಸುದರ್ಶನರು ಒಳಗೆ ಹುದುಗಿದ್ದ ದುಃಖವನ್ನು ಮರೆಮಾಚಿ ನಗೆಮೊಗ ತೋರಲು ವಿಶ್ವಪ್ರಯತ್ನ ಮಾಡುತ್ತಿರುವುದನ್ನು ವೆಂಕಟಾಚಲಂ, ಸುಬ್ಬಯ್ಯರ್ ತಿಳಿದುಕೊಂಡರು.

ಔಟ್‌ಡೋರ್ ಷೂಟಿಂಗ್ ಆರಂಭಿಸುವ ಮುಂಚೆ ಸಾಹುಕಾರರು

ಬೆಂಗಳೂರಿಗೆ ಹೋಗಿ ಬರುವ ಪ್ರಮೇಯ ಒದಗಿತು. ಹೊರಡುವ ಮುನ್ನ ಸುದರ್ಶನರನ್ನು ಬಂದು ಭೆಟ್ಟಿಯಾಗಿ

"ಔಟ್‌ಡೋರ್ ವ್ಯವಸ್ಥೆ ನೋಡಿಕೊಳ್ಳಿ ಸ್ವಾಮಿ. ನಾನು ಎರಡು ಮೂರು ದಿವಸಗಳಲ್ಲಿ ಬಂದುಬಿಡುತ್ತೇನೆ."

ಸುದರ್ಶನರು ಉತ್ತರ ಕೊಡಲಿಲ್ಲ.

"ಔಟ್‌ಡೋರ್ ಕೆಲಸ ಎಷ್ಟು ದಿನವಾಗಬಹುದು?"

"ಬಿಸಿಲು ಚೆನ್ನಾಗಿದ್ದರೆ ಒಂದು ವಾರದಲ್ಲಿ ಮುಗಿಯಬಹುದು."

"ಸ್ಟೂಡಿಯೊ ಖರ್ಚು ಈಗಲೇ ಬೆಳೆದುಬಿಟ್ಟಿತು. ಚಿತ್ರ ಬೇಗ ಮುಗಿಸ ಬೇಕು – ನಾವು ವಿಜಯದಶಮಿಗಾದರೂ ಚಿತ್ರವನ್ನು ರಿಲೀಸ್ (Release) ಮಾಡಬೇಕು."

"ತಮಗೆ ಸೂಕ್ತ ಕಂಡ ರೀತಿಯಲ್ಲಿ ಮಾಡಬಹುದು. ಔಟ್‌ಡೋರ್ ಕೆಲಸ ಮುಗಿದಮೇಲೆ ನಾನು ಊರಿಗೆ ಹೋಗಲು ಅಪ್ಪಣೆ ತಾನೇ."

"ಇನ್ನೂ ಬ್ರಹ್ಮಾಂಡ ಕೆಲಸವಿದೆಯಲ್ಲಾ ಸ್ವಾಮಿ. ಎಡಿಟಿಂಗ್ ಆಗುವಾಗ ನೀವು ಇರಲೇಬೇಕಂತೆ."

"ನನ್ನ ಅಗತ್ಯವೇನೂ ಇಲ್ಲ. ಹಸ್ತಪ್ರತಿ ಸಿದ್ಧಮಾಡಿದ್ದೇನೆ. ಸೀಕ್ವೆನ್ಸ್ (Sequeuce) ಗಳನ್ನೂ ಷಾಟ್ (Shot) ಗಳನ್ನೂ ನಿರ್ದೇಶಮಾಡಿ ದ್ದೇನೆ – ಮಹಾದೇವಯ್ಯನವರು ಎಡಿಟಿಂಗ್ ಮಾಡಿಸಬಹುದು."

"ನೀವು ಮನಸ್ಸು ಬಹಳ ಕೆಡಿಸಿಕೊಂಡಿರುವಿರಿ ಕವಿಗಳೇ."

"ನಾನು ಕೆಡಿಸಿಕೊಂಡಿಲ್ಲ ಸಾಹುಕಾರರೇ – ನೀವು ಕೆಡಿಸಿರುವಿರಿ."

"ನಾನೇ!!"

"ನೀವು ಮತ್ತು ನಿಮ್ಮವರು."

"ನಿಮ್ಮ ಮಾತಿಗೆ ನಾನು ಪ್ರತಿ ಹೇಳಿಯೇ ಇಲ್ಲವಲ್ಲ."

"ಈ ನಾಟಕದಿಂದ ಏನೂ ಪ್ರಯೋಜನವಿಲ್ಲ ಸಾಹುಕಾರರೇ. ನಾನು ಮಾಡಿರುವ ಮಹಾಪರಾಧಗಳ ಪಟ್ಟಿಮಾಡಿ ಹೇಳುತ್ತೇನೆ ಕೇಳಿ – ನಾನು ಬ್ರಾಹ್ಮಣನಾಗಿ ಹುಟ್ಟಿದ್ದು ದೊಡ್ಡ ತಪ್ಪು. ಲೋಕದಲ್ಲಿ ಬದುಕಬೇಕೆಂದು ಬಯಸುವವನು ಬ್ರಾಹ್ಮಣನಾಗಿ ಹುಟ್ಟಬಾರದು. ಹಿಟ್ಲರ್ ಜರ್ಮನಿಯಲ್ಲಿದ್ದ ಜ್ಯೂಗಳಿಗಿಂತ ನಮ್ಮ ಪಾಡು ಕೆಟ್ಟದ್ದು. ಎರಡನೆಯ ಅಪರಾಧ – ಬುದ್ಧಿ ವಂತನಾಗಬಾರದಾಗಿತ್ತು ನಿಮ್ಮ ಬುದ್ಧಿವಂತಿಕೆ, ಪಾಂಡಿತ್ಯಗಳನ್ನೇ ಹೊಗಳಿ ಕೊಂಡು ಹೋಗಬೇಕಾಗಿತ್ತು. ಆದರೆ ಏನುಮಾಡಲಿ – ನನ್ನ ಮನಸ್ಸು ಅದಕ್ಕೆ ಒಪ್ಪುವುದಿಲ್ಲ. ನೀವು ವ್ಯವಹಾರ ನಿಪುಣರೆಂದೂ ಶ್ರೀಮಂತರೆಂದು

ಒಪ್ಪಿಕೊಳ್ಳುವುದಕ್ಕೆ ನಾನು ಸಿದ್ಧವಾಗಿದ್ದೇನೆ– ಆದರೆ ನನಗಿಂತ ಬುದ್ಧಿವಂತ ರೆಂದು, ಪಂಡಿತರೆಂದು ಒಪ್ಪಿಕೊಳ್ಳಲು ಸಿದ್ಧವಾಗಿಲ್ಲ. ಮೂರನೆಯದು– ಚಿತ್ರ 'ಹಾಳಾಗಿ ಹೋದರೆ' ಹೋಗಲಿ ನಾನು ಹೇಗೆ ಅನುಕೂಲ ಮಾಡಿ ಕೊಳ್ಳಬೇಕು ಎಂದು ಯೋಚಿಸಿ ಮುರಿಗೆಯ್ಯನವರು, ಭಾಗ್ಯಮ್ಮನವರು, ಅಡಿಗೆ ರೇವಣ್ಣ ಇವರ ಆಶ್ರಯ ಮಾಡಬೇಕಾಗಿತ್ತು. ನನಗೆ ಆತ್ಮಗೌರವ ವಿಲ್ಲದಿದ್ದರೆ ಹಾಗೆ ಮಾಡಬಹುದಾಗಿತ್ತು. ಭಟ್ಟಂಗಿಯಾಗಿ ನಾನು ಬದುಕ ಬೇಕಾದದ್ದಿಲ್ಲ. ಆತ್ಮಗೌರವ ಉಳಿಸಿಕೊಂಡು ಉಪವಾಸ ಸತ್ತರೂ ಚಿಂತೆಯಿಲ್ಲ. ಅಯೋಗ್ಯರನ್ನು ಆಶ್ರಯಿಸಿ ಶ್ರೀಮಂತನಾಗುವ ದುರ್ಗತಿ ಮಾತ್ರ ಬೇಡ."

"ನಿಮಗೇನು ಸ್ವಾಮಿ ನಾನು ಮಾಡಿರುವ ಅನ್ಯಾಯ ?"

"ನನಗೆ ಅನ್ಯಾಯವಾಗುವುದು ಸಾಧ್ಯವೇ ಇಲ್ಲ ಸಾಹುಕಾರರೇ. ಈ ಚಿತ್ರ ನಾಳೆ ಯಶಸ್ವಿಯಾಗಿ ಲಕ್ಷಾಂತರ ರೂಪಾಯಿ ಗಳಿಸಿದರೆ ಅದರಲ್ಲಿ ಒಂದು ಪಾಲನ್ನೇನೂ ನೀವು ನನಗೆ ಕೊಡುವುದಿಲ್ಲ. ದುರದೃಷ್ಟವಶಾತ್ ಅದು ಸೋಲಾಗಿ ನಷ್ಟ ಹೊಂದಿದರೆ, ನಷ್ಟ ಕಟ್ಟಿಕೊಡಿ ಎಂದು ನೀವು ನನ್ನನ್ನು ಕೇಳುವಹಾಗೂ ಇಲ್ಲ. ನಾನು ಕೈಹಾಕಿದ ಕೆಲಸ ತೃಪ್ತಿಕರವಾಗಿ ಆಗಿದ್ದರೆ ನನಗೆ ಸಮಾಧಾನವಾಗುತ್ತಿತು. ಅದು ನನ್ನ ಪಾಲಿಗೆ ಇಲ್ಲದ ಹಾಗೆ ಮಾಡಿದಿರಿ."

"ನಿಮ್ಮ ಮನಸ್ಸು ಹೀಗಾಗಿರುವಾಗ ನಾನು ಏನೂ ಹೇಳಿದರೂ ನಿಮಗೆ ಹಿಡಿಯಲ್ಲ ಸುದರ್ಶನರೇ. ಒಳ್ಳೆಯದು– ಈಗ ನಾನು ಯಾವ ಮಾತನ್ನೂ ಆಡುವುದಿಲ್ಲ. ಕಾಲ ಬಂದಾಗ ನನ್ನ ವಿಷಯ ನಿಮಗೇ ತಿಳಿ ಯುತ್ತದೆ. ಔಟ್‌ಡೋರ್ ಷೂಟಿಂಗ್ ವಿಷಯ ಏನುಮಾಡುತ್ತೀರಿ."

"ನಾನಿನ್ನೂ ನಿಮ್ಮ ನೌಕರ. ನೋಡಿಕೊಳ್ಳಬೇಕಾದುದು ನನ್ನ ಕರ್ತವ್ಯ. ಡೈರೆಕ್ಟರು, ಅಸಿಸ್ಟೆಂಟ್ ಡೈರೆಕ್ಟರು ಇವರ ಆಜ್ಞೆ ಪಾಲಿಸಲು ಸಿದ್ಧನಾಗಿದ್ದೇನೆ."

ಎಂದು ಹೇಳಿದರು. ಸಾಹುಕಾರರು ತಲೆ ತಗ್ಗಿಸಿಕೊಂಡು ಎದ್ದು ಹೋದರು.

ಸಾಹುಕಾರರು ಬೆಂಗಳೂರಿಗೆ ಪ್ರಯಾಣಮಾಡಿದ ದಿನವೇ ಶಿವಾನಂದ ಹೊಸ ದಶಾಶ್ವಬಲ (10 H. P) ಫೋರ್ಡ್ ಕಾರು ಕೊಂಡು ತಂದ. 'ಹಣ ಕೊಡದಿದ್ದರೆ ನಾನು ಮುಂದೆ ಮೇಕಪ್ ಮಾಡಿಕೊಳ್ಳುವುದಿಲ್ಲ ಎಂದು ಅವನು ಹಾಕಿದ್ದ ಬೆದರಿಕೆ ಫಲಿಸಿತ್ತು. ಅವನ ಪರ ಮುರಿಗೆಯ್ಯ,

ಮಹಾದೇವಯ್ಯ ವಾದ ಮಾಡಿದ್ದರು. ಸಾಹುಕಾರರು ಗೊಣಗಿಕೊಂಡು ಶಿವಾನಂದನ ಕೈಗೆ ಹತ್ತು ಸಾವಿರ ರೂಪಾಯಿಗಳ ಚೆಕ್ ಕೊಟ್ಟಿದ್ದರು.

ಕಾರು ತಂದ ಮೇಲಂತೂ ಶಿವಾನಂದನನ್ನು ಹಿಡಿಯುವವರೇ ಇರಲಿಲ್ಲ. ಡೈರೆಕ್ಟರು, ಮಹಾದೇವಯ್ಯ, ಕಾರಿನ ಪೂರ್ಣ ಪ್ರಯೋಜನ ಪಡೆದು ಕೊಂಡರು. ಜತೆಗೆ ಚೂಡಾಮಣಿಯಿಲ್ಲದೆ ಶಿವಾನಂದ ಎಲ್ಲಿಗೂ ಹೋಗು ತ್ತಿರಲಿಲ್ಲ. ಒಮ್ಮೊಮ್ಮೆ ಸಂಗಡ ಚಿನ್ನಪ್ಪ ಪಾರ್ವತಿಯನ್ನೊ, ಡೈರೆಕ್ಟರು ಅವರ ಪ್ರೇಯಸಿಯನ್ನೋ ಕರೆದುಕೊಂಡು ಹೋಗುತ್ತಿದ್ದ.

ಶ್ರೀಶೈಲ ಪಿಕ್ಚರ್ಸ್ ಕಂಪೆನಿಯ ನಟನಟಿಯರ ಜೀವನಕ್ರಮ ಮದರಾಸಿನ ಚಿತ್ರ ಪ್ರಪಂಚದ ನಿತ್ಯ ಸಂಭಾಷಣೆಯ ಗ್ರಾಸವಾಯಿತು. ತಮಿಳು ಸಿನೀಮಾ ಪತ್ರಿಕೆಗಳವರು ತಾವು ಕಂಡು ಕೇಳಿದುದಕ್ಕೆ ಮತ್ತಷ್ಟು ಸೇರಿಸಿ ಸ್ವಾರಸ್ಯವಾದ ಲೇಖನಗಳನ್ನು ಬರೆಯತೊಡಗಿದರು.

ಸುಬ್ಬಯ್ಯರ್ ತಮಿಳು ಪತ್ರಿಕೆಗಳನ್ನು ತಂದು ಅನುವಾದ ಮಾಡಿ ಅವುಗಳಲ್ಲಿ ಬಂದಿದ್ದ ಲೇಖನಗಳನ್ನು ಸುದರ್ಶನರಿಗೆ ವಿವರಿಸುತ್ತಿದ್ದರು.

ಔಟ್‌ಡೋರ್ ಷೂಟಿಂಗಿಗೆ ಬೇಕಾದ ವ್ಯವಸ್ಥೆಯೆಲ್ಲಾ ಸ್ಟೂಡಿಯೋಕ್ಕೆ ಸಮೀಪವಾಗಿದ್ದ ಚೆಟ್ಟಿಯಾರರ ತೋಟದಲ್ಲಿ ವ್ಯವಸ್ಥೆಯಾಯಿತು. ಗುಹನ ಶೃಂಗಬೇರಪುರ, ರಾಮನ ಚಿತ್ರಕೂಟಾಶ್ರಮ ದೃಶ್ಯಗಳ ಷೂಟಿಂಗ್ ಬಾಕಿ ಉಳಿದಿತ್ತು.

ಔಟ್‌ಡೋರ್ ಷೂಟಿಂಗಿನ 'ಕಾಲ್ ಷೀಟ್' ತೆಗೆದುಕೊಂಡ ದಿನವೇ ಸುದರ್ಶನರು ಎಲ್ಲರೆದುರಿಗೆ ಭೂಪೇನ್ ಬಾಬುಗಳಿಗೆ

"ಡೈರೆಕ್ಟರವರೇ, ನಾನು ಇನ್ನು ಒಂದು ವಾರ ಇಲ್ಲಿರುತ್ತೇನೆ. ಆ ವೇಳೆಗೆ ನೀವು ಔಟ್‌ಡೋರ್ ಮುಗಿಸಿಕೊಳ್ಳಬೇಕು." ಎಂದರು.

ಡೈರೆಕ್ಟರು ಬೆರಗಾಗಿ

"ಒಂದು ವಾರದಲ್ಲಿ ಹೇಗೆ ಮುಗಿಯಬೇಕು ಸುದರ್ಶನ ಬಾಬು."

"ನೀವು ಬೇಕಾದಾಗ ಮುಗಿಸಿಕೊಳ್ಳಬಹುದು. ಒಂದು ವಾರದ ತರುವಾಯ ನಾನು ಹೊರಟುಬಿಡಬೇಕಾಗಿದೆ"

ಎಂದು ಹೇಳಿ ಮಾರುತ್ತರಕ್ಕೆ ಕಾಯದೆ ತಮ್ಮ ಕೆಲಸಕ್ಕೆ ಹೊರಟು ಹೋದರು

ಸಾಹುಕಾರರು ಬೆಂಗಳೂರಿನ ಕೆಲಸ ಮುಗಿಸಿಕೊಂಡು ಎರಡು ದಿವಸ ಗಳಲ್ಲಿ ಬಂದರು.

ಸುದರ್ಶನರ ನೋಟೀಸಿನ ಬಿಸಿಯಲ್ಲಿ ಔಟ್‌ಡೋರ್ ಷೂಟಿಂಗ್ ವೇಗವಾಗಿ ಸಾಗಿತು. ಡೈರೆಕ್ಟರು ಕೆಲಸದ ಕಾಲಾವಧಿಯನ್ನು ಹೆಚ್ಚಿಸಿ ಕೊಂಡು ಷೂಟಿಂಗ್ ಮುಂದುವರಿಸಿದರು. ಆದರೂ ಎರಡು ದೃಶ್ಯಗಳೂ ಮುಗಿಯಲಿಲ್ಲ.

ಔಟ್‌ಡೋರ್ ಷೂಟಿಂಗಿನ ಆರನೆಯ ದಿನದ ಸಂಜೆ ಮನೆಗೆ ಹೋಗುವ ಮುನ್ನ ಸುದರ್ಶನರು ಸಾಹುಕಾರರನ್ನು ಕಂಡು

"ನಾನು ನಾಳೆ ಹೊರಡಬೇಕೆಂದಿದ್ದೇನೆ ಸ್ವಾಮಿ" ಎಂದರು.

ಸಾಹುಕಾರರಿಗೆ ಗಾಬರಿಯಾಯಿತು.

"ಇನ್ನೂ ಔಟ್‌ಡೋರ್ ಮುಗಿದಿಲ್ಲವಲ್ಲ ಸ್ವಾಮಿ."

"ಮುಗಿದಿಲ್ಲ. ಅದಕ್ಕೆ ನಾನೇನು ಮಾಡಲಿ.

"ಇನ್ನು ಒಂದು ವಾರದಲ್ಲಿ ಮುಗಿಯುತ್ತದೆಂದು ಡೈರೆಕ್ಟರು ಹೇಳು ತ್ತಾರೆ."

"ನನ್ನ ಕಾಲಕ್ಕೂ ಬೆಲೆಯಿದೆ ಸಾಹುಕಾರರೇ."

ಚಿನ್ನಪ್ಪ ಮೆಲ್ಲನೆ

"ಇಷ್ಟೇ ದಿವಸವಾಯಿತು ಇನ್ನು ಒಂದು ವಾರದಲ್ಲಿ ಆಗುವುದೇನು ಹೋಗುವುದೇನು–ಇದ್ದು ಮುಗಿಸಿಕೊಂಡುಹೋಗಿ ಸ್ವಾಮಿ." ಎಂದು ಹೇಳಿದ.

"ನಾನಿದ್ದು ಆಗುವ ಕೆಲಸ ನಾನು ಇಲ್ಲದೆಯೂ ಆಗಬಹುದು ಚಿನ್ನಪ್ಪ ನವರೇ."

"ಅದು ಹೇಗಾದರೂ ಇರಲಿ. ಗುಹನ ಪಾತ್ರ ನನಗೆ ಗಂಟು ಹಾಕಿದ್ದೀರಿ. ನೀವು ಹೊರಟುಹೋದರೆ ನನ್ನ ಉತ್ಸಾಹಭಂಗವಾಗುತ್ತದೆ. ನನಗಾಗಿ ಒಂದು ವಾರ ನಿಲ್ಲಲು ಸಾಧ್ಯವಿಲ್ಲವೇ?"

ಚಿನ್ನಪ್ಪ 'ನನಗಾಗಿ' ಎಂದು ಕೇಳಿದಾಗ 'ಸಾಧ್ಯವಿಲ್ಲ' ಎನ್ನಲು ಸುದರ್ಶನರಿಗೆ ಮನಸ್ಸಾಗಲಿಲ್ಲ.

"ಆಗಲಿ ಇನ್ನೊಂದು ವಾರ ನಿಲ್ಲುತ್ತೇನೆ. ಮುಂದಿನ ಶನಿವಾರ ನಾನು ಪ್ರಯಾಣ ಮಾಡಲೇ ಬೇಕು. ಯಾರಿಗಾಗಿಯೂ ನಿಲ್ಲಲು ಸಾಧ್ಯವಿಲ್ಲ"

ಎಂದು ಖಂಡಿತವಾಗಿ ಹೇಳಿದರು.

## ೨೯

ವಾರ ಮುಗಿಯುತ್ತ ಬಂತು. ಗುಹನ ಪಾತ್ರವೆಲ್ಲಾ ಮುಗಿಯಿತು. ಚಿತ್ರಕೂಟಾಶ್ರಮದ ಕೆಲವು ನೋಟಗಳು ಮಾತ್ರ ಉಳಿದಿದ್ದವು. ಎಡಿಟರ್

ಛಾಯಾಪತಿ ಸುದರ್ಶನರ ಮರೆಹೊಕ್ಕ. ಅವನ ಜತೆಗೆ ಕುಳಿತು ದೃಶ್ಯಗಳನ್ನೂ ಷೂಟಿಂಗ್ ಸ್ಕ್ರಿಪ್ಟನ್ನು(Shooting Script)ಸುದರ್ಶನರು ವಿವರಿಸಿದರು. ಶುಕ್ರವಾರ ಪೇಟೆಯ ಕಡೆಗೆ ಹೋಗಿ ತಮ್ಮ ಮನೆಗೆ ಬೇಕಾದ ಕೆಲವು ಸಾಮಾನುಗಳನ್ನೂ ಬಟ್ಟೆ ಬರೆಯನ್ನು ಕೊಂಡು ಸ್ಟೇಷನ್ನಿಗೆ ಹೋಗಿ ಶನಿವಾರದ ಎಕ್ಸ್‌ಪ್ರೆಸ್ ಗಾಡಿಗೆ ಸೆಕೆಂಡ್ ಕ್ಲಾಸ್ ಟಿಕೆಟ್ ಕೊಂಡು ರಿಸರ್ವ್ ಮಾಡಿಸಿಬಂದರು.

ಅಂದೇ ರಾತ್ರಿ ಬಹಳ ಹೊತ್ತಿನವರೆಗೆ ಸತ್ಯನಾಥನ್, ವರದರಾಜ ಯ್ಯಂಗಾರ್, ಪದ್ಮರಾಜು, ನಾರಾಯಣ–ಸುದರ್ಶನರ ರೂಮಿನಲ್ಲಿ ಅವರೊಂದಿಗೆ ಮಾತನಾಡುತ್ತ ಕುಳಿತರು. ಕಂಪೆನಿ ಮನೆಯಲ್ಲಿ ಮಂಕು ಕವಿಯಿತು.

"ಕಂಪೆನಿ ಮನೆಗೆ ನಾಗೋಲಿ ಮನೆ ಕಳೆ ಬಂದುಬಿಟ್ಟಿತು ಸ್ವಾಮಿ"

ಎಂದು ನಾರಾಯಣ ಹೇಳಿದ.

"ನಾಗೋಲಿ ಮನೆಯಲ್ಲ ನಾರಾಯಣ—ಸೂತಕದ ಮನೆ"

ಎಂದು ಸತ್ಯನಾಥನ್ ಹೇಳಿದರು.

ಮಾತರಿಯದ ವರದರಾಜಯ್ಯಂಗಾರ್ಯರನ್ನು ಮೂಕವೇದನೆ ಆವರಿಸಿತ್ತು.

ಸುದರ್ಶನರು ಬೆಳಿಗ್ಗೆ ಎದ್ದಕೂಡಲೆ ಸ್ನಾನ ಮಾಡಿ ತಮ್ಮ ಬಟ್ಟೆ ಬರೆಗಳು, ಪುಸ್ತಕಗಳನ್ನು ಪ್ಯಾಕ್ (Pack) ಮಾಡಿಟ್ಟರು. ಕಂಪೆನಿಯ ಚಿತ್ರ–ನಾಟಕಕ್ಕೆ ಸಂಬಂಧಪಟ್ಟ ಎಲ್ಲ ಕಾಗದಗಳನ್ನೂ ಜೋಡಿಸಿ ಕೈಯಲ್ಲಿ ತೆಗೆದುಕೊಂಡರು. ಕಾಳನನ್ನು ಕರೆದು ಒಂದು ಟ್ಯಾಕ್ಸಿ ತರಲು ಕಳಿಸಿದರು.

ನಾರಾಯಣ ಬಿಸಿ ಬಿಸಿ ಕಾಫಿ ಮಾಡಿ ತಂದುಕೊಟ್ಟು

"ಸ್ಟುಡಿಯೋ ಹತ್ತಿರ ಹೋಗಿ ಬರುತ್ತೀರಾ ಸ್ವಾಮಿ."

"ಹೂ! ಹೋಗಿ ಎಲ್ಲಾರಿಗೂ ಹೇಳಿ ಬರುತ್ತೇನೆ."

"ಅಡಿಗೆ ಮಾಡಿರುತ್ತೇನೆ. ಬಂದು ಊಟಮಾಡಿಕೊಂಡು ಪ್ರಯಾಣ ಮಾಡಬೇಕು."

"ಊಟಕ್ಕೆ ಹೊತ್ತಿಲ್ಲಿದೆ ನಾರಾಯಣ."

"ಸೇರಿದಷ್ಟು–ಒಂದು ತುತ್ತು ಮೊಸರನ್ನವಾದರೂ ನೀವು ತಿನ್ನದೆ ಹೋದರೆ ನನಗೆ ಸಮಾಧಾನವಾಗುವುದಿಲ್ಲ."

" ಹಾಗೇ ಆಗಲಪ್ಪಾ " ಎಂದರು.

ಕಂಪೆನಿ ಆಫೀಸಿನಲ್ಲಿ ಸಾಹುಕಾರರು, ಮುರಿಗೆಯ್ಯ ಸುದರ್ಶನರ ದಾರಿ ನೋಡುತ್ತಾ ಕುಳಿತಿದ್ದರು.

ಸುದರ್ಶನರು ಹೋಗಿ ಕುಳಿತ ಒಡನೆಯೇ ಮುರಿಗೆಯ್ಯ ಅವರ ಲೆಕ್ಕದ ಪಟ್ಟಿ ಮುಂದಿಟ್ಟ.

" ಇದುವರೆಗೆ ನಿಮಗೆ ಮೂರು ಸಾವಿರದ ಮುನ್ನೂರು ಪಾವತಿಯಾಗಿದೆ. ಏಳುನೂರು ಕೊಡಬೇಕು."

ಎಂದು ಹೇಳಿ ಏಳುನೂರು ರೂಪಾಯಿಯನ್ನೂ ಸ್ಟ್ಯಾಂಪ್ ಹಚ್ಚಿದ ರಶೀತಿಯನ್ನೂ ಸುದರ್ಶನರ ಮುಂದಿಟ್ಟ. ಸುದರ್ಶನರು ಹಣ ಮುಟ್ಟದೆ

" ಮುರಿಗೆಯ್ಯನವರೇ, ನನ್ನ ಫರ್ನೀಚರ್ ಬಾಡಿಗೆ ಎಷ್ಟಾಗಿದೆ ನೋಡಿ. ಫರ್ನೀಚರ್ ಬಾಡಿಗೆ ಮತ್ತು ಇಷ್ಟು ದಿವಸ ನನ್ನ ಊಟ ತಿಂಡಿ ಖರ್ಚನ್ನು ಮುರಿದುಕೊಳ್ಳಿ"

ಎಂದರು. ಸಾಹುಕಾರರ ಮುಖ ಚಿಕ್ಕದಾಯಿತು. ಅವರ ಧ್ವನಿಯಲ್ಲಿ ಗದ್ಗದ ಕಾಣಿಸಿಕೊಂಡಿತು. ಕಣ್ಣಲ್ಲಿ ನೀರೇ ಬಂತು.

" ನಮ್ಮನ್ನ ಇಷ್ಟು ಕಳಪೆ ಮಾಡಬಾರದು ಸ್ವಾಮಿ."

" ಕಳಪೆ ಮಾಡ್ಲಿಲ್ಲ ಸಾಹುಕಾರರೇ, ಲೆಕ್ಕಾಚಾರಕ್ಕೆ ಬಂದಮೇಲೆ ಎಲ್ಲವೂ ಲೆಕ್ಕಾಚಾರವಾಗಿಯೇ ಆಗಬೇಕಲ್ಲವೇ ? "

ಸಾಹುಕಾರರಿಗೇನು ಮನಸ್ಸು ಬಂದಿತೋ ತಮ್ಮ ಪರ್ಸಿನಿಂದ ಮುನ್ನೂರು ರೂಪಾಯಿ ತೆಗೆದು ಮುರಿಗೆಯ್ಯ ಮೇಜಿನ ಮೇಲಿಟ್ಟಿದ್ದ ಏಳು ನೂರಕ್ಕೆ ಸೇರಿಸಿ ಸುದರ್ಶನರ ಕಿಸೆಯಲ್ಲಿಟ್ಟರು. ರಶೀತಿಯನ್ನು ಮುರಿಗೆಯ್ಯ ನಿಗೆ ಹಿಂದಿರುಗಿಸಿದರು.

ಸುದರ್ಶನರು ಎದ್ದು ನಿಂತು

" ಅಪ್ಪಣೆಯಾದರೆ ಬರುತ್ತೇನೆ. ಎಲ್ಲರನ್ನೂ ಕಂಡು ಹೇಳಿ ಹೋಗ ಬೇಕಾಗಿದೆ."

ಬಾಯಿತುಂಬ ನಾಲ್ಕು ಒಳ್ಳೆಯ ಮಾತನಾಡಬೇಕೆಂದು ಸಾಹುಕಾರರ ಮನಸ್ಸು ಬಯಸುತ್ತಿತ್ತು. ಆದರೆ ಬಾಯಿಂದ ಮಾತುಗಳು ಹೊರಡಲಿಲ್ಲ.

ಸುದರ್ಶನರು ಮನೆಯ ಒಳಗೆ ಬಂದು ಪಾರ್ವತಿ, ಚೂಡಾಮಣಿ ಕಾಂತಿಮತಿಯರಿಗೆ ತಿಳಿಸಿ ಭಾಗ್ಯಮ್ಮನನ್ನು ನೋಡಿ

" ಹೋಗಿ ಬರುತ್ತೇನಮ್ಮ— ವಿಶ್ವಾಸವಿರಲಿ." ಎಂದರು.

" ಒಳ್ಳೆಯದಪ್ಪಾ."

" ನಿಮ್ಮ ವಿಷಯದಲ್ಲಿ ನಾನು ಏನಾದರೂ ಅಪರಾಧಮಾಡಿದ್ದರೆ ಕ್ಷಮಿಸಿ.'

" ಛೆ! ಛೆ! ನೀವೇನಪ್ಪಾ ಅಪರಾಧ ಮಾಡಿರುವುದು." ಎಂದು ಹೇಳಿದಳು

" ಸರೋಜಮ್ಮ ಇಲ್ಲವೇ ? "

" ಇಲ್ಲ – ಚಿನ್ನಪ್ಪನ ಸಂಗಡ ಪೇಟೆಗೆ ಹೋಗಿದ್ದಾಳೆ."

" ಅವರಿಗೂ ಹೇಳಿಬಿಡಿ."

ಎಂದು ಸ್ಟೂಡಿಯೋ ಒಳಗೆ ಬಂದರು.

ತಮ್ಮ ಚಿತ್ರದ ಸೆಟ್ಟುಗಳು ಜೋಡಿಸಲ್ಪಟ್ಟಿದ್ದ ಥಿಯೇಟರ್ ಪ್ರವೇಶಿಸಿದರು. 'ಪಟ್ಟಾಭಿಷೇಕ'ದ ಸೆಟ್ಟುಗಳು ಇರಲಿಲ್ಲ, ಸ್ಟೂಡಿಯೋ ಕೆಲಸಗಾರರು ಬೇರೆ ಚಿತ್ರದ ಸೆಟ್ ಹಾಕುವುದರಲ್ಲಿ ನಿರತರಾಗಿದ್ದರು.

ಅಲ್ಲಿಯೇ ನಿಂತು ತಮ್ಮ ಸೆಟ್ಟುಗಳಿದ್ದ ಕಡೆ ಸುದರ್ಶನರು ನೋಡಿದರು.

'ನನ್ನ ರಾಮ, ವಶಿಷ್ಠ, ಭರತ—ಕೈಕಾ, ಕೌಸಲ್ಯೆ, ಸೀತೆ—ಗುಹ, ಸುಮಂತ್ರ, ದಶರಥ ಇವರು ಹಾದು ಹೋದ ಸ್ಥಳವಲ್ಲವೇ ಇದು. ರಾಮನನ್ನು ಅರಣ್ಯವಾಸಕ್ಕೆ ಕಳಿಸಬೇಡವೆಂದು ಕೌಸಲ್ಯೆ ಮೊರೆಯಿಟ್ಟ ಸ್ಥಳವಲ್ಲವೇ ಇದು– ರಾಮನನ್ನಗಲಿದ ದಶರಥ ಹಲುಬಿ ಮೃತ್ಯುವಶನಾದುದು ಇಲ್ಲೇ ಅಲ್ಲವೇ ?'

ಎಂದುಕೊಂಡರು. ಚಿತ್ರದ ದೃಶ್ಯಗಳು ಬಿಡಿಬಿಡಿಯಾಗಿ ಎದುರಿಗೆ ಸಾಗಿದವು. ಸೆಟ್ಟಿನಲ್ಲಿ ಮೈಮರೆತು ನಿಂತಿದ್ದ ಸುದರ್ಶನರನ್ನು ಆರ್ಟ್ ಡೈರೆಕ್ಟರ್ ಬಾಲಮೂರ್ತಿ ಮಾತನಾಡಿಸಿದಾಗಲೇ ಎಚ್ಚರ

" ಏನು ಸಾರ್ – ಇಲ್ಲಿ ನಿಂತಿರುವಿರಿ ? "

" ನಿಮ್ಮನ್ನೇ ನೋಡಲು ಬಂದೆ ಬಾಲಮೂರ್ತಿ. ಸ್ಟೂಡಿಯೋನಲ್ಲಿ ಯಾರು ಯಾರು ಇದ್ದಾರೆ ? "

" ವೆಂಕಟಾಚಲಂ, ಸುಬ್ಬಯ್ಯರ್, ಛಾಯಾಪತಿ ಬಂದಿಲ್ಲ. ರಾಮಾನುಜಂ ಆಫೀಸಿನಲ್ಲಿರಬಹುದು."

" ಲ್ಯಾಬೊರೇಟರಿಯಲ್ಲಿ ಚಂದ್ರಶೇಖರನ್ ಇದ್ದಾರೆಯೇ "

" ಇರಬಹುದು. ಬನ್ನಿ ನೋಡೋಣ."

ಎಂದು ಬಾಲಮೂರ್ತಿ ಲ್ಯಾಬೊರೇಟರಿಗೆ ಕರೆದುಕೊಂಡು ಬಂದ. ಅಲ್ಲಿ ಸುದರ್ಶನರು ತಾವು ಊರಿಗೆ ಹೊರಡುವ ವಿಷಯ ಬಾಲಮೂರ್ತಿಗೂ, ಚಂದ್ರಶೇಖರನ್‌ಗೂ ತಿಳಿಸಿ

" ವೆಂಕಟಾಚಲಂ, ಸುಬ್ಬಯ್ಯರ್, ಛಾಯಾಪತಿಗಳನ್ನು ನೋಡ ಲಾಗಲಿಲ್ಲ. ನೀವು ಅವರಿಗೆ ದಯೆಯಿಟ್ಟು ಹೇಳಿಬಿಡಿ."

" ಆಗಲಿ ಸಾರ್. ಈ ಎಕ್ಸ್‌ಪ್ರೆಸ್ಸಿಗೆ ಹೊರಡುವಿರಾ ? "

" ಹೂ ! ಟಿಕೆಟ್ಟೂ ತೆಗೆಸಿದ್ದೇನೆ. ನಿಮ್ಮೆಲ್ಲರ ಸಹಕಾರಕ್ಕೆ ನಾನು ಬಾಯಿಉಪಚಾರ ಹೇಳಲಾರೆ. ವಿಶ್ವಾಸವಿರಲಿ – ಬೆಂಗಳೂರಿಗೆ ಬಂದರೆ ನಮ್ಮ ಮನೆಗೆ ಖಂಡಿತ ಬನ್ನಿ"

ಇಬ್ಬರೂ ಮೌನವಾಗಿ ಒಪ್ಪಿಗೆಯಿತ್ತರು.

ಸುದರ್ಶನರು ಹೊರಡುವ ವಿಷಯಕೇಳಿ ರಾಮಾನುಜಂ ಚಕಿತರಾದರು.

" ಇದೇನು ಸಾರ್, ಇಷ್ಟು ಬೇಗ ಹೊರಟುಬಿಟ್ಟಿರಿ. ನಿಮ್ಮ ಚಿತ್ರ ಎಡಿಟಿಂಗ್ ಮುಗಿದಿಲ್ಲ."

" ಮುಗಿಯತ್ತೆ. ಮಹಾದೇವಯ್ಯ ನೋಡಿಕೊಳ್ಳುತ್ತಾರೆ. ಊರಿನಲ್ಲಿ ನನಗೆ ತುಂಬ ಕೆಲಸವಿದೆ. ಹೊರಡಲೇ ಬೇಕಾಗಿದೆ "

" ನಿಮ್ಮನ್ನು ನಿಲ್ಲಿಸಿಕೊಳ್ಳಲು ನಿಮ್ಮ ಕಂಪೆನಿಯವರು ಪ್ರಯತ್ನಿಸ ಲಿಲ್ಲವೇ ? "

" ನಾನಿದ್ದು ಮಾಡಬೇಕಾದ್ದು ಏನೂ ಇಲ್ಲ ರಾಮಾನುಜಂ ಅವರೇ "

" ಎಲ್ಲಾ ನಾನು ಬಲ್ಲೆ ಸಾರ್. ನಿಮ್ಮಂಥವರು ಹೀಗೆ ಮನನೊಂದು ಹೋಗುತ್ತಿರುವುದು ಶ್ರೇಯಸ್ಕರವಲ್ಲ. ನಾನೊಂದು ಮಾತು ಹೇಳುತ್ತೇನೆ ಕೇಳುವಿರಾ ? "

" ಏನು ಹೇಳಿ."

" ನೀವು ಇಲ್ಲೇ ಇದ್ದು ಬಿಡಿ – ಹೋಗಬೇಡಿ. ನಮ್ಮ ಸ್ಟೂಡಿಯೋಕ್ಕೆ ನಿಮ್ಮಂಥವರು ಒಬ್ಬರ ಆವಶ್ಯಕತೆಯಿದೆ. ಮನೆಕೊಡುತ್ತೇನೆ, ಕೈತುಂಬ ಸಂಬಳವನ್ನೂ ಕೊಡುತ್ತೇನೆ, ಇಲ್ಲೇ ಇದ್ದುಕೊಂಡು ನಮ್ಮ ಪ್ರೊಡಕ್ಷನ್‌ಗಳಿಗೆ ಸಹಾಯಮಾಡಿ."

" ಕೇವಲ ಹಣ ಮಾಡುವುದು ನನ್ನ ಜೀವನದ ಗುರಿಯಲ್ಲ ರಾಮಾ ನುಜಂ. ಕನ್ನಡ ಚಿತ್ರದ ಸಲುವಾಗಿ ನಾನು ಸಾಹಿತ್ಯವನ್ನು ಬದಿಗಿಟ್ಟು ಇಲ್ಲಿಗೆ ಬರಬೇಕಾಯಿತು. ಬಂದುದಕ್ಕೆ ನಷ್ಟವೇನೂ ಆಗಲಿಲ್ಲ – ನಿಮ್ಮೆಲ್ಲರ ಪರಿಚಯವಾಯಿತು. ನಿಮ್ಮ ವಿಶ್ವಾಸಕ್ಕೆ ತುಂಬ ಋಣಿಯಾಗಿದ್ದೇನೆ."

" ಊರಿಗೆ ಹೊರಟಿರುವವರನ್ನು ನಿಲ್ಲಿಸುವುದು ನ್ಯಾಯವಲ್ಲ. ಊರಿಗೆ ಹೋದ ಮೇಲೆ ನೀವು ಮನಸ್ಸು ಬದಲಾಯಿಸುವ ಸಂಭವವಿದ್ದರೆ ತಿಳಿಸಿ – ಕೂಡಲೆ ಹೊರಟು ಬಂದರೂ ಅಡ್ಡಿಯಿಲ್ಲ."

" ಹಾಗೇ ಆಗಲಿ – ಚೆಟ್ಟಿಯಾರರನ್ನು ನೋಡಲಿಲ್ಲವಲ್ಲಾ."
" ಅವರು ಊರಿನಲ್ಲಿಲ್ಲ. ಬಂದ ಕೂಡಲೆ ತಿಳಿಸುತ್ತೇನೆ."
" ಇನ್ನು ಅಪ್ಪಣೆಕೊಡಿ."
" ಕಾರು ತರಿಸಿಕೊಡುತ್ತೇನೆ ತಡೆಯಿರಿ."
" ಬೇಡಿ – ಜತೆಯಲ್ಲಿ ಟ್ಯಾಕ್ಸಿ ತಂದಿದ್ದೇನೆ."
ಎಂದು ಹೇಳಿದರು. ರಾಮಾನುಜಂ ಸುದರ್ಶನರ ಕೈಕುಲುಕಿ
" Godspeed and good luck Sir " ಎಂದರು.
" Thank you Sir."
ಎಂದು ಸುದರ್ಶನರು ಉತ್ತರಿಸಿದರು.

ಸುದರ್ಶನರ ದಾರಿ ನೋಡುತ್ತ ನಾರಾಯಣ ಕಾದಿದ್ದ. ಅವರು ಬಂದಕೂಡಲೆ ಎಲೆಹಾಕಿ ಉಪಚಾರಮಾಡಿ ಬಡಿಸಿದ. ಜತೆಯಲ್ಲಿ ಸತ್ಯನಾಥನ್, ವರದರಾಜಯ್ಯಂಗಾರ್, ಪದ್ಮರಾಜು ಮಾತನಾಡುತ್ತ ಕುಳಿತರು.

ಊಟ ಮುಗಿದ ಮೇಲೆ ಎಲ್ಲರಿಗೂ ತಿಳಿಸಿ ಬರಲು ಸುದರ್ಶನರು ಅವರ ರೂಮುಗಳಿಗೆ ಹೋದರು ಯಾರ ಸುಳಿವೂ ಕಾಣಲಿಲ್ಲ.

"ಎಲ್ಲಿ ರಾಜಣ್ಣ – ಯಾರೂ ಇಲ್ಲ" ಎಂದರು.
"ಎಲ್ಲಿಗೆ ಹೋದರೋ ಸ್ವಾಮಿ. ನಾನು ಕಾಣೆ."
"ಆಗಲಿ – ಈಶ್ವರೇಚ್ಛೆ"
ಎಂದು ನಿಟ್ಟುಸಿರುಬಿಟ್ಟರು.

ಕಾಳ ಸಾಮಾನುಗಳನ್ನು ತೆಗೆದುಕೊಂಡು ಟ್ಯಾಕ್ಸಿಯಲ್ಲಿಟ್ಟ. ಸುದರ್ಶನರು ತಮ್ಮ ಸೂಟ್‌ಕೇಸ್ ತೆಗೆದು ಅದರೊಳಗಿಂದ ಕೆಲವು ಬಟ್ಟೆಗಳನ್ನು ಹೊರಗೆ ತೆಗೆದುಕೊಂಡರು. ನಾರಾಯಣ, ಸುಬ್ಬ ಇಬ್ಬರನ್ನೂ ಹತ್ತಿರ ಕರೆದು ಅವರಿಗೆ ಒಂದೊಂದು ಜತೆ ಪಂಚೆ, ನಗದು ಐವತ್ತು ರೂಪಾಯಿಕೊಟ್ಟರು. ಕಾಳನಿಗೆ ಒಂದು ಜತೆ ಪಂಚೆ, ಇಪ್ಪತ್ತೈದು ರೂಪಾಯಿಕೊಟ್ಟರು.

ನಾರಾಯಣ, ಸುಬ್ಬ, ಕಾಳ ಮಕ್ಕಳಂತೆ ಅಳುತ್ತಾ ಸುದರ್ಶನರ ಪಾದಮುಟ್ಟಿ ನಮಸ್ಕರಿಸಿದರು.

ಸತ್ಯನಾಥನ್, ವರದರಾಜಯ್ಯಂಗಾರ್, ಪದ್ಮರಾಜು, ಸುದರ್ಶನರ ಜತೆಗೆ ಟ್ಯಾಕ್ಸಿಯಲ್ಲಿ ಸ್ಟೇಷನ್ನಿಗೆ ಹೊರಟರು.

ಸ್ಟೇಷನ್ನಿನಲ್ಲಿ ವಾದ್ಯಗೋಷ್ಠಿಯ ತಂಡವೆಲ್ಲಾ ನೆರೆದಿತ್ತು. ಗೋಷ್ಠಿಯ ಪರವಾಗಿ ವಿನಾಯಗಂ ಸುದರ್ಶನರಿಗೆ ಹಾರ ಹಾಕಿದ. ಅವರೊಂದಿಗೆ

ಸುದರ್ಶನರು ಮಾತನಾಡುತ್ತ ನಿಂತಿದ್ದಂತೆ ವೆಂಕಟಾಚಲಂ, ಸುಬ್ಬಯ್ಯರ್, ಛಾಯಾಪತಿ ಓಡಿಬಂದರು. ವೆಂಕಟಾಚಲಂ ಕೈಯಲ್ಲಿದ್ದ ಹಾರವನ್ನು ಸುದರ್ಶನರ ಕೊರಳಿಗೆ ಹಾಕಿದರು. ಸುಬ್ಬಯ್ಯರ್ ಒಂದು ಸಣ್ಣ ಬುಟ್ಟಿಯನ್ನು ಸುದರ್ಶನರ ಡಬ್ಬಿಯಲ್ಲಿ ಅವರ ಸೀಟಿನ ಮೇಲಿಟ್ಟರು.

"ಅದೇನು ಸುಬ್ಬಯ್ಯರೇ ?"

"ದಾರೀಗೆ ಸ್ವಲ್ಪ ತಿಂಡಿ."

ಹೊರಗಿನವರೆನಿಸಿಕೊಂಡ ಈ ಗೆಳೆಯರ ವಿಶ್ವಾಸ, ಅಂತಃಕರಣ ನೋಡಿ ಸುದರ್ಶನರಿಗೆ ದುಃಖವುಕ್ಕಿಬಂತು. ಎಲ್ಲರ ಕಣ್ಣಲ್ಲಿಯೂ ನೀರೂರಿತು. ವರದರಾಜಯ್ಯಂಗಾರ್ಯರು ಬಿಕ್ಕಿಬಿಕ್ಕಿ ಅಳುವುದಕ್ಕಾರಂಭಿಸಿದರು.

ಸುದರ್ಶನರು ಸುತ್ತಲೂ ಒಮ್ಮೆ ನೋಡಿದರು. ಅವರ ಕಣ್ಣು ಯಾರನ್ನೋ ಹುಡುಕುತ್ತಿತ್ತು. 'ಕಂಪೆನಿಯವರು ಒಬ್ಬರಾದರೂ ಬರಬೇಡವೇ ?' ಎಂದು ಮನಸ್ಸು ಮೊರೆಯುತ್ತಿತ್ತು.

ಮೊದಲನೆಯ ಗಂಟೆ ಬಾರಿಸಿತು. ಸುದರ್ಶನರು ತಮ್ಮ ಕಂಪಾರ್ಟ್‌ಮೆಂಟಿನ ಮುಂದೆ ನಿಂತರು.

ಚಿನ್ನಪ್ಪ, ಸರೋಜ ಸಡಗರದಿಂದ ಓಡಿಬರುವುದು ಕಂಡಿತು. ಚಿನ್ನಪ್ಪ ಗಾಡಿಯ ಒಳಗೆ ಹತ್ತಿ ಕೈಯಲ್ಲಿದ್ದ ಬುಟ್ಟಿಯನ್ನಲ್ಲಿಟ್ಟು ಹೊರಗೆ ಬಂದು ಸುದರ್ಶನರ ಕೊರಳಿಗೆ ಹಾರಹಾಕಿ ಅವರ ಪಾದಮುಟ್ಟಿ ನಮಸ್ಕರಿಸಿದ. ಸರೋಜನೂ ನಮಸ್ಕರಿಸಿದಳು.

"ಇದೇನಮ್ಮ–ಚಿನ್ನಪ್ಪನವರೇ ಏನಿದು ?"

"ಏನೂ ಇಲ್ಲ ಸ್ವಾಮಿ–ನಮ್ಮ ಅಪರಾಧ ಕ್ಷಮಿಸಿ"

"ಸರಸ್ವತೀಗೆ ನಾವು ದ್ರೋಹಮಾಡಿದೆವು ಸ್ವಾಮಿ."

ಎಂದು ಸರೋಜ ನುಡಿದಳು. ಸುದರ್ಶನರು ತಮ್ಮ ದುಃಖ ತಡೆದುಕೊಂಡು

"ಏನೂ ಇಲ್ಲ ತಾಯಿ. ನಿಶ್ಚಿಂತಳಾಗಿರು."

ಎಂದು ಸಮಾಧಾನ ಹೇಳಿದರು.

ಎರಡನೆಯ ಗಂಟೆ ಬಾರಿಸಿತು. ಸತ್ಯನಾಥನ್, ವರದರಾಜಯ್ಯಂಗಾರ್ ಸುದರ್ಶನರನ್ನು ಬಿಗಿದಪ್ಪಿದರು. ಅವರಿಂದ ಬಿಡುಗಡೆ ಹೊಂದಿ ಸುದರ್ಶನರು ಗಾಡಿಹತ್ತಿದರು. ಗಾಡಿ ಮುಂದಕ್ಕೆ ಸಾಗಿತ್ತು. ಪ್ಲಾಟ್‌ಫಾರ್ಮಿನ ಮೇಲೆ ನಿಂತು ಕಂಬನಿಗರೆಯುತ್ತ ಬಳಗವನ್ನು ನೋಡುತ್ತ ಸುದರ್ಶನರು ನಿಂತರು. ಅವರ ಕಣ್ಣಲ್ಲಿಯೂ ಪ್ರವಾಹ ಹೊರಟಿತ್ತು. ನಾಲ್ಕು ದಿನದ ಸಹವಾಸ–ಅದರೆಂಥ ಮೈತ್ರಿ ಎಂದು ಸುದರ್ಶನರ ಮನಸ್ಸು ಮೊರೆಯಿತು.

## ೩೦

ಚಿತ್ರದ ಷೂಟಿಂಗ್ ಮುಗಿಯುತ್ತ ಬಂತು. ಕೆಲವು ಮೂಕ ಸ್ನೋಟ ಗಳಿದ್ದವು. ಅವುಗಳನ್ನು ಲೈಬ್ರರಿಯಿಂದ ತೆಗೆದುಕೊಳ್ಳುವುದೆಂದು ಭೂಪೆನ್ ಬಾಬು ನಿರ್ಧರಿಸಿದರು. ನಟರನ್ನೂ, ವಾದ್ಯಗೋಷ್ಠಿಯವರನ್ನೂ ಮನೆಗೆ ಕಳುಹಿಸಲಾಯಿತು. ಸತ್ಯನಾಥನ್, ವರದರಾಜಯ್ಯಂಗಾರ್ ತಮ್ಮ ಲೆಕ್ಕ ಬಗೆಹರಿಸಿಕೊಂಡು 'ಕಂಪೆನಿ ಮನೆ' ಬಿಟ್ಟರು. ನಾರಾಯಣ, ಸುಬ್ಬ ಮದರಾಸು ಬಿಟ್ಟು ಕೋಲಾರಕ್ಕೆ ಬಂದು ಒಂದು ಹೊಟೇಲ್ ತೆಗೆಯುವ ಪ್ರಯತ್ನಮಾಡಲಾರಂಭಿಸಿದರು. ಪದ್ಮರಾಜು ಯಥಾಪ್ರಕಾರ ಮೈಸೂರಿಗೆ ಹಿಂದಿರುಗಿ ಸ್ಟೂಡಿಯೋ ಬಾಗಿಲು ಕಾಯಲಾರಂಭಿಸಿದ.

ಶಾಮಲಾಬಾಯಿ ಕಾಂಟ್ರ್ಯಾಕ್ಟಿನ ಹಣ, ಫ್ಲೋರೀಟಾ, ಪೆಟ್ರೋಲ್ ಖರ್ಚು, ಮೇಕಪ್ ಮಾಡಿಕೊಂಡುದರ ಖರ್ಚು, ಮನೆಯವೆಚ್ಚ ಎಲ್ಲಾ ಸೇರಿಸಿ ಒಟ್ಟು ಮೂವತ್ತಾರು ಸಾವಿರ ರೂಪಾಯಿ ವಸೂಲ್ಮಾಡಿಕೊಂಡು ಮುಂಬಯಿಗೆ ಹೊರಟುಬಿಟ್ಟಳು.

ಸ್ಟೂಡಿಯೊ ಮನೆಗೆ ಶಿವಾನಂದ, ಮಹಾದೇವಯ್ಯ ಬಂದು ನಿಂತರು.

ಚಿತ್ರದ ಎಡಿಟಿಂಗ್, ಸೆನ್ಸಾರ್‌ಷಿಪ್ ಮಾತ್ರ ಬಾಕಿ ಉಳಿದಿತ್ತು. ವಿಜಯದಶಮಿ ದಿನ ಏಕಕಾಲ ಪ್ರದರ್ಶನ (Simultanous Release) ಮಾಡಿಸಲು ಚಿನ್ನಪ್ಪ ಬೆಂಗಳೂರು, ಮೈಸೂರು, ಮಂಗಳೂರು, ಹುಬ್ಬಳ್ಳಿ, ಧಾರವಾಡ, ಬೆಳಗಾಂವಿ, ವಿಜಾಪುರ, ಗದಗು, ಬಾಗಲುಕೋಟೆ, ಬಳ್ಳಾರಿ, ಅನಂತಪುರಗಳ ಕಡೆ ಪ್ರವಾಸ ಹೊರಟ.

ನಾಮನಿರ್ದೇಶನದ ಪಟ್ಟಿ (Title Card) ಸಿದ್ಧಗೊಳಿಸುವ ಕೆಲಸ ವನ್ನು ಮಹಾದೇವಯ್ಯನಿಗೆ ಸಾಹುಕಾರರು ವಹಿಸಿದ್ದರು.

ಅವನು ಸಿದ್ಧಗೊಳಿಸಿದ ಪಟ್ಟಿಯನ್ನು ಸಾಹುಕಾರರು, ಡೈರೆಕ್ಟರು. ಮುರಿಗೆಯ್ಯ ಪರಾಮರ್ಶಿಸಿ ಒಪ್ಪಿಗೆ ಕೊಟ್ಟರು.

**ಸಾಹುಕಾರ್ ಶ್ರೀ ಜಿ. ಎಸ್. ರುದ್ರಪ್ಪನವರ**
**ಶ್ರೀಶೈಲ ಪಿಕ್ಚರ್ ಪ್ರೊಡಕ್ಷನ್ಸ್ ಅವರ**
**ಅನೋಘ ಕಲಾಕೃತಿ**

**ಶ್ರೀರಾಮ ಪಾದುಕಾ ಪಟ್ಟಾಭಿಷೇಕ**

ದಿಗ್ದರ್ಶನ : ಭೂಪೇಂದ್ರ ಭಟ್ಟಾಚಾರ್ಯರು
ಸಂಗೀತ : ಸತ್ಯನಾಥನ್

ಸಹಾಯಕರು : ಎನ್. ಮಹಾದೇವಯ್ಯ
ವಾದ್ಯಗೋಷ್ಠಿ : ವರದರಾಜಯ್ಯಂಗಾರ್
ಕಥೆ : ಭೂಪೇಂದ್ರ ಭಟ್ಟಾಚಾರ್ಯರು
ಗೀತೆಗಳು : ಮಹಾದೇವಯ್ಯ
ಸಂಭಾಷಣೆ : ಸುದರ್ಶನ
ಕ್ಯಾಮೆರಾ : ವೆಂಕಟಾಚಲಂ
ರಿಕಾರ್ಡಿಂಗ್ : ಸುಬ್ಬಯ್ಯರ್
ಆರ್ಟ್ ಡೈರೆಕ್ಟರ್ : ಬಾಲಮೂರ್ತಿ
ಎಡಿಟರ್ : ಛಾಯಾಪತಿ
ಲ್ಯಾಬೊರೇಟರಿ : ಚಂದ್ರಶೇಖರನ್
ಮೇಕಪ್ : ದಾದಾ ಪರಾಡ್ಕರ್
ಪ್ರೊಡಕ್ಷನ್ ಚೀಫ್ : ವಿಶ್ವನಾಥಂ

## ಅಭಿನಯ ವರ್ಗ

| | | |
|---|---|---|
| ಕೈಕೇಯಿ | : | ಸರೋಜಾದೇವಿ |
| ಮಂಥರೆ | : | ಭಾಗ್ಯಮ್ಮ |
| ಸೀತೆ | : | ಪಾರ್ವತಿ |
| ಸುಮಿತ್ರೆ | : | ಚೂಡಾಮಣಿ |
| ಕೌಸಲ್ಯೆ | : | ಶಾಮಲಾಬಾಯಿ |
| ಭರತ | : | ಶಿವಾನಂದ |
| ಶತ್ರುಘ್ನ | : | ಮಹಂತಯ್ಯ |
| ಗುಹ | : | ಚಿನ್ನಪ್ಪ |
| ರಾಮ | : | ಚಕ್ರವರ್ತಿ |
| ಲಕ್ಷ್ಮಣ | : | ಪದ್ಮರಾಜು |
| ದಶರಥ | : | ಸಿದ್ಧವೀರಪ್ಪ |
| ಸುಮಂತ್ರ | : | ಜೀವಣ್ಣರಾಯ |
| ವಶಿಷ್ಠ | : | ರಾಜಣ್ಣ |

ಮೇಲ್ವಿಚಾರಣೆ : ಮುರಿಗೆಯ್ಯ
ಪ್ರೊಡಕ್ಷನ್ ಮ್ಯಾನೇಜರ್ : ಚಿನ್ನಪ್ಪ
ಸ್ಟೂಡಿಯೋ : ಶ್ರೀ ಕಾರ್ತಿಕೇಯ ಸೌಂಡ್ ಸ್ಟೂಡಿಯೋ. ಮದರಾಸು.

---

ಪ್ರತಿನಿತ್ಯ ಎಡಿಟಿಂಗಿಗೆ ಭೂಪೆನ್‌ಬಾಬು, ಮಹಾದೇವಯ್ಯ, ಸಾಹುಕಾರರು ಕುಳಿತುಕೊಳ್ಳುತ್ತಿದ್ದರು. ಶಾಮಲಾಬಾಯಿಯ 'ಕ್ಲೋಸಪ್' (Close-up) ಗಳನ್ನು ಕತ್ತರಿಸಿ ಬಿಸುಡಿದರು; ಶಾಮಲಾಬಾಯಿಯ ಒಂದು ಹಾಡೂ ಹಾರಿಹೋಯಿತು.

ಚಿನ್ನಪ್ಪ ಆರಂಭೋತ್ಸವದ ವ್ಯವಸ್ಥೆ ಮಾಡಿಕೊಂಡು ಮದರಾಸಿಗೆ ಬಂದು, ಸ್ಟೂಡಿಯೋ ಲೆಕ್ಕ ನೋಡಿದ. ರಾಮಾನುಜಂ ನಿರ್ದಾಕ್ಷಿಣ್ಯವಾಗಿ ಲೆಕ್ಕ ಸಿದ್ಧಗೊಳಿಸಿ ನಲವತ್ತು ಸಾವಿರ ರೂಪಾಯಿಗಳಿಗೇರಿಸಿದ್ದರು. ಸಾಹುಕಾರರ ಚೌಕಾಸಿ ಏನೂ ನಡೆಯಲಿಲ್ಲ. ವಿಧಿಯಿಲ್ಲದೆ ಹಣ ತೆತ್ತು ಪಿಕ್ಚರಿನ 'ಸೆನ್ಸಾರ್' ಮುಗಿಸಿಕೊಂಡು ಪರಿವಾರ ಬೆಂಗಳೂರಿಗೆ ಪ್ರಯಾಣ ಬೆಳಸಿತು.

ವಿಜಯದಶಮಿ ದಿನದಿಂದ ಚಿತ್ರ 'ಶ್ರೀಶೈಲ ಥಿಯೇಟರ್' ನಲ್ಲಿ ಆರಂಭಿಸುವುದೆಂದು ಪ್ರಕಟಿಸಲಾಗಿತ್ತು. ಮಹಾನವಮಿಯ ಬೆಳಿಗ್ಗೆ ಚಿನ್ನಪ್ಪ ಥೀಯೇಟರಿನಲ್ಲಿ ಒಂದು 'ಪ್ರೆಸ್ ಷೋ' (Press Show) ವ್ಯವಸ್ಥೆಮಾಡಿ ಊರಿನ ಪತ್ರಿಕಾ ಪ್ರತಿನಿಧಿಗಳು, ಸಾಹಿತ್ಯ ಕಲಾ ಭಕ್ತರು, ದೊಡ್ಡ ಮನುಷ್ಯರು, ಶ್ರೀಮಂತರು, ಸರ್ಕಾರಿ ಅಧಿಕಾರಿಗಳು ಎಲ್ಲರಿಗೂ ಅಹ್ವಾನ ಕಳುಹಿಸಿದ.

ದುರ್ಗಾಷ್ಟಮಿಯ ರಾತ್ರಿ ಸುದರ್ಶನರು ಎಂದಿನಂತೆ ತಮ್ಮ ರೂಮಿನಲ್ಲಿ ಬರೆಯುತ್ತ ಕುಳಿತಿದ್ದರು. ಅವರ ತಂಗಿ ಸುಮತಿ ಬಂದು

"ಅಣ್ಣಾ, ನಿನ್ನನ್ನು ಯಾರೋ ಹುಡುಕಿಕೊಂಡು ಬಂದಿದ್ದಾರೆ" ಎಂದಳು.

"ಯಾರಮ್ಮ– ಇಷ್ಟು ಹೊತ್ತಿನಲ್ಲಿ ಬರುವವರು ?"

ಎಂದು ಎದ್ದು ಹೊರಗೆ ಬಂದರು. ಚಿನ್ನಪ್ಪನನ್ನು ಕಂಡು ಅವರಿಗೆ ಅತ್ಯಾಶ್ಚರ್ಯವಾಯಿತು. ಆದರದಿಂದ ಅವನನ್ನು ಸ್ವಾಗತಿಸಿ ಒಳಗೆ ಕರೆದೊಯ್ದು

"ಏನು ಚಿನ್ನಪ್ಪನವರೇ. ಇಷ್ಟು ಹೊತ್ತಿನಲ್ಲಿ ದಯೆಮಾಡಿಸಿದಿರಿ ?"

ಚಿನ್ನಪ್ಪ ಅಚ್ಚಾದ ಆಹ್ವಾನಪತ್ರವನ್ನು ಸುದರ್ಶನರ ಕೈಯಲ್ಲಿಟ್ಟ. ಸುದರ್ಶನರು ಅದನ್ನು ನೋಡಿಕೊಂಡು

"ಬಹಳ ಸಂತೋಷ." ಎಂದರು.

"ನಾಳೆ ನೀವು ಖಂಡಿತ ಬರಬೇಕು. ಕರೆಯುವುದಕ್ಕಾಗಿಯೇ ನಾನು ಬಂದೆ."

"ನೀವು ಬಂದದ್ದು ಬಹಳ ಸಂತೋಷ. ಆದರೆ ನಾನು ಬರುವುದಕ್ಕಾಗುವುದಿಲ್ಲ."

"ನಿಮ್ಮ ಚಿತ್ರ ನೀವೇ ನೋಡಬೇಡವೇ ?"

"ನೋಡುತ್ತೇನೆ. ಟಿಕೆಟ್ ಕೊಂಡು ನೋಡುತ್ತೇನೆ."

"ಸಾಹುಕಾರರೇ ನಿಮ್ಮನ್ನು ಕರೆಯುವುದಕ್ಕೆ ಬರಬೇಕೆಂದಿದ್ದರು."

"ಅವರಿಗೇಕೆ ತೊಂದರೆ. ನಾನು ಚಿತ್ರ ನೋಡದಿದ್ದರೆ ಏನು ನಷ್ಟವಾಗುತ್ತದೆ."

"ನಾಳೆ ನೀವು ಪ್ರೆಸ್‌ಷೋಗೆ ಬರದಿದ್ದರೆ ತಂಬ ಅಪಾರ್ಥಕ್ಕೆ ಕಾರಣವಾಗುತ್ತದೆ. ಅದು ಚಿತ್ರದ ಮೇಲೆ ಕೆಟ್ಟ ಪರಿಣಾಮವನ್ನು ಮಾಡಬಹುದು."

"ಹಾಗೇನು !"

"ಚಿತ್ರಕ್ಕೋಸ್ಕರ, ನನಗೋಸ್ಕರ ನೀವು ಬರಬೇಕು ಸ್ವಾಮಿ-"

"ನಾನು ಈಗ ಅನುಭವಿಸಿರುವುದು ಸಾಲದೇ ಚಿನ್ನಪ್ಪನವರೇ – ಇನ್ನೂ ಅನುಭವಿಸಬೇಕೆನ್ನುವಿರಾ ?"

"ನಿಮಗೆ ಸಮಾಧಾನ ಹೇಳುವ ಚೈತನ್ಯ ನನಗಿಲ್ಲ. ನೀವು ಬರಬೇಕೆಂದು ನನ್ನ ಬಯಕೆ."

"ಆಗಲಿ – ನಿಮಗಾಗಿ ಬರುತ್ತೇನೆ."

"ಬೆಳಿಗ್ಗೆ ಕಾರು ಕಳಿಸಿಕೊಡುತ್ತೇನೆ."

"ಕಾರಿನಲ್ಲಿ ಓಡಿಯಾಡುವ ಅಭ್ಯಾಸ ನನಗಿಲ್ಲ. ಗಾಡಿ ಮಾಡಿಕೊಂಡು ಬರುತ್ತೇನೆ."

" ದಯೆಯಿಟ್ಟು ತಪ್ಪಿಸಿಕೊಳ್ಳಬಾರದು."

" ಮಾತುಕೊಟ್ಟಮೇಲೆ ತಪ್ಪಿಸಿಕೊಳ್ಳುವುದಿಲ್ಲ."

ಚಿನ್ನಪ್ಪ ಮಂದಸ್ಮಿತನಾಗಿ ಸುದರ್ಶನರನ್ನು ಬೀಳ್ಕೊಂಡು ಹೊರಟ.

ಬೆಳಿಗ್ಗೆ ಶ್ರೀಶೈಲ ಥಿಯೇಟರಿನ ಮುಂದೆ ನಾಗಸ್ವರ ಮೊಳಗುತ್ತಿತ್ತು. ಸಾಹುಕಾರರು ಕರೀ ನಿಲುವಂಗಿ, ಬೂಟಾದಾರಿ ರುಮಾಲು ಹಾಕಿಕೊಂಡು ಸಡಗರ ಪಡುತ್ತಿದ್ದರು. ಸೇಠ್ ಧನರಾಜ್ ಜಗ್ಗುತ್ತಿದ್ದ ತನ್ನ ಹೊಟ್ಟೆಯ ಕೆಳಗೆ ಇಳಿಬಿದ್ದಿದ್ದ ಚಿನ್ನದ ಉಡಿದಾರವನ್ನು ಸರಿಪಡಿಸಿಕೊಳ್ಳುತ್ತ ನಿಂತಿದ್ದ. ಚಿನ್ನಪ್ಪ, ಶಿವಾನಂದ ಫುಲ್ ಸೂಟಿನಲ್ಲಿ (Full Suit) ಹಾಜರಾಗಿದ್ದರು. ಭೂಪೆನ್‌ಬಾಬು ಕರೀಸರ್ಜಿನ ಷರ್ವಾನಿ, ಬಿಳೀ ಸಿಲ್ಕಿನ ಸುರುವಾಲು, ಕಾಶ್ಮೀರಿ ಟೋಪಿ ಧರಿಸಿ ವಿಜಯೋತ್ಸಾಹದಿಂದ ವಿಜೃಂಭಿಸಿದ್ದರು. ಮಹಾದೇವಯ್ಯ ಎಲೆಯ ಮರೆಯ ಕಾಯಿಯ ಹಾಗೆ ಅಡಕಿಕೊಂಡು ಎಲ್ಲವನ್ನೂ

ಓರೆನೋಟದಲ್ಲಿ ನೋಡುತ್ತಿದ್ದ. ಮುರಿಗೆಯ್ಯ ಸಾಹುಕಾರರ ಕಡೆಗೇ ದೃಷ್ಟಿಯಿಟ್ಟುಕೊಂಡು ಒಂದೆಡೆ ನಿಂತಿದ್ದ.

ಅತಿಥಿಗಳು ಬರಲಾರಂಭಿಸಿದರು. ಸರೋಜ, ಭಾಗ್ಯಮ್ಮ, ಪಾರ್ವತಿ, ಚೂಡಾಮಣಿ, ಕಾಂತಿಮತಿ ಬಂದು ತಮಗೆ ನಿರ್ದೇಶವಾಗಿದ್ದ ಪೀಠಗಳಲ್ಲಿ ಕುಳಿತರು. ಒಂಭತ್ತೂವರೆಗೆ ಉಪಾಹಾರ, ಹತ್ತು ಗಂಟೆಗೆ ಪ್ರದರ್ಶನವೆಂದು ನಿಷ್ಕರ್ಷೆಯಾಗಿತ್ತು. ಮಾವಳ್ಳಿ ಟಿಫನ್ ರೂಮ್ಸಿನವರು ಮೇಜುಗಳನ್ನು ಸಿಂಗರಿಸಿ, ತಿಂಡಿ ತಿನಸುಗಳನ್ನು ಹರಡಿ ಅತಿಥಿಗಳ ದಾರಿ ನೋಡುತ್ತಿದ್ದರು.

ಗಂಟೆ ಒಂಭತ್ತು ಇಪ್ಪತ್ತಾದರೂ ಸುದರ್ಶನರ ಸುಳಿವಿಲ್ಲ. ಸಾಹುಕಾರರು ಅಸ್ತವ್ಯಸ್ತರಾಗಿ ಚಿನ್ನಪ್ಪನನ್ನು ಕರೆದು

"ಕಾರ್ ತೆಗೆದುಕೊಂಡು ಹೋಗಿ ಅವರನ್ನು ಕರ್ಕೊಂಡು ಬಾರಯ್ಯ" ಎಂದರು.

"ಕಾರ್ ಬೇಡ. ನಾನೇ ಬರುತ್ತೇನೆ ಎಂದರು ಸ್ವಾಮಿ. ಬರುತ್ತಾರೆ." ಎಂದ. ಸುದರ್ಶನರು ಬರುವರೋ ಇಲ್ಲವೋ ಎನ್ನುವ ಸಂದೇಹ ಸಾಹುಕಾರರನ್ನು ಕಾಡಲಾರಂಭಿಸಿತು. ಅವರು ಬರದಿದ್ದರೆ ಸಾಕೆಂದು ಮಹಾದೇವಯ್ಯ ಹಾರೈಸುತ್ತಿದ್ದ.

ಒಂಭತ್ತೂವರೆಗೆ ಸರಿಯಾಗಿ ಥಿಯೇಟರ್ ಮುಂದೆ ಬಂದು ನಿಂತ ಜಟಕಾಗಾಡಿಯಿಂದ ಸುದರ್ಶನರು ಇಳಿದರು. ಸಾಹುಕಾರರು, ಚಿನ್ನಪ್ಪ ಅವರನ್ನು ಸ್ವಾಗತಿಸಿದರು. ಶಿವಾನಂದ, ಭೂಪೆನ್‌ಬಾಬು ತಾವಾಗಿಯೇ ಬಂದು ಮಾತನಾಡಿಸಿದರು. ಸುದರ್ಶನರು ಅತಿಥಿಗಳನ್ನು ಮಾತನಾಡಿಸುತ್ತಾ ಸರೋಜ ಇದ್ದಲ್ಲಿಗೆ ಹೋಗಿ ಅವಳ ಯೋಗಕ್ಷೇಮ ವಿಚಾರಿಸಿದರು.

ಉಪಾಹಾರ ಮುಗಿದ ಮೇಲೆ ಚಿತ್ರಪ್ರದರ್ಶನ ಆರಂಭವಾಯಿತು. ಟೈಟಲ್ ಕಾರ್ಡ್ ನೋಡಿದ ಕೂಡಲೆ ಎದ್ದು ಹೋಗಬೇಕೆಂದು ಸುದರ್ಶನರಿಗೆ ಮನಸ್ಸಾಯಿತು. 'ಬಂದದ್ದಾಯಿತು– ಪೂರ್ತಿ ನೋಡಿಯೇ ಹೋಗುವ' ಎಂದು ಮನಸ್ಸು ಬಿಗಿಹಿಡಿದುಕೊಂಡು ಕುಳಿತರು.

ಪ್ರದರ್ಶನ ಮುಗಿದ ಮೇಲೆ ಸಭಿಕರಲ್ಲಿ ಕೆಲವರು ಸಾಹುಕಾರರಿಗೆ ಅಭಿನಂದನೆಗಳನ್ನರ್ಪಿಸಿದರು. ಸಾಹುಕಾರರು, ಕಂಪೆನಿಯವರು ಅಭಿನಂದನೆಗಳನ್ನು ಸ್ವೀಕರಿಸುತ್ತಾ ಪರಸ್ಪರ ಪ್ರಶಂಸೆಯಲ್ಲಿ ತೊಡಗಿದ್ದಾಗ ಸುದರ್ಶನರು ಯಾರನ್ನೂ ಮಾತನಾಡಿಸದೆ, ಯಾರ ಕಣ್ಣಿಗೂ ಬೀಳದೆ ಹೊರಟುಹೋದರು. ಸುದರ್ಶನರನ್ನು ಕಾಣಲು ಚಿನ್ನಪ್ಪ ಮಾಡಿದ ಪ್ರಯತ್ನ ಫಲಿಸಲಿಲ್ಲ.

ಮನೆ ಮುಟ್ಟಿದ ಕೂಡಲೆ ಸುದರ್ಶನರನ್ನು ರೂಮು ಸೇರಿ ಬಾಗಿಲು ಹಾಕಿಕೊಂಡು ಮಲಗಿಬಿಟ್ಟರು. ಅವರ ಕಣ್ಣುಗಳಿಂದ ನೀರು ಧಾರೆಯಾಗಿ ಹರಿಯುತ್ತಿತ್ತು. ಮನಸ್ಸಿಗೆ ಅತುಲ ವೇದನೆಯಾಗಿತ್ತು. ತಂಗಿ ಊಟಕ್ಕೆಬ್ಬಿಸಿದರೆ ಬೇಡವೆಂದರು.

ಅಂದಿನ ಸಂಜೆಯ ಪತ್ರಿಕೆಗಳಲ್ಲಿ 'ಶ್ರೀರಾಮ ಪಾದುಕಾ ಪಟ್ಟಾಭಿಷೇಕ' ಚಿತ್ರದ ವಿಮರ್ಶೆಗಳು ಪ್ರಕಟವಾದವು.

ಸಂಜೆ ಮನೆಬಿಟ್ಟು ಹೊರಬಿದ್ದು ಸುದರ್ಶನರು ಎಲ್ಲ ಪತ್ರಿಕೆಗಳನ್ನು ಕೊಂಡುಕೊಂಡು ಬಂದು ಓದಿದರು.

"ಶ್ರೀ ಶೈಲ ಪಿಕ್ಚರ್ಸ್ ಕಂಪೆನಿಯವರು 'ಶ್ರೀರಾಮ ಪಾದುಕಾ ಪಟ್ಟಾಭಿಷೇಕ' ಚಿತ್ರ ಮಾಡಲು ಹೊರಟುದನ್ನು ಕೇಳಿ ನಾವು ಸಂತೋಷ ವ್ಯಕ್ತ ಮಾಡಿದ್ದೆವು. ನಮ್ಮ ಜನರ ನೈತಿಕ ಮಟ್ಟವನ್ನು ಸುಧಾರಿಸಲು ಶ್ರೀರಾಮ, ಶ್ರೀಕೃಷ್ಣ, ಬುದ್ಧ ಮೊದಲಾದ ಮಹಾಪುರುಷರ ಆದರ್ಶವನ್ನು ಜನಗಳ ಮುಂದೆ ಎತ್ತಿಹಿಡಿಯುವುದು ಅಗತ್ಯ. ಗ್ರಂಥರಚನೆ, ನಾಟಕಗಳಿಗಿಂತಲೂ ವಾಕ್ಚಿತ್ರದಲ್ಲಿ ಈ ಕೆಲಸವನ್ನು ಯಶಸ್ವಿಯಾಗಿ ಸಾಧಿಸಲಾಗುತ್ತದೆ. ವಾಕ್ಚಿತ್ರಗಳನ್ನು ನೋಡುವವರು ಸಹಸ್ರಾರು ಮಂದಿ ಸಾಮಾನ್ಯ ಜನರು. ಅವರ ಶಿಕ್ಷಣಕ್ಕೆ ವಾಕ್ಚಿತ್ರ ಅತ್ಯುತ್ತಮ ಸಾಧನ. ಶ್ರೀ ಶೈಲ ಕಂಪೆನಿಯವರು ಈ ಚಿತ್ರದಲ್ಲಿ ಸಾಧಿಸಿರುವುದೇನು? ರಾಮನ ಆದರ್ಶವೇ, ಭರತನ ವೈರಾಗ್ಯವೇ, ಸೀತೆಯ ಪಾತಿವ್ರತ್ಯವೇ?– ಒಂದೂ ಅಲ್ಲ; ಕೀಳು ಜನಗಳ ಅಸಂಸ್ಕೃತ ಜೀವನ. ಈ ಚಿತ್ರದಲ್ಲಿ ಕೌಸಲ್ಯೆಗಾಗಲಿ, ಸೀತೆಗಾಗಲಿ ಸ್ಥಾನವಿಲ್ಲ– ಮಂಥರೆ ಪ್ರಧಾನಪಾತ್ರವಾಗಿ ವಿರಾಜಿಸುತ್ತಾಳೆ. ಗುಹನ ಮುಂದೆ ನಡೆಯುವ 'ಹೂಲೂ ಹೂಲೂ' ನೃತ್ಯ ಹೇಸಿಗೆಯನ್ನುಂಟುಮಾಡುತ್ತದೆ. ದಿಗ್ದರ್ಶನ ತೀರ ಕೆಳಮಟ್ಟದ್ದು, ಚಿತ್ರದಲ್ಲಿ ಸ್ವಲ್ಪ ಸಮಾಧಾನವನ್ನುಂಟುಮಾಡುವ ಅಂಶವೆಂದರೆ ಸುದರ್ಶನರ ಸಂಭಾಷಣೆ, ಸತ್ಯನಾಥನ್ ಅವರ ಸಂಗೀತ ನಿಯೋಜನೆ. ಯುಗಾದಿಗೊಮ್ಮೆ ದೀಪಾವಳಿಗೊಮ್ಮೆ ಬರುವ ಕನ್ನಡ ಚಿತ್ರಗಳು ಈ ಮಟ್ಟದಿಂದ ಮೇಲಕ್ಕೇಳದೆ ಇದ್ದರೆ ನಮಗೆ ಚಿತ್ರಗಳೇ ಬೇಕಾಗಿಲ್ಲವೆಂದು ನಾವು ಖಂಡಿತವಾಗಿ ಹೇಳಬೇಕಾಗುತ್ತದೆ."

— ವೀರಕರ್ಣಾಟಕ.

"ಶ್ರೀಶೈಲ ಕಂಪೆನಿಯ 'ರಾಮ ಪಾದುಕಾ ಪಟ್ಟಾಭಿಷೇಕ'ದ ದಿಗ್ದರ್ಶಕರು ಕಲ್ಕತ್ತೆಯ ಸುಪ್ರಸಿದ್ಧ ದಿಗ್ದರ್ಶಕರು, ಸಂಭಾಷಣೆ ಬರೆದಿರುವವರು ಕನ್ನಡದ ಪ್ರಸಿದ್ಧ ಲೇಖಕರು, ನಿರ್ಮಾಪಕರು ಬೆಂಗಳೂರಿನ ದೊಡ್ಡ ಶ್ರೀಮಂತರು

– ಇವರೆಲ್ಲಾ ಸೇರಿ ಮಾಡಿರುವುದೇನು? ರಾಮಾಯಣದ ಅತ್ಯುತ್ತಮ ಕಥಾ ಭಾಗದ ಅಣಕ. ರಾಮಾಯಣ ಕಥಾ ದಿಗ್ದರ್ಶನ ಮಾಡುವಾಗ ಭೂರ್ಪೆ ಬಾಬುಗಳಿಗೆ ಹೆಣ್ಣುಗಳ ನಿತಂಬ ಬಿಟ್ಟು ಬೇರೆ ಏನೂ ಕಾಣಲಿಲ್ಲವೇನೋ? ಸೆನ್ಸಾರ್ ಬೋರ್ಡಿನವರು ಈ ಚಿತ್ರಕ್ಕೆ ಹೇಗೆ ಒಪ್ಪಿಗೆಕೊಟ್ಟರೆಂಬುದು ನಮಗೆ ತಿಳಿಯದಾಗಿದೆ– ರಾಮಾಯಣಕ್ಕೂ ಚಲನಚಿತ್ರ ಕಲೆಗೂ ಕನ್ನಡ ನಾಡಿಗೂ ಶ್ರೀಶೈಲ ಕಂಪೆನಿಯವರು ಅಕ್ಷಮ್ಯ ಅಪರಾಧ ಮಾಡಿದ್ದಾರೆ."

—ದೀನವಾಣಿ.

"ಒಳ್ಳೆಯ ಕಥೆಯನ್ನು ತೆಗೆದುಕೊಂಡು ಎಷ್ಟು ವಿಕಾರ ಮಾಡಬಹು ದೆನ್ನುವುದನ್ನು ಅರಿಯಬೇಕೆಂದಿರುವವರು ಅವಶ್ಯಕವಾಗಿ ಶ್ರೀಶೈಲ ಕಂಪೆನಿ ಯವರ 'ರಾಮ ಪಾದುಕಾ ಪಟ್ಟಾಭಿಷೇಕ' ಚಿತ್ರ ನೋಡಲೇ ಬೇಕು. ಇದು ಕುಸುಮ ಕೋಮಲನಾದ ಶ್ರೀರಾಮಚಂದ್ರನ, ಸತ್ಯಾಶ್ರಯಿಯಾದ ಭರತನ ಕಥೆಯಲ್ಲ. ರಾಕ್ಷಸಿ ಮಂಥರೆಯ ಮಹಾಪುರಾಣ. ಭರತ ಆಡುವ ಪ್ರತಿ ಮಾತೂ ಎದೆಗೆ ಶೂಲ ನೆಟ್ಟಂತಿರುತ್ತದೆ. ಸುಪ್ರಸಿದ್ಧ ಚಲನಚಿತ್ರ ತಾರೆ ಯಾದ ಶಾಮಲಾಬಾಯಿಯನ್ನು ಕರೆತಂದು ಅವರನ್ನು ಗೌಣಸ್ಥಾನದಲ್ಲಿಟ್ಟಿ ರುವುದು ಮರ್ಮವೇನೆಂಬುದನ್ನು ಕಂಪೆನಿಯವರೇ ಹೇಳಬೇಕು. ಕನ್ನಡ ಭಾಷೆ ಬಲ್ಲ ಯಾವ ದಿಗ್ದರ್ಶಕನೂ ಈ ಕಂಪೆನಿಯವರಿಗೆ ಸಿಕ್ಕಲಿಲ್ಲವೇನೋ? ಸುದರ್ಶನರ ಅತ್ಯುತ್ತಮ ಸಂಭಾಷಣೆಗಳೂ ಅಲ್ಪರ ಕೈಗೆ ಸಿಕ್ಕಿ ಕೊರಗಿಹೋ ಗಿವೆ. ಭಾರತ ಸಂಸ್ಕೃತಿಗೇ ಅಪಮಾನ ಮಾಡುವ ಈ ಚಿತ್ರವನ್ನು ಕೂಡಲೆ ನಿಲ್ಲಿಸಬೇಕಾದುದು ಸರ್ಕಾರದ ಕರ್ತವ್ಯ."

—ಕನ್ನಡನಾಡು

ಪತ್ರಿಕಾ ಪ್ರತಿನಿಧಿಗಳೂ, ಜನತೆ ಚಿತ್ರದ ಬಗ್ಗೆ ಈ ಅಭಿಪ್ರಾಯ ಪಡುವುದು ಅನಿವಾರ್ಯವೆಂದು ಸದರ್ಶನರಿಗೆ ಗೊತ್ತಿತ್ತು. ಆದರೆ, ಚಿತ್ರಕ್ಕಾಗಿ ದುಡಿದು ಅವರ ಅಂತಃಕರಣ ನೊಂದಿತು. 'ಚಿತ್ರದ ಗತಿಯೇನು?' ಎನ್ನುವ ಚಿಂತೆ ಅವರನ್ನು ಪ್ರಬಲವಾಗಿ ಬಾಧಿಸಿತು.

ಚಿತ್ರದ ಆರಂಭೋತ್ಸವಕ್ಕೆ ಮೈಸೂರಿಗೆ ಹೋಗಿದ್ದ ಸಾಹುಕಾರರು ಮಾರನೆಯ ದಿನ ಪತ್ರಿಕೆಗಳನ್ನು ನೋಡಿದರು. ಚಿನ್ನಪ್ಪನೆದುರಿಗೆ ತಮ್ಮ ದುಃಖ ತೋಡಿಕೊಂಡು, ಮುರಿಗೆಯ್ಯ, ಮಹಾದೇವಯ್ಯನನ್ನು ಶಪಿಸುವುದರಲ್ಲಿ ಅವರು ತೃಪ್ತಿಪಟ್ಟುಕೊಳ್ಳಬೇಕಾಯಿತು.

ಪ್ರೆಸ್ ಷೋ ಆದ ಮಾರನೆಯ ದಿನವೇ 'ಚಿತ್ರಸುದ್ದಿ' ಪತ್ರಿಕೆಯ ಸಂಪಾದಕ ವಾಮನಮೂರ್ತಿ ಸುದರ್ಶನರನ್ನು ಹುಡುಕಿಕೊಂಡು ಅವರ ಮನೆಯ ಬಳಿಗೆ ಬಂದ.

"ಏನು ಬಂದಿರಿ ವಾಮನಮೂರ್ತಿಗಳೇ. ನನ್ನಿಂದೇನು ಆಗಬೇಕಾಗಿತ್ತು."

"ಒಂದು ಕೆಲಸವಾಗಬೇಕಾಗಿತ್ತು ಬಂದೆ ಸಾರ್. ನಿಮಗೆ ಸ್ವಲ್ಪ ಹೊತ್ತು ಪುರುಸತ್ತಿದೆ ತಾನೇ?"

"ಹೇಳಿ ಪರವಾಯಿಲ್ಲ."

"ನಿಮ್ಮ 'ಶ್ರೀರಾಮ ಪಟ್ಟಾಭಿಷೇಕ' ಚಿತ್ರದ ಬಗ್ಗೆ ಕೆಲವು ವಿಷಯಗಳು ತಿಳಿದುಕೊಳ್ಳಬೇಕಾಗಿತ್ತು."

"ಶ್ರೀಶೈಲ ಕಂಪೆನಿ ಆಫೀಸಿಗೆ ಹೋದರೆ ನಿಮಗೆ ಬೇಕಾದ ಎಲ್ಲ ವಿಷಯಗಳೂ ಗೊತ್ತಾಗುತ್ತವೆ."

"ಅವರು ಹೇಳುವುದು ನನಗೆ ಬೇಕಾಗಿಲ್ಲ ಸಾರ್, ನೀವು ಹೇಳುವುದು ಬೇಕಾಗಿದೆ. ಈ ಚಿತ್ರದಲ್ಲಿ ನಿಮಗೆ ತುಂಬ ಅನ್ಯಾಯವಾಯಿತು ಎಂದು ಕೇಳಿದೆ. ಚಿತ್ರದ ಮೇಲೆ ಒಂದು ವಿಮರ್ಶೆ ಬರೆದು ಕೊಟ್ಟರೆ ನನ್ನ ಪತ್ರಿಕೆಯಲ್ಲಿ ಪ್ರಕಟಿಸುತ್ತೇನೆ. ಹೆಸರು ಹಾಕುವುದು ಬೇಡವೆಂದರೆ ಗುಪ್ತನಾಮ ಇಟ್ಟುಕೊಂಡು ಬರೆಯಬಹುದು. ಲೇಖನಕ್ಕೆ ನೂರು ರೂಪಾಯಿ ಸಂಭಾವನೆ ಕೊಡುವುದಕ್ಕೆ ಸಿದ್ಧವಾಗಿದ್ದೇನೆ."

"ಚಿತ್ರವನ್ನು ತೆಗಳಿ ಲೇಖನ ಬರೆದುಕೊಡಬೇಕು."

"ಹಾಗೇನಿಲ್ಲ – ವಿಮರ್ಶಾತ್ಮಕವಾಗಿ ಬರೆದರಾಯಿತು."

"ವಾಮನಮೂರ್ತಿಗಳೇ, ನನ್ನ ಕೈಯಲ್ಲಿ ಈ ವಿಮರ್ಶೆ ಬರೆಸಬೇಕೆನ್ನುವ ವಿಚಾರ ನಿಮ್ಮದೋ, ಯಾರದಾದರೂ ಪ್ರೇರಣೆಯಿಂದ ಬಂದವೋ."

"ಯಾಕೆ ಸಾರ್ – ಹಾಗೆ ಹೇಳುವಿರಿ."

"ಜನ್ಮಾಂತರಕ್ಕೊಂದು ಕನ್ನಡ ಚಿತ್ರಗಳು ಬರುತ್ತವೆ. ಅವುಗಳನ್ನು ನಿಂದಿಸಿ – ಅವುಗಳಮೇಲೆ ಅಪಪ್ರಚಾರಮಾಡಿ ನಮ್ಮ ಚಾಪಲ್ಯವನ್ನೊ ಕೀಳಾಸೆಯನ್ನೋ ಪೂರೈಸಿಕೊಳ್ಳುವುದು ಯಾವ ನ್ಯಾಯ?"

"ಕನ್ನಡ ಚಿತ್ರಗಳನ್ನು ವಿಮರ್ಶೆ ಮಾಡಲೇ ಬಾರದೇನು?"

"ಹಾಗೆ ಯಾರು ಹೇಳಿದರು. ಅಗತ್ಯವಾಗಿ ವಿಮರ್ಶೆ ಮಾಡಿ–ಸ್ವಲ್ಪ ಸಹಾನುಭೂತಿಯಿಂದ ವಿಮರ್ಶೆ ಮಾಡಿ. ತಮಿಳು, ತೆಲುಗು, ಹಿಂದೀ ಚಿತ್ರಗಳನ್ನು ಮಾಡುತ್ತಿರುವವರ ಸಹಾಯ ಸಂಪತ್ತೇನು ನಮ್ಮ ಸಹಾಯ

ಸಂಪತ್ತೇನು? ನಾವು ಕಂಡವರ ಸ್ಟುಡಿಯೋಗಳಲ್ಲಿ ಚಿತ್ರ ಮಾಡಬೇಕು–ದಿಗ್ದರ್ಶಕರನ್ನು, ನಟರನ್ನು, ಸಂಗೀತ ನಿರ್ದೇಶಕರನ್ನು ಹೊರಗಿನಿಂದ ಕರೆದುಕೊಂಡು ಬರಬೇಕು. ನಮ್ಮಲ್ಲಿ ಸಾಕಷ್ಟು ಜನ ಇನ್ನೂ ಈ ರಂಗದಲ್ಲಿ ನುರಿತಿಲ್ಲ."

"ಅದೆಲ್ಲಾ ಒಪ್ಪಿಕೊಂಡೆ ಸಾರ್. ಕಥೆಯನ್ನೇಕೆ ಶತವಿಕಾರ ಮಾಡಿ ಹಾಳುಮಾಡಬೇಕಾಗಿತ್ತು."

"ಬಾಕ್ಸ್ ಆಫೀಸ್ (Box office) ಎನ್ನುವ ಭೂತದ ತೃಪ್ತ್ಯರ್ಥವಾಗಿ."

"ನೀವು ಹಾಗಾದರೆ ವಿಮರ್ಶೆ ಬರೆದು ಕೊಡುವುದಿಲ್ಲ."

"ಹೇಗೆ ಬರೆಯಲಿ. ಈ ಚಿತ್ರ ನನ್ನ ಕಂದ. ಇದರ ಗುಣದೋಷಗಳು, ಶಕ್ತಿ ದೌರ್ಬಲ್ಯಗಳೆಲ್ಲಕ್ಕೂ ನಾನು ಉತ್ತರವಾದಿ. ನನ್ನನ್ನೇ ನಿಂದಿಸಿಕೊಂಡು ನಾನು ಲೇಖನ ಬರೆದು ಕೊಡಲೇ?"

ವಾಮನಮೂರ್ತಿ ಅಸಮಾಧಾನಪಟ್ಟುಕೊಂಡು ಎದ್ದು ಹೋದ.

ಮೈಸೂರು, ದಾವಣಗೆರೆ, ಹುಬ್ಬಳ್ಳಿ, ಧಾರವಾಡದ ಆರಂಭೋತ್ಸವಗಳನ್ನು ಮುಗಿಸಿಕೊಂಡು ಸಾಹುಕಾರರು, ಚಿನ್ನಪ್ಪ ಬೆಂಗಳೂರಿಗೆ ಹಿಂದಿರುಗಬೇಕಾದರೆ ಹತ್ತು ದಿವಸಗಳಾದವು

ಚಿನ್ನಪ್ಪನ ಆಫೀಸಿನ ಮೇಜಿನ ಮೇಲೆ 'ಜನಮತ'–'ಚಿತ್ರ ಸುದ್ದಿ'–'ಚಿತ್ರ ಪ್ರಗತಿ' ಪತ್ರಿಕೆಗಳಿದ್ದವು. ಅವುಗಳಲ್ಲಿ ಬಂದಿದ್ದ ವಿಮರ್ಶೆ ನೋಡಿ ವಿಸ್ಮಯಗೊಂಡ ಚಿನ್ನಪ್ಪ 'ಓದಲೇ ಸ್ವಾಮಿ' ಎಂದು ಕೇಳಿದ. 'ಓದು' ಎಂದು ಸಾಹುಕಾರರು ಅಪ್ಪಣೆಕೊಟ್ಟರು.

"ದಕ್ಷರಾದ ತಂತ್ರಜ್ಞರಿಂದಲೂ, ಪ್ರಸಿದ್ಧ ನಟನಟಿಯರಿಂದಲೂ, ಪ್ರತಿಭಾನ್ವಿತವಾದ ದಿಗ್ದರ್ಶನದಿಂದಲೂ ಕೂಡಿರುವ 'ಶ್ರೀರಾಮ ಪಾದುಕಾ ಪಟ್ಟಾಭಿಷೇಕ' ವಾಕ್ಚಿತ್ರ ಕನ್ನಡಿಗರ ಸಾಹಸೋದ್ಯಮದ ಕೀರ್ತಿ ಕಳಶದಂತಿದೆ. ಅಪಾರ ಹಣ ವ್ಯಯಮಾಡಿ ಸಾಹುಕಾರ್ ರುದ್ರಪ್ಪನವರು ಈ ಚಿತ್ರವನ್ನು ಸಿದ್ಧಗೊಳಿಸಿ ಚಿತ್ರ ಪ್ರಪಂಚದಲ್ಲಿ ಅಚ್ಚಳಿಯದೆ ಕೀರ್ತಿ ಗಳಿಸಿಕೊಂಡಿದ್ದಾರೆ. ಕನ್ನಡದ ಉದಯೋನ್ಮುಖ ತಾರೆ, ಶ್ರೀ ಸರೋಜಾ ದೇವಿ ತನ್ನ ಅನ್ಯಾದೃಶ ಅಭಿನಯ, ಸಂಗೀತ, ನೃತ್ಯಗಳಿಂದ ಪ್ರೇಕ್ಷಕರನ್ನು ಬೆರಗುಗೊಳಿಸುತ್ತಾರೆ. ಇವರಿಗೆ ಚಿತ್ರ ಪ್ರಪಂಚದಲ್ಲಿ ಭವ್ಯ ಭವಿಷ್ಯ ಕಾದಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಮುಂಬಯಿಯ ಪ್ರಸಿದ್ಧ ತಾರೆ ಶಾಮಲಾಬಾಯ್ ತನ್ನ ಪಾತ್ರವನ್ನು ಸರಿಯಾಗಿ ಅರ್ಥಮಾಡಿಕೊಂಡಂತೆ ಕಾಣುವುದಿಲ್ಲ. ಮಂಥರೆ ಪಾತ್ರವನ್ನು

ಅಭಿನಯಿಸಿರುವ ಭಾಗ್ಯಮ್ಮ ದುರ್ಗಾಖೋಟೆಯ ನೆನಪನ್ನು ತರುತ್ತಾರೆ. ಕನ್ನಡದ ಪ್ರಸಿದ್ಧ ನಾಟಕಕರ್ತರಾದ ಮಹಾದೇವಯ್ಯನವರು ಗೀತೆಗಳನ್ನು ಸೊಗಸಾಗಿ ವಿರಚಿಸಿದ್ದಾರೆ. ಹಿಂದೀ ಚಿತ್ರಗಳಿಗೆ ಗೀತೆಗಳನ್ನು ಬರೆದು ಕೊಡುವ ಪ್ರದೀಪರ ಕೃತಿಗಳಷ್ಟೇ ಇವರ ಹಾಡುಗಳೂ ಜನರ ಮೆಚ್ಚುಗೆಗೆ ಪಾತ್ರವಾಗುವುವೆಂದು ನಾವು ನಂಬಿದ್ದೇವೆ. ಸಂಭಾಷಣೆಗಳನ್ನು ಬರೆದಿರುವ ಸುದರ್ಶನರು ಹೆಸರಾಂತ ಲೇಖಕರಾದರೂ ಅವರ ಸಂಭಾಷಣೆಗಳಲ್ಲಿ ಬಿಗಿಯಿಲ್ಲ, ಲಾಲಿತ್ಯವಿಲ್ಲ. ಪ್ರಸಿದ್ಧ ದಿಗ್ದರ್ಶಕರಾದ ಭೂಪೇಂದ್ರ ಬಾಬುಗಳು ಸಂಭಾಷಣೆ ಬರೆದಿರುವವರ ನ್ಯೂನತೆಗಳನ್ನು ತಮ್ಮ ಅಪ್ರತಿಮ ಕೌಶಲ್ಯದಿಂದ ಮುಚ್ಚಲು ಪ್ರಯತ್ನಿಸಿದ್ದಾರೆ. ಇದು ಒಂದು ಬಾರಿಯಲ್ಲ – ಹತ್ತು ಬಾರಿ ನೋಡುವ ಚಿತ್ರವೆಂದು ನಾವು ಹೇಳಬಯಸುತ್ತೇವೆ.”

—ಚಿತ್ರಪ್ರಗತಿ.

“ ಯಾವೋನಯ್ಯ ಈ ಪೇಪರ್ ಮಾಡೋ ಮುಠ್ಠಾಳ. ಸುದರ್ಶನರ ಮೇಲೆ ಮನಸ್ಸು ಬಂದ ಹಾಗೆ ಬರೆದಿದ್ದಾನೆ ”

ಎಂದು ಸಾಹುಕಾರರು ಗದರಿದರು. ಚಿನ್ನಪ್ಪ ಅನುಮಾನಿಸುತ್ತ

“ ಹೇಳಲೇನು ಸ್ವಾಮಿ. ನಿಮಗೆ ಅಸಮಾಧಾನವಾಗುವುದಿಲ್ಲವಷ್ಟೆ? ”

“ ಹೇಳು – ನನಗೇಕೆ ಅಸಮಾಧಾನ.”

“ ಚಿತ್ರಪ್ರಗತಿ ನಿಮ್ಮ ಮಹಾದೇವಯ್ಯನ ಪತ್ರಿಕೆ.”

“ ಎಂಥ ನಾಚಿಕೆಗೇಡಿಯೋ ಈ ಮಹಾದೇವ. ತನ್ನ ಗೀತೆಗಳು ಸೊಗಸಾಗಿವೆ ಎಂತಾ ತಾನೇ ಬರೆದುಕೊಂಡಿದ್ದಾನಲ್ಲಾ.”

“ ಅಂಥವೇ ಇನ್ನೂ ಒಂದೆರಡು ರತ್ನಗಳಿವೆ ಸ್ವಾಮಿ – ಕೇಳಿ.”

“ ಶ್ರೀಶೈಲ ಪಿಕ್ಚರ್ಸ್ ಕಂಪೆನಿಯವರ ನೂತನ ತಯಾರಿಕೆ ‘ಶ್ರೀರಾಮ ಪಾದುಕಾ ಪಟ್ಟಾಭಿಷೇಕ’ ‘A’ ಚಿತ್ರವಲ್ಲದಿದ್ದರೂ ಒಂದು ಬಾರಿ ನೋಡ ಬೇಕಾದ ಚಿತ್ರ. ಕನ್ನಡದ ತಾರೆ, ನಗೆಮೊಗದ ಕಾಮಿನಿ, ಮಧುರ ಸಂಭಾಷಿಣಿ, ಹರಿಣಗಂಗಳ ಚಪಲೆ, ಬಡನಡುವಿನ ಭಾಮಿನಿ ಸರೋಜಾ ದೇವಿ ಪ್ರೇಕ್ಷಕರ ಕಣ್ಮನಗಳನ್ನು ಸೂರೆಗೊಂಡಿದ್ದಾಳೆ. ಅವಳು ದಶರಥನ ಮುಂದೆ ಕುಣಿದು ಅವನಿಗೆ ಮುತ್ತಿಡುವ ಭಂಗಿ ತೋರಿಸುವಾಗ, ನಮಗೇ ಮುತ್ತಿಡಲು ಬರುತ್ತಿರುವಳೇನೋ ಎಂದು ಭಾಸವಾಗುತ್ತದೆ. ಸೀತೆ ಪಾತ್ರ ಮಾಡಿರುವ ಪಾರ್ವತಿ ಸೌಮ್ಯಸುಂದರಿಯಾಗಿದ್ದಾಳೆ. ಅರ್ಧ ಕುಪ್ಪಸ ತೊಟ್ಟು ಅವಳು ಪ್ರವೇಶಿಸಿದರೆ ರೋಮಾಂಚನವಾಗುತ್ತದೆ. ಭರತ ಮಾಡಿರುವ ನಟ ಚಿತ್ರರಂಗಕ್ಕೆ ಹೊಸಬ. ಅವನ ಅಭಿನಯ ಚೆನ್ನಾಗಿದೆ, ಮಾತು ಬಹಳ

ಗಡಸು. ಈ ಕಂಪೆನಿಯವರು ಕೌಸಲ್ಯೆ ಪಾತ್ರಕ್ಕೆ ಮುಂಬಯಿಯಿಂದ ಶಾಮಲಾ ಬಾಯಿಯನ್ನೇಕೆ ಕರೆದುಕೊಂಡು ಬಂದರೋ ನಾವು ಕಾಣೆವು. ಆಕೆಗಿಂತಲೂ ಚೆನ್ನಾಗಿ ಅಭಿನಯಿಸಬಲ್ಲವರು ನಮ್ಮಲ್ಲಿ ಬೇಕಾದಷ್ಟು ಜನ ಸಿಕ್ಕುತ್ತಾರೆ. ಸಂಭಾಷಣೆಗಳು ಸ್ವಲ್ಪವೂ ಚೆನ್ನಾಗಿಲ್ಲ– ಗೀತೆಗಳು ಸುಮಧುರವಾಗಿವೆ. ಡೈರೆಕ್ಷನ್ ಅತ್ಯುತ್ತಮವಾಗಿಲ್ಲದಿದ್ದರೂ ಪರವಾಯಿಲ್ಲ."

—ಜನಮತ.

"ಇವನು ಯಾರಯ್ಯ ಮಹಾಪುರುಷ."

"ಇದೊಂದು ಪೊಳ್ಳುಮುಂಡೇದು ಸ್ವಾಮಿ. ಜನಮತದಲ್ಲಿ ಪ್ರತಿವಾರ ನಾಲ್ಕು ಹಾಳೆ 'ರೂಪವಾಹಿನಿ' ಎಂತಾ ಧ್ವಂಸಮಾಡುತ್ತಾನಲ್ಲಾ ಆ ಹರಿ ನಾರಾಯಣ. ಚಿತ್ರದಲ್ಲಿ ಇವನಿಗೆ ಕಾಣುವುದೆಲ್ಲಾ ಭಾಮಿನಿಯರ ಕುಚ, ಮಾನಿನಿಯರ ನಿತಂಬ ಎರಡೇ."

"ಇಂಥಾವರ ಕೈಯಲ್ಲೆಲ್ಲಾ ಹೇಗಯ್ಯ ಬರೆಸುತ್ತಾರೆ."

"ಈ ಹರಿನಾರಾಯಣ ಒಂದು ಪುಸ್ತಕ ಕೂಡ ಬರೆದಿದ್ದಾನೆ ಸ್ವಾಮಿ. ತಾನು 'ರೂಪವಾಹಿನಿ'ಯಲ್ಲಿ ಬರೆಯುವ ಅಧ್ವಾನ ಪ್ರಶ್ನೋತ್ತರಗಳನ್ನೆಲ್ಲಾ ಕೂಡಿಸಿ ಅಚ್ಚುಹಾಕಿಸಿ ಅದಕ್ಕೆ 'ಮನೋಹರ' ಎಂದು ಹೆಸರಿಟ್ಟಿದ್ದಾನೆ. ಇಬ್ಬರು ಮಾನ್ಯ ಮಂತ್ರಿಗಳು ಆ ಪುಸ್ತಕಕ್ಕೆ ಮೆಚ್ಚೋಲೆ ಬರೆದಿದ್ದಾರೆ."

"ಸರಿಯಪ್ಪಾ– ಇನ್ನೊಂದು ಇದೆಯಲ್ಲಾ ಅದನ್ನೂ ಓದಿಬಿಡು."

"'ಚಿತ್ರಸುದ್ದಿ' ಸಂಪಾದಕ ವಾಮನಮೂರ್ತಿ. ನಮ್ಮ ಪ್ರೆಸ್ ಷೋ ದಿವಸ ಬಂದಿದ್ದ. ಅವತ್ತೇ ನನಗೆ ಗಂಟುಬಿದ್ದ. ಸಿನೀಮಾ ಪತ್ರಿಕೆಯ ಸಂಪಾದಕ ಎಂದು ಮರ್ಯಾದೆಯಾಗಿ ಕಂಡು, ಕಾಫಿ ತರಿಸಿಕೊಟ್ಟೆ. ಮಾತಾ ಡುತ್ತಾ ಆಡುತ್ತಾ ಅವನು ಕೇಳಿದ 'ಏನು ಸಾರ್ ಮದರಾಸಿನಲ್ಲಿ ನಿಮ್ಮ ಕಂಪೆನಿಯವರ ಶೃಂಗಾರಲೀಲೆ ಬಹಳ ಆಗಿತ್ತಂತೆ?'–'ನಿಮಗೆ ಯಾರು ಹೇಳಿದರು ವಾಮನಮೂರ್ತಿಗಳೇ?'–'ಎಲ್ಲಾ ಕಡೆ ನಮ್ಮ ಡಿಟೆಕ್ಟಿವ್ಸ್ ಇದ್ದಾರೆ ಸಾರ್, ನಮಗೆ ಕಾಲಕಾಲಕ್ಕೆ ಸುದ್ದಿ ಬಂದುಬಿಡುತ್ತದೆ'–'ಇಂಥ ಆಪಾದನೆಗಳು ನೀವು ಮಾಡುವುದು ಸರಿಯಲ್ಲ.'–'ನನ್ನಲ್ಲಿ ಆ ವಿಷಯಕ್ಕೆ ಬೇಕಾದಷ್ಟು ಕಾಗದಪತ್ರಗಳಿವೆ, ನನ್ನ ಪತ್ರಿಕೆಯಲ್ಲಿ ಪ್ರಕಟಮಾಡುತ್ತೇನೆ' –'ಇದರಿಂದ ನಿಮಗೇನು ಲಾಭ ಬರುತ್ತದೆ.'–'ಪ್ರಕಟಿಸಿದರೆ ಎರಡು ಸಾವಿರ ರೂಪಾಯಿ ಕೊಡುವುದಕ್ಕೆ ಒಬ್ಬರು ಮುಂದೆ ಬಂದಿದ್ದಾರೆ.. ನೀವು ಒಂದು ಸಾವಿರ ಕೊಟ್ಟರೆ ಸಾಕು. ಕಾಗದಗಳನ್ನು ಹರಿದುಹಾಕಿಬಿಡುತ್ತೇನೆ.' –ನನಗೆ ತಡೆಯಲಾರದಷ್ಟು ಕೋಪ ಬಂದಿತು ಸ್ವಾಮಿ. ಅವನ ಕುತ್ತಿಗೆ

ಹಿಡಿದು ಹೊರಗೆ ದಬ್ಬಿಬಿಟ್ಟೆ. ಆ ಹೊಟ್ಟೆಯು ಉರೀಗೆ ಏನೇನೋ ಹೊಲಸು ಬರೆದಿದ್ದಾನೆ."

"ನಮಗೆ ಶನಿ ಕ್ರೂರವಾಗಿರುವ ಹಾಗೆ ಕಾಣುತ್ತೆ ಚಿನ್ನಪ್ಪ. ಕಲೆಕ್ಷನ್ ರಿಪೋರ್ಟ್ ನೋಡಿದೆಯಾ ?"

"ನೋಡಿದೆ ಸ್ವಾಮಿ. ಕಲೆಕ್ಷನ್ ಹೀಗೇ ಆದರೆ ನಾವು ಹಾಕಿದ ಹಣವೂ ಬರುವ ಸಂಭವವಿಲ್ಲ."

ಸಾಹುಕಾರರು ಕೈಕೈ ಹಿಸುಕಿಕೊಂಡರು. ಅವರ ಮುಖ ಕಂಗೆಟ್ಟು ಹೋಯಿತು.

"ಏನೋ ಗತಿ ಚಿನ್ನಪ್ಪ."

"ಎರಡು ಮಾರ್ಗ ನನಗೆ ತೋರುತ್ತದೆ ಸ್ವಾಮಿ. ಮೊದಲು ಈ ಸೇಠನ ಹತ್ತಿರ ನೀವು ತೆಗೆದುಕೊಂಡಿರುವ ಹಣ ಅವನ ಮುಖದ ಮೇಲೆ ಎಸೆದುಬಿಡ ಬೇಕು. ಅವನು ಮಾವಾಳಿಗಳನ್ನು ಬಿಟ್ಟು ಚಿತ್ರದ ವಿರುದ್ಧ ಪ್ರಚಾರ ಮಾಡು ತ್ತಿದ್ದಾನಂತೆ. ದಿನವೂ ಟಿಕೇಟ್ ಆಫೀಸಿನ ಹತ್ತಿರ ಅವನ ಜನಗಳು ನಿಂತು ಕೊಂಡು 'ಪಿಕ್ಚರ್ ಚೆನ್ನಾಗಿಲ್ಲ—ಏಕೆ ಹೋಗುವಿರಿ' ಎಂದು ಪ್ರಚಾರ ಮಾಡುತ್ತಿದ್ದಾರಂತೆ. ಚಿತ್ರ ಸೋತುಹೋದರೆ ಥಿಯೇಟರ್ ನುಂಗಿಬಿಡ ಬಹುದು ಎಂದು ಅವನ ಹಂಚಿಕೆ."

"ಥಿಯೇಟರ್ ನುಂಗೋಕೆ ಅವನು ಮೂರು ಕಣ್ಣು ಇಟ್ಟುಕೊಂಡು ಬರಬೇಕು. ನಾಳೆಯೇ ಬೇರೆಕಡೆ ಸಾಲತಂದು ಅವನ ದುಡ್ಡು ಬಿಸಾಡಿ ಬಿಡುತ್ತೇನೆ."

"ಇನ್ನೊಂದು ವಿಷಯ—ಚಿತ್ರ ನಡೆಯುತ್ತಿರಲಿ. ನಾವು ಕೂಡಲೆ ಮದರಾಸಿಗೆ ಹೋಗಿ ನಮ್ಮ ಚಿತ್ರದಲ್ಲಿರೋ ಹೊಲಸು ಹಾಡು, ಕುಣಿತ ಎಲ್ಲಾ ಕಿತ್ತು ಹಾಕಿ, ಬಿಟ್ಟು ಹೋಗಿರುವ ಶಾಮಲಾಬಾಯಿಯ ದೃಶ್ಯಗಳನ್ನು ಕೂಡಿಸಿ ತಂದರೆ ಚಿತ್ರ ಬದುಕಿಕೊಳ್ಳಬಹುದು. ಭಾಗ್ಯಮ್ಮನ ಹಾಡೂ ಕಿತ್ತು ಹಾಕಬೇಕಾಗುತ್ತದೆ."

"ಏನು ಬೇಕಾದರೂ ಮಾಡಪ್ಪ. ಹಾಕಿದ ಗಂಟು ಕೈಬಿಟ್ಟು ಹೋಗದಂತೆ ನೋಡಿಕೋ. ಇದಕ್ಕೆ ಸುದರ್ಶನರನ್ನು ಜತೆಯಲ್ಲಿ ಕರೆದುಕೊಂಡು ಹೋಗಬೇಕಾಗುತ್ತದೆ."

"ಹೌದು ಅವರ ಮಾತು ನಿರ್ಲಕ್ಷಿಸಿ ಮಹಾದೇವಯ್ಯನ ಕುತಂತ್ರಕ್ಕೆ ನಾವು ಈಡಾದ್ದು ದೊಡ್ಡ ತಪ್ಪಾಯಿತು. ಈಗ ಯಾವ ಮುಖದಲ್ಲಿ ಹೋಗಿ ಅವರ ಸಹಾಯ ಕೇಳಲಿ ಸ್ವಾಮಿ."

"ನಿನ್ನ ಕಂಡರೆ ಅವರಿಗೆ ವಿಶ್ವಾಸ ಕಣೋ ಚಿನ್ನಪ್ಪ. ನೀನು ಕರೆದರೆ ಬರಲ್ಲ ಎಂದು ಹೇಳಲಾರರು. ನಾವು ಅವರಿಗೆ ತುಂಬ ಅನ್ಯಾಯ ಮಾಡಿದೆವು, ಅವಮಾನ ಮಾಡಿದೆವು. ಈ ಮುರಿಗೆಯ್ಯ, ಮಹಾದೇವ ನನ್ನ ತಲೇನೇ ಕೆಡಿಸಿಬಿಟ್ಟರು. ಅವರಿಗೆ ಸರಿಯಾಗಿ ಹಣವೂ ಕೊಡಲಿಲ್ಲ- ಬೇಕಾದರೆ ಒಂದು ಸಾವಿರ ರೂಪಾಯಿ ಅವರ ಕೈಗೆಹಾಕಿ ಈ ಕೆಲಸ ಮಾಡಿಸು ಚಿನ್ನಪ್ಪ."

"ಮಾಡಿಸಬಲ್ಲೆ ಎಂದು ಧೈರ್ಯವಾಗಿ ಹೇಳಲಾರೆ. ಪ್ರಯತ್ನ ಮಾಡಿನೋಡುತ್ತೇನೆ"

ಎಂದು ಚಿನ್ನಪ್ಪ ಹೇಳಿದ.

## ೩೧

ಚಿನ್ನಪ್ಪನ ಪ್ರಯತ್ನ ನಿಷ್ಫಲವಾಗಲಿಲ್ಲ. ಚಿತ್ರದ ಮೇಲಣ ಅಭಿಮಾನಕ್ಕೆ ಸುದರ್ಶನರು ಚಿನ್ನಪ್ಪನ ಜತೆ ಹೊರಟರು.

ಸುದರ್ಶನರಿಗೆ ಸ್ಟೂಡಿಯೋದಲ್ಲಿ ಹಾರ್ದಿಕ ಸ್ವಾಗತ ಸಿಕ್ಕಿತು. ಸುಬ್ಬಯ್ಯರ್ ಅವರನ್ನು ಬಾಚಿ ತಬ್ಬಿಕೊಂಡರು. ಸುದರ್ಶನರು ಕೇಳಿದ ನೆರವು ಕೊಡಿ ಎಂದು ರಾಮಾನುಜಂ ಒಂದು ಜನರಲ್ ಆರ್ಡರ್ ಪಾಸ್ ಮಾಡಿದರು.

ಎಡಿಟರ್ ಛಾಯಾಪತಿ 'ಮೂವಿಯೋಲಾ'(Moviola) ಯಂತ್ರದಲ್ಲಿ ಪ್ರತಿದೃಶ್ಯವನ್ನೂ ಹಾಕಿ ತೋರಿಸಿದ. ಕಥಾಬೆಳವಣಿಗೆಗೆ ಅನುಕೂಲವಾಗಿ ಸುದರ್ಶನರು ಕೆಲವು ದೃಶ್ಯಗಳನ್ನು ಅದಲುಬದಲು ಮಾಡಿದರು. ಕತ್ತರಿಸಿ ಹಾಕಿದ್ದ ಕೌಸಲ್ಯೆಯ ಭಾಗಗಳನ್ನು ಸೇರಿಸಿದರು. ಅನವಶ್ಯಕವಾಗಿ ಬೆಳೆದಿದ್ದ ಕೈಕಾದೇವಿಯ ದೃಶ್ಯಗಳನ್ನೂ, ಗುಹನ ಮುಂದೆ ನಡೆಯುವ 'ಹೂಲೂ ಹೂಲೂ' ನೃತ್ಯವನ್ನೂ, ಭಾಗ್ಯಮ್ಮನ ಹಾಡನ್ನೂ ಕತ್ತರಿಸಿದರು- ಚಿತ್ರಕ್ಕೆ ಟೆಂಪೋ (Tempo) ಬಂದು ಕಥೆಯ ನಡೆ ಸುಗಮವಾಯಿತು.

"ಟೈಟಲ್ ಕಾರ್ಡ್ (Title Card) ನಿಮಗೆ ಹೇಗೆ ಬೇಕೋ ಹಾಗೆ ಬದಲಾಯಿಸಿ ಸ್ವಾಮಿ"

ಎಂದು ಚಿನ್ನಪ್ಪ ಹೇಳಿದ. ಸುದರ್ಶನರು ಅದಕ್ಕೊಪ್ಪಲಿಲ್ಲ.

"ಕೀರ್ತಿ ಯಾರಿಗೆ ಬಂದರೂ ಒಂದೇ ಚಿನ್ನಪ್ಪನವರೇ. ಚಿತ್ರ ಚೆನ್ನಾದರೆ ಸಾಕು."

ಎಂದು ಅವರು ಹೇಳಿದರು. ಸ್ಟೂಡಿಯೋ ಕೆಲಸ ಒಂದು ವಾರ ಹಿಡಿಯಿತು. ಸುದರ್ಶನರು, ಚಿನ್ನಪ್ಪ ಊರಿಗೆ ಬರುವಷ್ಟರಲ್ಲಿ ತಮ್ಮ ಬಂಧುಗಳೊಬ್ಬರಲ್ಲಿ ಸಾಲ ತಂದು ಸಾಹುಕಾರರು ಸೇಠಿನ ಹಣ ತೀರಿಸಿದ್ದರು. ಪರಿಷ್ಕೃತ ಚಿತ್ರ ನೋಡಿ ಸಾಹುಕಾರರೇ ಬೆರಳು ಕಚ್ಚಿದರು—ತಾವೇ ಕೈಯೆತ್ತಿ ಸುದರ್ಶನರಿಗೆ ಸಾವಿರ ರೂಪಾಯಿ ಕೊಟ್ಟು

"ನನ್ನದು ಸರ್ವಾಪರಾಧವಾಯಿತು ಕ್ಷಮಿಸಿ" ಎಂದು ಬೇಡಿಕೊಂಡರು.

ಮಹಾದೇವಯ್ಯನ ಕೈಯಿಂದ ಪ್ರಕಟನಶಾಖೆ ಚಿನ್ನಪ್ಪನ ಕೈಗೆ ಹೋಯಿತು. ಸುಧಾರಿತ ಚಿತ್ರಕ್ಕೆ ಯೋಗ್ಯ ಪ್ರಕಟನೆಕೊಟ್ಟು, ಮತ್ತೊಂದು 'ಪ್ರೆಸ್‌ಷೋ' ಕರೆದು ಚಿನ್ನಪ್ಪ ಎಲ್ಲರಿಗೂ ಚಿತ್ರ ತೋರಿಸಿದ.

ಎರಡನೆಯ ಬಾರಿ ಬಂದ ವಿಮರ್ಶೆಗಳ ಧ್ವನಿಯೇ ಬದಲಾಯಿಸಿತು. ಚಿತ್ರವನ್ನು ತೆಗಳಿದ್ದವರು ಅದನ್ನು ಬಾಯಿತುಂಬ ಹೊಗಳಿದರು. 'ಚಿತ್ರ ಸುದ್ದಿ'—'ಜನಮತ' ಪತ್ರಿಕೆಗಳು ಮಾತ್ರ ತಮ್ಮ ಹಟವನ್ನೇ ಸಾಧಿಸಿದವು.

ಬೆಂಗಳೂರು ಮೈಸೂರುಗಳಲ್ಲಿ ಚಿತ್ರ ಹತ್ತು ವಾರ ಓಡಿತು. ದಾವಣಗೆರೆಯಲ್ಲಿ ಆರು ವಾರ; ಹುಬ್ಬಳ್ಳಿಯಲ್ಲಿ ಇಪ್ಪತ್ತೆರಡು ವಾರ; ಧಾರವಾಡದಲ್ಲಿ ಐದು ವಾರ; ಬೆಳಗಾಂವಿಯಲ್ಲಿ ಹದಿನಾಲ್ಕು ವಾರ; ಬಳ್ಳಾರಿಯಲ್ಲಿ ಹದಿನಾರು ವಾರ ಒಂದೇ ಸಮನಾಗಿ ಚಿತ್ರ ನಡೆಯಿತು. ಸಾಹುಕಾರರು ಹಾಕಿದ್ದ ಬಂಡವಾಳ ಹಿಂದಕ್ಕೆ ಬಂದುದಲ್ಲದೆ ಅವರಿಗೆ ಲಾಭವೂ ಬಂದಿತು.

ಇನ್ನೊಂದು ಚಿತ್ರಕ್ಕೆ ಸಾಹುಕಾರರನ್ನು ಎಳೆಯಬೇಕೆಂದು ಭೂಪೇನ್ ಬಾಬು, ಶಿವಾನಂದ ವಿಶ್ವಪ್ರಯತ್ನ ಮಾಡಿದರು. ಚಿನ್ನಪ್ಪ ಅವರಿಗೆ ಸ್ವಲ್ಪವೂ ನೆರವು ನೀಡಲಿಲ್ಲ. 'ಇನ್ನು ನಾನು ಚಿತ್ರ ಮಾಡುವುದಿಲ್ಲ' ಎಂದು ಸಾಹುಕಾರರು ಖಡಾಖಂಡಿತವಾಗಿ ಹೇಳಿಬಿಟ್ಟರು. ಚೂಡಾಮಣಿಯನ್ನು ಕಥಾನಾಯಕಿಯನ್ನಾಗಿಟ್ಟುಕೊಂಡು ತಾನೇ ಒಂದು ಚಿತ್ರ ತೆಗೆಯಲು ಶಿವಾನಂದ ಪ್ರಯತ್ನ ಮಾಡತೊಡಗಿದ. ಭೂಪೆನ್ ಬಾಬು, ಬೆಂಗಳೂರಿನಲ್ಲಿ ಅವಕಾಶವಿಲ್ಲವೆಂಬುದನ್ನು ತಿಳಿದು ಮದರಾಸಿಗೆ ಹೊರಟುಹೋದರು. ಮುರಿಗೆಯ್ಯ ಯಥಾಪ್ರಕಾರ ಮಂಡಿ ಸೇರಬೇಕಾಯಿತು., ಆಫೀಸಿನ ಕಡೆ ಸುಳಿಯುವುದಕ್ಕೆ ಮಹಾದೇವಯ್ಯನಿಗೆ ಮುಖವಿಲ್ಲದೆ ಹೋಯಿತು.

'ಶ್ರೀರಾಮ ಪಾದುಕಾ ಪಟ್ಟಾಭಿಷೇಕ' ಸರೋಜನಿಗೆ ಚಿತ್ರ ಪ್ರಪಂಚದಲ್ಲಿ ಉತ್ತಮ ಸ್ಥಾನ ಗಳಿಸಿಕೊಟ್ಟು ಅವಳನ್ನು ನಕ್ಷತ್ರ (Star) ಮಾಲೆಗೆ ಸೇರಿಸಿತು. ತನ್ನ ಸಮಸ್ತ ಯಶಸ್ಸಿಗೂ ಸುದರ್ಶನರ ಆಶೀರ್ವಾದವೇ ಕಾರಣವೆನ್ನುವುದನ್ನು ಅವಳು ಮರೆಯಲಿಲ್ಲ.

ಸಾಹುಕಾರರು ತೆಪ್ಪಗೆ ಕುಳಿತುದನ್ನು ನೋಡಿ ಚಿನ್ನಪ್ಪನಿಗೆ ವ್ಯಸನವಾಯಿತು. ಸರೋಜನಂಥ ಕಲಾವಿದೆಯನ್ನು ಕೈಯಲ್ಲಿಟ್ಟುಕೊಂಡು ಸಾಹುಕಾರರು ಸುಮ್ಮನಿರುವರಲ್ಲಾ ಎಂದು ಒಂದು ದಿನ

"ಎಣ್ಣೆ ಬಂದಾಗ ಕಣ್ಣು ಮುಚ್ಚಿಕೊಂಡ ಹಾಗಾಯಿತಲ್ಲಾ ಸ್ವಾಮಿ ನಮ್ಮ ಪಾಡು."

"ಏನಾಯಿತೋ ಚಿನ್ನಪ್ಪ."

"ನಮ್ಮ ಚಿತ್ರಕ್ಕೆ ಹೆಸರೂ ಬಂತು – ಕಾಸೂ ಬಂತು. ಎಲ್ಲಾರ ಬಾಯಲ್ಲೂ ಸರೋಜಮ್ಮನ ಮಾತು – ಹಾಡು. ಆಕೆ ಕೈಯಲ್ಲಿ ನಾವು ಇನ್ನೊಂದು ಪಿಕ್ಚರ್ ಮಾಡಿಸಬೇಡವೇ?"

"ನಾನೇನು ಸುಮ್ಮನಿಲ್ಲ ಚಿನ್ನಪ್ಪ. ಆ ವಿಷಯ ಯೋಚನೆ ಮಾಡಿದ್ದೇನೆ. ಈ ಸಾರೆ ಸಾಮಾಜಿಕ ಚಿತ್ರ ತೆಗೆಯೋಣ ಎಂದು ನಿರ್ಧರಿಸಿಯೂ ಇದ್ದೇನೆ. ಕನ್ನಡ, ತಮಿಳು, ಹಿಂದಿ – ಏನನ್ನುತ್ತೀ?"

"ಸೊಗಸಾಗಿದೆ ಯೋಚನೆ. ಕಥೆ ಬರೆಯುವುದಕ್ಕೆ ಮಹಾದೇವಯ್ಯ, ಡೈರೆಕ್ಷನ್ನಿಗೆ ಭೂಪೆನ್ ಬಾಬು, ಪ್ರಧಾನ ಪಾತ್ರಕ್ಕೆ ಶಿವಾನಂದರು ತಾನೇ!"

"ಅವರ ಸುದ್ದಿ ಎತ್ತಬೇಡ ಚಿನ್ನಪ್ಪ. ಸುದರ್ಶನರ ಮನೆಗೆ ಹೋಗೋಣ. ಅವರು ಹೇಗೆ ಹೇಳಿದರೆ ಹಾಗೆ ಮಾಡೋಣ. ಈ ಸಲ ಅವರ ಮಾತು ನಾನು ಚಾಚೂ ತಪ್ಪುವುದಿಲ್ಲ."

"ಅವರು ಬರಬೇಕಲ್ಲ!"

"ನಾನು ಬಿಡಬೇಕಲ್ಲ. ಅವರ ಮನೆ ಮುಂದೆ ಸತ್ಯಾಗ್ರಹ ಮಾಡಿಬಿಡುತ್ತೇನೆ."

ಸಾಹುಕಾರರಲ್ಲಿ ಆದ ವಿವೇಕೋದಯ ಕಂಡು ಚಿನ್ನಪ್ಪನಿಗೆ ಪರಮ ಸಂತೋಷವಾಯಿತು.

---